


ನೆಮ್ಮದಿಯ ನಾಳೆ ನಮ್ಮದು

# ಹೊಸತು



ಸೆಪ್ಟಂಬರ್ ೨೦೦೨

ಬೆಲೆ : ರೂ. ೧೦

## ದ್ವೀಪ - ಬದುಕಿನ ಭರವಸೆಯ ಸಂಕೇತ

# ನಮ್ಮ ಇತ್ತೀಚಿನ ಪ್ರಕಟಣೆಗಳು .....




ರೂ. 60-00




ರೂ. 105-00




ರೂ. 115-00




ರೂ. 30-00




ರೂ. 50-00




ರೂ. 55-00

ಸುಲಭ ಬೆಲೆಯ ಉತ್ತಮ ಪುಸ್ತಕಗಳು

ಎಲ್ಲಾ ಪುಸ್ತಕ ಮಳಿಗೆಗಳಲ್ಲಿ ಲಭ್ಯ




ರೂ. 70-00




ರೂ. 95-00




ರೂ. 75-00







ರೂ. 80-00

ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

ಹಾಲ್ ನಂ. 1, ಬಿ.ಡಿ.ಎ. ವಾಣಿಜ್ಯ ಸಂಕೀರ್ಣ, ಬನಶಂಕರಿ ಎರಡನೇ ಹಂತ

ಬೆಂಗಳೂರು - 560 070 ದೂರವಾಣಿ / ಫ್ಯಾಕ್ಸ್: 6711994




ರೂ. 100-00

# ಹೊಸತು

## ಒಳಗೇನಿದೆ.....




*ಚಿತ್ರಗಳು : ಪಿ. ಮಹಮ್ಮದ್, ವಸಂತ ಹೊಸಬೆಟ್ಟು , ಬಿ. ವಿಲ್ಸನ್, ಜಿ. ಎಂ. ಬೊಮ್ನಳ್ಳಿ ಮೋನಪ್ಪ , ಶ್ರೀಹರಿ, ಸತೀಶ್ ಯಲ್ಲಾಪುರ, ಕೆ. ಎಸ್. ಶಾಸ್ತ್ರೀ*
*ಮುಖಚಿತ್ರ : ದ್ವೀಪ ಚಿತ್ರದಲ್ಲಿ ವಾಸುದೇವರಾವ್*
*ವಿನ್ಯಾಸ : ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


## ಈ ತಿಂಗಳು

ದೇಶದಲ್ಲಿ ಬರಗಾಲ ಪರಿಸ್ಥಿತಿ ತೀವ್ರವಾಗಿದೆ. ಅದಕ್ಕೆ ಪರಿಹಾರ ಕ್ರಮಗಳನ್ನು ಧಾರಾಳವಾಗಿ ಘೋಷಿಸಲಾಗಿದೆ. ಅವು ಎಷ್ಟರಮಟ್ಟಿಗೆ ಕಾರ್ಯಗತವಾಗಿ ಜನಕ್ಕೆ ಸ್ವಲ್ಪ ಜೀವ ತುಂಬುತ್ತವೆ ಎಂಬುದನ್ನು ಜನರ ನೇರವಾದ ಭಾಗವಹಿಸುವಿಕೆ ಮಾತ್ರವೇ ನಿರ್ಧರಿಸುತ್ತದೆ. ಬರಗಾಲದಲ್ಲೂ ನಮ್ಮ ರಾಜ್ಯದಲ್ಲಿ ಸಾಧನೆಗಳಿಗೆ ಬರವಿಲ್ಲ, ಮಂಕುದಿಣ್ಣೆಗಳ ಸಂತೆಗೂ ಬರವಿಲ್ಲ. ಉದಾಹರಣೆಗೆ, ಶ್ರೀ ಗಿರೀಶ್ ಕಾಸರವಳ್ಳಿಯವರು ತಮ್ಮ 'ದ್ವೀಪ'ಕ್ಕೆ ಸ್ವರ್ಣ ಕಮಲ ಪಡೆದಿದ್ದಾರೆ. ಇದು ಅವರಿಗೆ ನಾಲ್ಕನೆಯದು. ''ಏಕಸ್ವಾಮ್ಯವನ್ನು ವಿರೋಧಿಸುತ್ತೇವಾದರೂ ನೀವು ಏಳನೆಯ ಸ್ವರ್ಣಕಮಲ ಪಡೆದಾಗಲೂ ನಿಮಗೆ ಹಾರ್ದಿಕ ಅಭಿನಂದನೆ ಸಲ್ಲಿಸಲು ಹರ್ಷಿಸುತ್ತೇವೆ'' ಎಂದು ಈಚೆಗೆ 'ಹೊಸತು' ಪರವಾಗಿ ಅವರನ್ನು ಭೇಟಿ ಮಾಡಿದಾಗ ಶ್ರೀ ಸುರೇಂದ್ರ ಹೇಳಿದ್ದು ನಮ್ಮೆಲ್ಲರ ಅಭಿಪ್ರಾಯ. ಮಾನ್ಯ ಗಿರೀಶ್ ಅವರಿಗೆ 'ಹೊಸತು' ಬಳಗ ಅಭಿನಂದನೆ ಸಲ್ಲಿಸುತ್ತದೆ. ಈ ಬಳಗದಲ್ಲಿ ನಮ್ಮ ಓದುಗರೂ ಸೇರಿದ್ದಾರೆ. ಕಳೆದ ತಿಂಗಳು ಮ್ಯಾಂಚೆಸ್ಟರ್‌ನಲ್ಲಿ ನಡೆದ ಕಾಮನ್‌ವೆಲ್ತ್ ಕ್ರೀಡಾಕೂಟದಲ್ಲಿ ನಮ್ಮ ರಾಜ್ಯದ ಅನೇಕ ಕ್ರೀಡಾಪಟುಗಳು ಹೆಮ್ಮೆಯ ಸಾಧನೆ ಗೈದಿದ್ದಾರೆ. ಈ ಬಾರಿ ನಮ್ಮ ರಾಷ್ಟ್ರದ ಹೆಸರು ಪದಕಗಳ ಪಟ್ಟಿಯಲ್ಲಿ ಸ್ವಲ್ಪ ಮೇಲೆ ಬರುವಂತೆ ಮಾಡಿದ ಎಲ್ಲ ಕ್ರೀಡಾಪಟುಗಳಿಗೂ ನಮ್ಮ ಅಭಿನಂದನೆಗಳು. ಪದಕ ಗಳಿಸಲು ತಾನೇ ಕಾರಣಕರ್ತೆ ಎಂದು ಉಮಾ ಭಾರತಿ ಭಾವಿಸಿಕೊಂಡರೆ ನಮ್ಮದೇನೂ ಅಡ್ಡಿಯಿಲ್ಲ. ಪ್ರಪಂಚವೇ ಮಾಯೆಯೆಂದು ಹೇಳುವ ಸಂಪ್ರದಾಯಕ್ಕೆ ಸೇರಿದ ಈಕೆ ಸ್ವಲ್ಪ ಭ್ರಾಂತಿಯ ಗುಂಗಿನಲ್ಲಿದ್ದರೆ ಪ್ರಮಾದವೇನೂ ಇಲ್ಲ.

ಆದರೆ ರಾಮಕೃಷ್ಣ ಹೆಗಡೆಯವರ ರಾಜಕೀಯ ಸರ್ಕಸ್ ಮಾತ್ರ ಪ್ರಮಾದಗಳ ಹಿಮಾಲಯ ಎನ್ನುವಷ್ಟು ಅಗಾಧವಾದ್ದು. ಅವರ ''ಮೌಲ್ಯಾಧಾರಿತ'' ರಾಜಕಾರಣ ಈಗ ಬಹಿರಂಗವಾಗಿ ''ಮಲ್ಯಾಧಾರಿತ'' ರಾಜಕಾರಣವಾಗಿದೆ. ಮೌಲ್ಯ ಎಂದರೆ ಕ್ರಯ ಎಂಬರ್ಥವೂ ಇದೆ. ಇಂತಹ ಲೈಸೆನ್ಸಿಗೆ ಇಷ್ಟು ಕ್ರಯ, ಶಾಸಕನಾಗಬೇಕಾದರೆ ಇಷ್ಟು ಕ್ರಯ, ಸೊಸೈಟಿಗೆ ಪರವಾನಗಿ ಬೇಕಾದರೆ ಇಷ್ಟು ಕ್ರಯ, ಇತ್ಯಾದಿ. ಅದೇ ಮೌಲ್ಯಾಧಾರಿತ ರಾಜಕಾರಣ. ವಿಠಲ ಮಲ್ಯರ ಕಾಲದಿಂದ ಅದು ಹಾಗೇ ಇದ್ದಿತಾದರೂ ವಿಜಯ ಮಲ್ಯರ ಕಾಲದಲ್ಲಿ ಸಾರ್ವಜನಿಕವಾಗಿ ಘೋಷಿತವಾಗಿದೆ. ತಾನಿನ್ನೂ ರಾಜಕೀಯ ಮಾಂತ್ರಿಕನೆಂಬ ಹಮ್ಮು ಹೆಗಡೆಯವರಿಂದ ದೂರವಾಗಿಲ್ಲವಾದ್ದರಿಂದ ಮಲ್ಯರ ಕುದುರೆಗಳಂತೆ ತಾವೂ ರಾಜಕೀಯ ನಾಗಾಲೋಟದಲ್ಲಿ ಮತ್ತೆ ಮುಂದೆ ಸಾಗಬಹುದೆಂಬ ಒಣಪ್ರತಿಷ್ಠೆ ಅವರಲ್ಲಿದೆ. ಅದಕ್ಕಾಗಿ ಮಲ್ಯರ ಸಾರಥ್ಯವನ್ನು ಈ ಅರ್ಜುನ ಪಡೆದಿದ್ದಾನೆ. ಮಲ್ಯರ ಗೀತೋಪದೇಶದ ಕೊನೆಯಲ್ಲಿ ಅರ್ಜುನನಂತೆ ಇವರೂ ''ನೀನು ಹೇಳಿದಂತೆ ಮಾಡುತ್ತೇನೆ'' ಎಂಬ ಆಶ್ವಾಸನೆ ನೀಡುತ್ತಾರೆಂದು ನಿರೀಕ್ಷಿಸಬಹುದು. ಕರ್ನಾಟಕಕ್ಕೆ ಹೆಗಡೆಯವರ ಉಪದೇಶ ಯಾವತ್ತೂ ವಿಪುಲವಾಗಿ ಲಭ್ಯವಿದೆ, ಅದಕ್ಕೇನೂ ಬರವಿಲ್ಲ!

ವಿಧಾನಸೌಧದಲ್ಲಿ ಕೂತು ಅನೇಕರು ಎಂತೆಂತಹ ಪಾತಕಗಳಲ್ಲಿ ತೊಡಗುತ್ತಾರೆಂದು ನಮ್ಮ ರಾಜ್ಯದ ಜನಕ್ಕೆ ಆಗಾಗ ಅನುಭವ ಆಗುತ್ತಿರುತ್ತದೆ. ಈ ತಿಂಗಳು ಅಂತಹ ಒಂದು ಸಾಮೂಹಿಕ ಮಹಾಪಾತಕ ಬ್ಯಾಂಕ್ವೆಟ್ ಹಾಲಿನಲ್ಲಿ ಜರುಗಿದ್ದು ನೋಡಿ ಜನ ತಲೆ ತಗ್ಗಿಸಿದ್ದಾರೆ. ಸಾಂಗ್ಲಿಯಾನಾ, ಕಾರ್ತಿಕೇಯನ್, ಲೀಲಾದೇವಿ ಪ್ರಸಾದ್, ಮೋಟಮ್ಮ ಮುಂತಾದವರನ್ನು ಅಪರಾಧಿಗಳ ಸ್ಥಾನದಲ್ಲಿ ನಿಲ್ಲಿಸಬೇಕಾದ ಪ್ರಸಂಗ ಜರುಗಿ ನಾವು ಯಾವ ಶತಮಾನದಲ್ಲಿದ್ದೇವೆಂಬ ಪ್ರಶ್ನೆ ಮುಂದಾಗಿದೆ. ಮೊದಲನೆಯದಾಗಿ, ಇವರ ವಿಕಟ ಮೂರ್ಖತನದ ಪ್ರದರ್ಶನಕ್ಕೆ ವಿಧಾನಸೌಧ ಬಳಸಿಕೊಳ್ಳಲು ಅನುಮತಿ ನೀಡಿದ್ದು ಯಾರು ಮತ್ತು ಏಕೆ ? ಎರಡನೆಯದಾಗಿ, ಆ ಅಲೆಕ್ಸ್ ಆರ್ಬೈಟೋ ಎಂಬ ಫಿಲಿಪೈನ್ಸ್‌ನ ಖೋಟಾ ಚಿಕಿತ್ಸಕನಿಗೆ ವಿಧಾನಸೌಧದೊಳಗೆ ಮಂಗಾಟವಾಡಲು ಅವಕಾಶ ಕಲ್ಪಿಸಿಕೊಟ್ಟದ್ದು ಯಾರು ಮತ್ತು ಏಕೆ ? ಅವನ ಸ್ಪರ್ಶದಿಂದಲೇ ಇವರು ಮತ್ತು ಇವರಂಥ ಬೇರೆ ಹತ್ತಾರು ರೋಗಿಗಳು ಗುಣ ಹೊಂದಿದರಂತೆ. ಎಷ್ಟೋ ಜನರ ಹೊಟ್ಟೆಯೊಳಗಿನ ಗಡ್ಡೆಗಳನ್ನು ಶಸ್ತ್ರಚಿಕಿತ್ಸೆ ಮಾಡದೆಯೇ ಬರಿಗೈಯ್ಯಿಂದ ಆರ್ಬೈಟೋ ಹೊರತೆಗೆದನಂತೆ. ಇವರೆಲ್ಲರ ಮಿದುಳನ್ನು ಅದಕ್ಕೆ ಮುಂಚೆಯೇ ಅವನು ತೆಗೆದುಹಾಕಿದ್ದಿರಬೇಕು; ಇವರಿಗೆ ತಿಳಿಯಲಿಲ್ಲ, ಅಷ್ಟೆ. ಆರೋಗ್ಯ ಸಚಿವರು ಈ ಮಹಾಚಿಕಿತ್ಸಕನ ಪ್ರತಿಭೆಯನ್ನು ಅಗೋಚರ ಶಕ್ತಿಯ ಪ್ರಭಾವವೆಂದು ಬಣ್ಣಿಸಿದರಂತೆ. ಅವನನ್ನು ನಮ್ಮೆಲ್ಲ ಆಸ್ಪತ್ರೆಗಳಿಗೂ ಸಂದರ್ಶಕ ಚಿಕಿತ್ಸಕನನ್ನಾಗಿ ನೇಮಿಸಿ ಎಲ್ಲ ರೋಗಿಗಳಿಗೂ ಕಾಸಿಲ್ಲದೆ ಪರಿಹಾರ ಕೊಡಿಸುತ್ತೇನೆಂದು ಇವರು ಏಕೆ ಘೋಷಿಸಲಿಲ್ಲವೋ ತಿಳಿಯದು. ನಮ್ಮ ಹೈ-ಟೆಕ್ ಮುಖ್ಯಮಂತ್ರಿಗಳ ಮೂಗಿನಡಿಯಲ್ಲಿ ಏನೆಲ್ಲಾ ಘಟಿಸುತ್ತವೆ ! ಮೂಢನಂಬಿಕೆಗಳನ್ನು ಸಾಂದ್ರಗೊಳಿಸುವ ಯೋಜನೆಯನ್ನು ಇವರೇಕೆ ಹಮ್ಮಿಕೊಂಡರು ಮತ್ತು ವಿಧಾನಸೌಧವನ್ನೇಕೆ ಈ ಢೋಂಗಿ ಗಾರ್ದಭ ಚಿಕಿತ್ಸಕನಿಗೆ ಬಿಟ್ಟುಕೊಟ್ಟರು ? ಏನೇನೋ ಸಿ.ಬಿ.ಐ.ಗೆ ಒಪ್ಪಿಸಿ ಎನ್ನುವ ನಮ್ಮ ವಿರೋಧ ಪಕ್ಷಗಳ ಮೊದ್ದುಮಣಿಗಳೂ ಈ ವಿಧಾನಸೌಧದ

*೭ನೇ ಪುಟಕ್ಕೆ....*

ತಿಂಗಳ ಪತ್ರಿಕೆ

ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೪ ಸಂಚಿಕೆ - ೨ ಸೆಪ್ಟೆಂಬರ್ ೨೦೦೨



**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೨೬

**ಹೊಸತು ಕಚೇರಿಯ ವಿಳಾಸ**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
e-mail : nkp@bgl.vsnl.net.in



## ಪತ್ರಿಕಾ ಮಾಧ್ಯಮದ ವಿದೇಶೀಕರಣ

ನಮ್ಮ ಸ್ವಾತಂತ್ರ್ಯ ಸಮರದ ಕನಸುಗಳು, ಮೌಲ್ಯಗಳಿಗೆ ಕಳೆದ ಎರಡು ದಶಕಗಳ ಅವಧಿಯಲ್ಲಿ ಒಂದಾದ ಮೇಲೊಂದರಂತೆ ಆಘಾತಗಳು ಸಂಭವಿಸುತ್ತಿವೆ. ಉದಾರೀಕರಣ, ನೂತನ ಆರ್ಥಿಕ ನೀತಿಗಳ ಹೆಸರಿನಲ್ಲಿ ನರಸಿಂಹರಾವ್-ಮನಮೋಹನ್ ಜೋಡಿ ರಾಷ್ಟ್ರದ ಆರ್ಥಿಕತೆಯೊಡನೆ ಚೆಲ್ಲಾಟವಾಡಿದ್ದಾಗಿದೆ. ಅದೇ ನೀತಿಗಳನ್ನು ಇನ್ನೂ ತೀವ್ರತೆಯಿಂದ ಮುಂದುವರಿಸಿಕೊಂಡು ಬಂದಿರುವ ಭಾರತೀಯ ಜನತಾ ಪಕ್ಷದ ನೇತೃತ್ವದಲ್ಲಿ ಕೇಂದ್ರದ ಸಮ್ಮಿಶ್ರ ಸರಕಾರ ತನ್ನ ವರ್ಗ ಧೋರಣೆಗೆ ಅನುಸಾರವಾಗಿ, ಇಡೀ ಜಗತ್ತಿನಲ್ಲಿ ಭಾರತದ ಘನತೆಯನ್ನು ಎತ್ತಿಹಿಡಿದಿದ್ದ ಹಾಗೂ ಪರಂಪರಾನುಗತವಾಗಿ ಬಂದಿದ್ದ ಆರ್ಥಿಕ ಸ್ವಾವಲಂಬನೆ ಮತ್ತು ಅಲಿಪ್ತ ನೀತಿಗಳೆಂಬ ಮೌಲ್ಯಗಳನ್ನು ಕ್ಲಿಂಟನ್, ಆನಂತರ ಜಾರ್ಜ್ ಬುಷ್ ಅವರ ಬೂಟುಗಳಡಿ ತಳ್ಳಿಹಾಕಿದೆ. ಫ್ಯಾಸಿಸ್ಟ್ ಕೋಮುವಾದವನ್ನು ಹುಟ್ಟುಹಾಕಿದೆ. ಅಮೆರಿಕನ್ ಸಾಮ್ರಾಜ್ಯಶಾಹಿಗಳು ಹಸ್ತಕ್ಷೇಪ ಮಾಡದ ಕ್ಷೇತ್ರವಾವುದೂ ಇಂದು ನಮ್ಮಲ್ಲಿಲ್ಲ. ಪೆಪ್ಸಿ, ಕೋಕೊಕೋಲಾ, ಎನ್ರಾನ್ ಹಾಗಿರಲಿ, ಅಮೆರಿಕಾದ ಫೆಡರಲ್ ಪೊಲೀಸ್ ಸಂಸ್ಥೆ ತನ್ನ ಕಛೇರಿಯನ್ನು ದೆಹಲಿಯಲ್ಲಿ ತೆರೆಯಲು ಅವಕಾಶ ಮಾಡಿಕೊಟ್ಟಿರುವ ವಾಜಪೇಯಿ-ಅದ್ವಾನಿ-ಫರ್ನಾಂಡಿಸ್ ತ್ರಯರು ಪ್ಯಾಲೆಸ್ಟೈನ್, ಡಿಯಾಗೊ ಗಾರ್ಸಿಯಾ ನೆಲೆ, ಇಂತಹ ಗಂಭೀರ ಸಮಸ್ಯೆಗಳ ಬಗ್ಗೆ ಚಕಾರ ಎತ್ತದ ಜಾಣ ಮೌನಿಗಳಾಗಿದ್ದಾರೆ. ದೇಶದ ರಕ್ಷಣಾ ಕ್ಷೇತ್ರದಲ್ಲಿಯೂ ಖಾಸಗೀಕರಣ ಹೆಜ್ಜೆ ಇಟ್ಟಿರುವ ಹಿನ್ನೆಲೆ ಎಲ್ಲರಿಗೂ ಅರ್ಥವಾಗುವಂಥದ್ದೇ.

ಯಾವುದೇ ಪ್ರಜಾಪ್ರಭುತ್ವ ವ್ಯವಸ್ಥೆಯಾಗಲಿ, ಸಮರ್ಥವಾಗಿ, ಜನಪರವಾಗಿ ಕಾರ್ಯ ನಿರ್ವಹಿಸಬೇಕಾದರೆ ಕಾರ್ಯಾಂಗ, ಶಾಸಕಾಂಗ ಮತ್ತು ನ್ಯಾಯಾಂಗಗಳ ಜೊತೆಗೆ ಪತ್ರಿಕಾ ಮಾಧ್ಯಮವೂ ನಾಲ್ಕನೆಯ ಅಂಗವಾಗಿ ತನ್ನ ಪಾತ್ರವನ್ನು ನಿಷ್ಪಕ್ಷಪಾತವಾಗಿ ವಹಿಸಬೇಕೆಂದು ೧೮ನೇ ಶತಮಾನದಲ್ಲಿಯೇ ಇಂಗ್ಲೆಂಡಿನ ಎಡ್ಮಂಡ್ ಬರ್ಕ್ ಎಂಬ ರಾಜಕೀಯ ಧುರೀಣ, ಚಿಂತಕ ಅರ್ಥೈಸಿದ್ದ. ಆ ಮಾತುಗಳು ಇಂದಿಗೂ ಪ್ರಸ್ತುತತೆಯನ್ನು ಕಳೆದುಕೊಂಡಿಲ್ಲ.

ಈ ನಿಟ್ಟಿನಲ್ಲಿ ಇದೀಗ ಕೇಂದ್ರದ ವಾರ್ತಾ ಮತ್ತು ಪ್ರಸಾರ ಇಲಾಖೆ ಮಂತ್ರಿ ಸುಷ್ಮಾ ಸ್ವರಾಜ್ ದೇಶದ ಪತ್ರಿಕಾ ಮಾಧ್ಯಮದ ಮೇಲೆ 'ಪೋಖ್ರಾನ್ ಮಾದರಿಯ ಬಾಂಬು' ಸಿಡಿಸಿದ್ದಾರೆ. ರಾಷ್ಟ್ರದ ಹಿತಾಸಕ್ತಿಯಲ್ಲಿ, ಪತ್ರಿಕಾ ಮಾಧ್ಯಮ ಯಾವತ್ತಿಗೂ ವಿದೇಶಿಯರ ಒಡೆತನಕ್ಕೆ ಒಳಗಾಗಬಾರದೆಂಬ ಮಹತ್ವದ ತೀರ್ಮಾನವನ್ನು ೧೯೫೫ರಲ್ಲಿಯೇ ಜವಹರಲಾಲ್ ನೆಹರು ಅವರ ಮಂತ್ರಿಮಂಡಲ ತೆಗೆದುಕೊಂಡಿತ್ತು. ಅದಕ್ಕೆ ದೇಶದಲ್ಲಿ ಮಾನ್ಯತೆಯೂ ದೊರೆತಿತ್ತು. ಈಗ ಅದಕ್ಕೆ ವಿರುದ್ಧವಾಗಿ ಪತ್ರಿಕಾ ಮಾಧ್ಯಮದಲ್ಲಿ ಶೇ. ೨೬ರಷ್ಟು ಮತ್ತು ವೈಜ್ಞಾನಿಕ ಮತ್ತಿತರ ಸುದ್ದಿಯೇತರ ವ್ಯವಹಾರಗಳಲ್ಲಿ ಶೇ. ೭೪ರಷ್ಟು ಬಂಡವಾಳ ಹೂಡಲು ವಿದೇಶಿಯರಿಗೆ ಅವಕಾಶ ಮಾಡಿಕೊಡುವ 'ಐತಿಹಾಸಿಕ' ತೀರ್ಮಾನವನ್ನು ವಾಜಪೇಯಿ ಸರಕಾರ ತೆಗೆದುಕೊಂಡು ರಾಷ್ಟ್ರಕ್ಕೆ ದ್ರೋಹ ಬಗೆದಿದೆ. ಪತ್ರಿಕೆಗಳು, ಸುದ್ದಿ ಮಾಧ್ಯಮಗಳನ್ನು ಕೇವಲ ಮಾರಾಟದ ಸರಕುಗಳನ್ನಾಗಿಸಿ ಹರಾಜಿಗಿಟ್ಟಿರುವ ಸರಕಾರದ ಉದ್ದೇಶಗಳು ಏನೆಂಬುದನ್ನು ಆಳವಾಗಿ ವಿಮರ್ಶಿಸಬೇಕಾಗಿದೆ.

ಮಾಧ್ಯಮಕ್ಕೆ ಸಂಬಂಧಪಟ್ಟಂತೆ ೪೭ ವರುಷಗಳಿಂದಲೂ ಅನುಸರಿಸಿಕೊಂಡು ಬಂದ ನೀತಿಯನ್ನು ಬದಲಾಯಿಸಲು ಈ ಹಿಂದೆಯೇ ಹಲವು ಬಾರಿ ಪ್ರಯತ್ನಿಸಲಾಗಿತ್ತು. ಕಳೆದ ವರುಷ ಸುಷ್ಮಾ ಅವರು ಹೇಳಿಕೆಯನ್ನಿತ್ತು ೧೯೫೫ರ ತೀರ್ಮಾನದಲ್ಲಿ ಯಾವ ಬದಲಾವಣೆಯನ್ನೂ ತರುವ ಪ್ರಶ್ನೆಯೇ ಇಲ್ಲವೆಂದಿದ್ದು ಜನತೆ ಮರೆತಿಲ್ಲ. ಸರಕಾರದ ಕೆಲವು ಮಿತ್ರ ಪಕ್ಷಗಳು ಮತ್ತಿತರ ರಾಜಕೀಯ ಪಕ್ಷಗಳು, ಕಾರ್ಮಿಕ ಸಂಘಟನೆಗಳು ಮತ್ತು ಭಾರತೀಯ ಪತ್ರಿಕಾ ಸಂಸ್ಥೆಯ ವಿರೋಧವನ್ನು ಕಡೆಗಣಿಸಿ ಇದೀಗ ಸರಕಾರ ದಿಢೀರನೆ ತೆಗೆದುಕೊಂಡ ತೀರ್ಮಾನ ನಿಜಕ್ಕೂ ಸಂಶಯಾತ್ಮಕವಾಗಿದೆ. ರಾಮ ನಾಯಕರು ತಮ್ಮ ಪಕ್ಷದವರಿಗೆ ನೀಡಿದ ಬಳುವಳಿಗೆ ಸಮನಾಗಿ ಸುಷ್ಮಾ ಸಹ ನೀಡಿದ್ದಾರೆಯೇ ಎಂಬುದರ ತನಿಖೆ ಅಗತ್ಯವಾಗಿದೆ.

ಈ ಬೆಳವಣಿಗೆಗಳಿಗೆ ಒಂದು ಅಂತರರಾಷ್ಟ್ರೀಯ ಆಯಾಮವೂ ಇದೆ. ೧೯೪೭ರಿಂದಲೂ ಭಾರತ ಅನುಸರಿಸಿಕೊಂಡು ಬಂದಿದ್ದ ಸ್ವತಂತ್ರ ವಿದೇಶಾಂಗ ನೀತಿ, ಅಲಿಪ್ತತೆ, ಆರ್ಥಿಕ ಸ್ವಾವಲಂಬನೆ, ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳಿಗೆ ನೀಡುತ್ತಿದ್ದ ಆದ್ಯತೆ – ಇವುಗಳನ್ನು ಕೆಂಗಣ್ಣಿನಿಂದಲೇ ನೋಡುತ್ತಿದ್ದ ಅಮೆರಿಕಾ ಮತ್ತು ಇತರ ಸಾಮ್ರಾಜ್ಯಶಾಹಿ ದೇಶಗಳು ಇಲ್ಲಿನ ಜನಸಾಮಾನ್ಯರ ಮೇಲೆ ಪ್ರತಿಗಾಮಿ ಭಾವನೆಗಳನ್ನು ಹೇರಲು ರೇಡಿಯೋ, ದಿನಪತ್ರಿಕೆಗಳು ಮತ್ತು ನಿಯತಕಾಲಿಕಗಳನ್ನು ಬಳಸುತ್ತಿದ್ದದ್ದು, ಈಗಲೂ ಬಳಸುತ್ತಿರುವುದು ಗುಟ್ಟೇನೂ ಅಲ್ಲ. ಅಲ್ಲದೆ ಟೈಮ್, ದಿ ಇಂಟರ್‌ನ್ಯಾಷನಲ್ ಹೆರಾಲ್ಡ್ ಟ್ರಿಬ್ಯೂನ್, ಫೈನಾನ್ಶಿಯಲ್ ಟೈಮ್ಸ್ ಎಂಬ ಪತ್ರಿಕೆಗಳು ಹಾಗೂ ಇತರ ಪತ್ರಿಕಾ ಸಂಸ್ಥೆಗಳು ಭಾರತದಲ್ಲಿ ಕಾಲಿರಿಸಲು ಪ್ರಯತ್ನಿಸುತ್ತಿದ್ದದ್ದು ಎಲ್ಲರಿಗೂ ತಿಳಿದ ವಿಷಯ. (ಪಿ. ಎಲ್. ೪೮೦ ಎಂಬ ಸಾಲದ ಯೋಜನೆಯ ನೆಪದಲ್ಲಿ ಅಮೆರಿಕಾ ಎಷ್ಟೋ ಮುಗ್ಧ ಭಾರತೀಯರನ್ನು ತನ್ನೆಡೆಗೆ ಸೆಳೆಯಲು ಪ್ರಯತ್ನಿಸಿದ್ದನ್ನೂ ಈ ಪಟ್ಟಿಗೆ ಸೇರಿಸಬಹುದು). ಇವುಗಳೊಂದಿಗೆ ರಾಯಿಟರ್ಸ್, ಅಸೋಸಿಯೇಟೆಡ್ ಪ್ರೆಸ್, ಯುನೈಟೆಡ್ ಪ್ರೆಸ್ ಮುಂತಾದವೂ ಇವೆ. ಸಮಾಜವಾದಿ ರಾಷ್ಟ್ರಗಳ ವಿರುದ್ಧ, ಅಲಿಪ್ತ ರಾಷ್ಟ್ರಗಳ ವಿರುದ್ಧ, ಎಲ್ಲ ಪ್ರಗತಿಪರ ಚಳುವಳಿಗಳ ವಿರುದ್ಧ ಈ ಮಾಧ್ಯಮಗಳು ನಡೆಸಿದ ಅಪಪ್ರಚಾರ ಜಗಜ್ಜನಿತವಾಗಿದೆ. ವಿದೇಶಿ ಮಾಧ್ಯಮಗಳಿಂದ ಉಂಟಾಗುವ ಪರಿಣಾಮ ಭಯಾನಕ. ಅವು ದೇಶಕ್ಕೆ ಕಾಲಿಟ್ಟಿದ್ದೇ ಆದಲ್ಲಿ ತೀವ್ರ ಪೈಪೋಟಿ, ಲೈಂಗಿಕ ವಿಷಯಗಳಿಗೆ ಒತ್ತು, ಇವುಗಳಿಂದಾಗಿ ನಮ್ಮ ಜನಪರ ಸಂಸ್ಕೃತಿ ನಾಶವಾಗುವ ಸಾಧ್ಯತೆಗಳಿವೆ. ಟ್ಯಾಬ್ಲಾಯ್ಡ್ ಸಂಸ್ಕೃತಿಯಿಂದ ಪಶ್ಚಿಮ ರಾಷ್ಟ್ರಗಳೇ ತತ್ತರಿಸುತ್ತಿರುವಾಗ ನಾವೇನು ? ಇದೊಂದು ''ಸಾಮ್ರಾಜ್ಯಶಾಹಿ ವಾರ್ತಾ ಆಕ್ರಮಣ''ವಾಗಿ ಪರಿಣಮಿಸುತ್ತದೆ. ಇಂದಿಗೂ ಎಷ್ಟೋ ಪಶ್ಚಿಮ ರಾಷ್ಟ್ರಗಳೇ ತಮ್ಮ ಹಿತಾಸಕ್ತಿಯ ಪ್ರಶ್ನೆ ಬಂದಾಗ ಸುದ್ದಿ ಮಾಧ್ಯಮದಲ್ಲಿ ವಿದೇಶಿ ಬಂಡವಾಳ ಹೂಡಿಕೆಯನ್ನು ವಿರೋಧಿಸುತ್ತವೆ. ಈ ಕಾರಣದಿಂದಲೇ ವಸಾಹತುಶಾಹಿಯಿಂದ ಬಿಡುಗಡೆ ಹೊಂದಿದ ರಾಷ್ಟ್ರಗಳು, ಹಿಂದುಳಿದ ರಾಷ್ಟ್ರಗಳು ಹಾಗೂ ಸಮಾಜವಾದಿ ರಾಷ್ಟ್ರಗಳು ಅಂದೇ ಹೊಸ ಜಾಗತಿಕ ಆರ್ಥಿಕ ನೀತಿಯ ಬೇಡಿಕೆಯ ಜೊತೆಜೊತೆಗೇ ಹೊಸ ಜಾಗತಿಕ ವಾರ್ತಾ ಮತ್ತು ದೂರಸಂಪರ್ಕ ವ್ಯವಸ್ಥೆಯನ್ನು ಸ್ಥಾಪಿಸಲು ಹೋರಾಡಿದ್ದು, ಭಾರತವು ವಿದೇಶಿ ಮಾಧ್ಯಮ ದೈತ್ಯರಿಗೆ ಇಲ್ಲಿ ಕಾಲಿರಿಸಲು ಅವಕಾಶ ನೀಡದೆ ಸ್ವತಂತ್ರ ಮಾಧ್ಯಮ ನೀತಿಯನ್ನು ಅನುಸರಿಸಿದ್ದು.

ಜಾಗತೀಕರಣ, ಉದಾರೀಕರಣಗಳ ಪ್ರಕ್ರಿಯೆಯಿಂದಾಗಿ ಮಾರುಕಟ್ಟೆ ಎಂಬುದು ನಮ್ಮ ರಾಷ್ಟ್ರ ಜೀವನದ ಎಲ್ಲ ಸ್ತರಗಳನ್ನೂ ಆಕ್ರಮಿಸಿಕೊಂಡುಬಿಟ್ಟಿದೆ. ಲಾಭ, ಸ್ವಾರ್ಥ, ಲಂಚಗುಳಿತನ ''ಜನಗಣಮನ''ವಾಗಿವೆ. ಇದನ್ನು ಕಿತ್ತುಹಾಕಬೇಕೇ ವಿನಾ ಬಲಗೊಳಿಸುವುದು ನಮ್ಮ ನೀತಿಯಾಗಬಾರದು.

ಪತ್ರಿಕಾ ಮಾಧ್ಯಮ ಮತ್ತು ವಿದೇಶಿ ಬಂಡವಾಳ ಹೂಡಿಕೆಗೆ ಸಂಬಂಧಪಟ್ಟ ಚರ್ಚೆ ಎರಡು ಪ್ರಶ್ನೆಗಳಿಗೆ ಎಡೆಮಾಡಿ ಕೊಡುತ್ತದೆ. ಮಾಧ್ಯಮ ಎಂಬುದು ಸರಕೇ ? ಅಥವಾ ಸಮಾಜದ ಬದಲಾವಣೆಗಾಗಿ ಬಳಸುವ ಒಂದು ಸಾಧನವೇ ?

ಭಾರತದಲ್ಲಿ ಪತ್ರಿಕಾ ಮಾಧ್ಯಮದ ಇತಿಹಾಸಕ್ಕೆ ಕೆಲವು ಮಗ್ಗಲುಗಳಿವೆ. ಇಂದಿನ ಸಂದರ್ಭದಲ್ಲಿ ಅವುಗಳ ವಿಮರ್ಶೆ ಅತ್ಯಗತ್ಯವೆನಿಸುತ್ತದೆ. ಸ್ವಾತಂತ್ರ್ಯ ಹೋರಾಟದ ದಿನಗಳಲ್ಲಿ ರಾಷ್ಟ್ರದ ಪ್ರಮುಖ ಪತ್ರಿಕೆಗಳು ಬಂಡವಳಿಗರ, ಗುತ್ತೇದಾರಿ ಕಂಪೆನಿಗಳ ಒಡೆತನದಲ್ಲಿಯೇ ಇದ್ದವು, ಈಗಲೂ ಇವೆ. ಅವುಗಳಲ್ಲಿ ಬಹುಪಾಲು ಪತ್ರಿಕೆಗಳು ಹೋರಾಟದ ಭಾಗವಾಗಿ ತಮ್ಮ ದೇಶಪ್ರೇಮಿ ನಿಲುವುಗಳಿಂದ ಜನತೆಯನ್ನು ಸಂಘಟಿಸಿದ್ದು ಪ್ರಶಂಸನೀಯ. ಅದೇ ಕಾಲಘಟ್ಟದಲ್ಲಿ ಕಲ್ಕತ್ತಾದ 'ಸ್ಟೇಟ್ಸ್‌ಮನ್' ದಿನಪತ್ರಿಕೆ ಬ್ರಿಟಿಷರ ಪರ ನಿಲುವು ತಾಳಿತ್ತೆಂಬುದೂ ಚರಿತ್ರೆಯ ಒಂದು ಭಾಗ. ಪತ್ರಿಕೆಗಳ ಸಾಮಾಜಿಕ ಜವಾಬ್ದಾರಿಗಳು ವಿವಿಧ ರೀತಿಯವು. ರಾಷ್ಟ್ರದ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ವ್ಯವಹಾರಗಳಲ್ಲಿ ಸಂಭವಿಸುವ ಪ್ರತಿಯೊಂದು ಬೆಳವಣಿಗೆಯನ್ನೂ ಒರೆಗೆ ಹಚ್ಚಿ ಅದರ ಒಳಿತು ಕೆಡಕುಗಳ ಲಕ್ಷಣಗಳನ್ನು ಅವು ಜನರಿಗೆ ಪರಿಚಯಿಸಬೇಕಾಗುತ್ತದೆ. ರಾಷ್ಟ್ರದ ಐಕ್ಯತೆ, ಸಮಗ್ರತೆ ಮತ್ತು ಪ್ರಗತಿಯ ಮೂಲ ಪ್ರೇರಣೆಗಳಾಗಿ ಜನಜಾಗೃತಿ ಮೂಡಿಸುವಲ್ಲಿ ಮುಂಚೂಣಿಯಲ್ಲಿರಬೇಕಾದ್ದು ಅವುಗಳ ಆದ್ಯ ಕರ್ತವ್ಯ. ಎಂದೇ ಮಾಧ್ಯಮದ ಪಾತ್ರ ದೂರದರ್ಶನದ ಪಾತ್ರಕ್ಕಿಂತಲೂ ಭಿನ್ನ. ಕೇವಲ ರಂಜನೆಗಾಗಿ ಟಿ.ವಿ. ಹೆಚ್ಚು ಬಳಕೆಯಾಗುತ್ತದೆ. ಆದರೆ ಇಂದಿನ ಭಾರತೀಯ ಸಂದರ್ಭದಲ್ಲಿ ಸಂವಿಧಾನದ ಮೂಲೋದ್ದೇಶಗಳಾದ ರಾಷ್ಟ್ರದ ಐಕ್ಯತೆ, ಸಮಗ್ರತೆ, ಸ್ವಾವಲಂಬನೆ ಮತ್ತು ಮತನಿರಪೇಕ್ಷತೆ ಎಂಬ ಮೌಲ್ಯಗಳನ್ನು ರಕ್ಷಿಸುವಲ್ಲಿ ಪತ್ರಿಕಾ ಮಾಧ್ಯಮಕ್ಕೆ ಹೆಚ್ಚು ಜವಾಬ್ದಾರಿಯಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೆಚ್ಚು ಅರ್ಥಪೂರ್ಣವಾಗಿಸುವ ಮಹತ್ತರ ಪಾತ್ರವನ್ನು ಅದು ವಹಿಸಬೇಕಾಗಿದೆ, ಸಮಾಜವನ್ನು ಪ್ರಗತಿಯತ್ತ ಕೊಂಡೊಯ್ಯುವ ಸಾಧನವಾಗಬೇಕಾಗಿದೆ.

ಪತ್ರಿಕಾ ಮಾಧ್ಯಮ ಯಾವ ಸಂದರ್ಭದಲ್ಲಿ ಯಾವ ನಿಲುವು ತಾಳುತ್ತದೆಂಬುದು ಅವುಗಳ ಒಡೆತನ ಯಾರ ಕೈಯಲ್ಲಿದೆ, ಅವರ ವರ್ಗ ಧೋರಣೆ ಏನು ಎಂಬುದನ್ನು ಅವಲಂಬಿಸಿರುವುದೇ ಹೆಚ್ಚು. ಇತ್ತೀಚೆಗೆ ಗುಜರಾತಿನಲ್ಲಿ ಹಿಂದೂ ಕೋಮುವಾದಿಗಳು ಸಂಘಟಿಸಿದ ಹತ್ಯಾಕಾಂಡದ ಸಂದರ್ಭದಲ್ಲಿ ಪತ್ರಿಕೆಗಳ ಪಾತ್ರ ಅದ್ಭುತ. ಆದರೆ, ಇಲ್ಲೊಂದು ವಿಪರ್ಯಾಸವಿದೆ. ಹತ್ತು ಹನ್ನೆರಡು ವರುಷಗಳಿಂದಲೂ ಜಾಗತೀಕರಣ, ಉದಾರೀಕರಣದ ದಾಂಧಲೆ ಜರುಗುತ್ತಿದೆ. ಖಾಸಗೀಕರಣ ಅವ್ಯಾಹತವಾಗಿ ಸಾಗುತ್ತಿದೆ. ಆರ್ಥಿಕ ಪರಿಸ್ಥಿತಿ ಹದಗೆಟ್ಟಿದೆ. ಕಾರ್ಖಾನೆಗಳು ಮುಚ್ಚಿಹೋಗುತ್ತಿವೆ. ನಿರುದ್ಯೋಗ ಹೆಚ್ಚುತ್ತಿದೆ. ಹಲವಾರು ಕ್ಷೇತ್ರಗಳಲ್ಲಿ ಈಗಾಗಲೇ ಬಹುರಾಷ್ಟ್ರೀಯ ಕಂಪೆನಿಗಳು, ವಿದೇಶಿ ಬಂಡವಾಳಗಾರರು ನಮ್ಮ ಸಂಪನ್ಮೂಲಗಳನ್ನು ಕೊಳ್ಳೆಹೊಡೆಯುತ್ತಿದ್ದಾರೆ. ಜಾತಿ, ಕೋಮು ಘರ್ಷಣೆಗಳು ದಿನನಿತ್ಯದ ಮಾತಾಗಿವೆ. ಗುಜರಾತ್ ನರಮೇಧದ ಸಂದರ್ಭದಲ್ಲಿ ಗುಜರಾತಿನಲ್ಲಿ ಇಂಗ್ಲಿಷ್ ಮಾಧ್ಯಮ ವಹಿಸಿದ ಪಾತ್ರ ಪ್ರಶಂಸನೀಯವೆಂಬುದನ್ನು ಬಿಟ್ಟರೆ, ಈ ಎಲ್ಲ ಅನಿಷ್ಟ ಬೆಳವಣಿಗೆಗಳ ಬಗ್ಗೆ ಪತ್ರಿಕೆಗಳ ಪಾತ್ರ, ನಿಲುವು ಏನಿರಬೇಕಾಗಿತ್ತು, ಏನಿದೆಯೆಂಬುದರ ಬಗ್ಗೆ ಹೆಚ್ಚು ವಿವರಣೆ ಇಲ್ಲಿ ಅನಗತ್ಯ. ವಿದೇಶಿ ಬಂಡವಾಳ ಹೂಡಿಕೆ ಹೊಸ ಬೆಳವಣಿಗೆಯೇನೂ ಅಲ್ಲ. ಈಗಾಗಲೇ ರಕ್ಷಣೆ ಹಾಗೂ ಬೇರೆ ಅನೇಕ ಕ್ಷೇತ್ರಗಳಲ್ಲಿ ಅದಕ್ಕೆ ಸರಕಾರ ಅನುವುಮಾಡಿಕೊಟ್ಟಿದೆ. ಇದೇ ಪತ್ರಿಕೆಗಳು ಅದನ್ನು 'ತುಂಬು ಹೃದಯ'ದಿಂದ ಸ್ವಾಗತಿಸಿಯೂ ಆಗಿದೆ. ಇದೇ ಜನರು ಇಂದು ಸರಕಾರದ ತೀರ್ಮಾನವನ್ನು ವಿರೋಧಿಸುತ್ತಿದ್ದಾರೆ. ಇದು ಸಂದರ್ಭಸಾಧಕತನವಲ್ಲದೆ ಮತ್ತೇನು ? ವಿದೇಶಿ ಬಂಡವಾಳಕ್ಕೆ ನೆಲೆ ಮಾಡಿಕೊಟ್ಟು ದೇಶದಲ್ಲಿ ಒಂದು ಸಮಾನಾಂತರ ಪತ್ರಿಕಾ ಮಾಧ್ಯಮವನ್ನು ಸೃಷ್ಟಿಸುವುದು ಕೇಂದ್ರ ಸಮ್ಮಿಶ್ರ ಸರಕಾರದ ಹುನ್ನಾರ. ವಿದೇಶೀಯರು ಬಂಡವಾಳ ಹೂಡಿದರೂ ಸಂಪಾದಕೀಯ ಹಕ್ಕುಗಳು, ಪತ್ರಿಕೆಗಳ ನೀತಿಗಳು ಸ್ಥಳೀಯರದೇ ಆಗಿರುತ್ತದೆಂಬ ಸುಷ್ಮಾ ಸ್ವರಾಜರ ಮಾತುಗಳಲ್ಲಿ ಅರ್ಥವಿಲ್ಲ. ಎನ್ರಾನ್ ಕಂಪೆನಿಯನ್ನು ನಮ್ಮ ಸರ್ಕಾರಗಳು ಎಷ್ಟು ಹತೋಟಿಯಲ್ಲಿಟ್ಟುಕೊಳ್ಳಲು ಸಾಧ್ಯವಾಯಿತು, ಎನ್ರಾನ್ ಹೇಗೆ ಬಾಳ ಠಾಕ್ರೆಯ ಜೇಬುಗಳನ್ನು ಬಿಸಿಮಾಡಿತು ಎಂಬುದನ್ನು ಸುಷ್ಮಾ ಅವರಿಗೆ ನೆನಪಿಸಬೇಕಾಗಿದೆ. ಗುಜರಾತ್ ಗಲಭೆಯ ಸಂದರ್ಭದಲ್ಲಿ ಸಂಘ ಪರಿವಾರದ ಅಮಾನವೀಯ ಕೃತ್ಯಗಳನ್ನು ಬಯಲಿಗೆಳೆದ 'ದಿ ಹಿಂದೂ', 'ದಿ ಟೈಮ್ಸ್ ಆಫ್ ಇಂಡಿಯಾ' ಮತ್ತಿತರ ಪತ್ರಿಕೆಗಳನ್ನು ಹದ್ದುಬಸ್ತಿನಲ್ಲಿಡುವ ಉದ್ದೇಶವೂ ಸರಕಾರದ ಈ ತೀರ್ಮಾನದಲ್ಲಡಗಿದೆ. ಒಂದರ್ಥದಲ್ಲಿ ಭಾರತಕ್ಕೆ ವಿದೇಶಿಯರು ಬಂದು ತಮ್ಮ ಸಾಮ್ರಾಜ್ಯಶಾಹಿ ಪ್ರಚಾರವನ್ನು ಹೊಸದಾಗಿ ಪ್ರಾರಂಭಿಸಬೇಕಾದ ಅವಶ್ಯಕತೆಯೇ ಇಲ್ಲವೆನಿಸುತ್ತದೆ. ಡಾಲರ್ ಎಲ್ಲಿದ್ದರೂ ತನ್ನ ಪ್ರಭಾವವನ್ನು ಬೀರುತ್ತದೆ. ತನ್ನ ಏಜೆಂಟರುಗಳನ್ನು ತಾನೇ ಸೃಷ್ಟಿಸಿಕೊಳ್ಳುತ್ತದೆ. ಏಕೆಂದರೆ, ಈಗಾಗಲೇ ಅನೇಕ ಪತ್ರಕರ್ತರು, ಅಂಕಣಕಾರರು ಇದೇ ಸಾಮ್ರಾಜ್ಯಶಾಹಿಗಳ ಪರ ಜನಾಭಿಪ್ರಾಯವನ್ನು ಮೂಡಿಸುವ ನಿಟ್ಟಿನಲ್ಲಿ ಕಾರ್ಯತತ್ಪರರಾಗಿದ್ದಾರೆ. ಇದೇ ಜುಲೈ ೨೨ರ 'ದಿ ಹಿಂದೂ' ಪತ್ರಿಕೆಯಲ್ಲಿ ಅಂಕಣಕಾರ ರಾಜಮೋಹನ್ ಅಮೆರಿಕದ ಬಹುರಾಷ್ಟ್ರೀಯ ಕಂಪೆನಿ ಯೂನೋಕೋಲ್ ಪರವಾಗಿ ವಾದಿಸುತ್ತಾ ಭಾರತ, ಬಾಂಗ್ಲಾದೇಶ ಎರಡೂ ವ್ಯಾಪಾರಿ ಮನೋಭಾವವಿಲ್ಲದ, ಮುನ್ನೋಟವಿಲ್ಲದ ರಾಷ್ಟ್ರಗಳೆಂದು ನಿಂದಿಸಿರುವುದು ಇದಕ್ಕೆ ಒಂದು ಕುತೂಹಲಕಾರಿ ಉದಾಹರಣೆ.

ಒಟ್ಟಾರೆ ಟಿ.ವಿ., ಪತ್ರಿಕಾ ಮಾಧ್ಯಮಗಳನ್ನು ಮೀರಿ ರಾಷ್ಟ್ರದ ಸಮಸ್ಯೆಗಳ ಬಗ್ಗೆ, ಪ್ರಗತಿಯ ಬಗ್ಗೆ, ವಿದೇಶಿ ಬಂಡವಾಳ ಹೂಡಿಕೆಯಿಂದ ಸಂಭವಿಸುವ ರಾಷ್ಟ್ರ ವಿರೋಧಿ ಬೆಳವಣಿಗೆಗಳ ಬಗ್ಗೆ ಕಾಳಜಿ ಇರುವ ಜನ ವಿಭಾಗಗಳು ಇಂದಿನ ಇಡೀ ಪರಿಸ್ಥಿತಿಯ ಕುರಿತು ವಸ್ತುನಿಷ್ಠ ಧೋರಣೆಯನ್ನು ತಾಳಬೇಕಾಗಿದೆ. ಆಳುವ ವರ್ಗದ ಜನವಿರೋಧಿ ರಾಜಕೀಯ ಮತ್ತು ಆರ್ಥಿಕ ನೀತಿಗಳಿಂದಾಗಿ ಜನತೆ ಹತಾಶರಾಗಿದ್ದಾರೆ. ಕೋಮುವಾದದ ಕಾರ್ಯಸೂಚಿಯು ಆರ್ಥಿಕ ಯೋಜನೆಗಳನ್ನು ನೇಪಥ್ಯಕ್ಕೆ ತಳ್ಳಿದೆ. ಮನಸ್ಸುಗಳು ಒಡೆದಿವೆ. ನಮ್ಮ ಸಾರ್ವಭೌಮತ್ವ, ರಾಜಕೀಯ ಮತ್ತು ಆರ್ಥಿಕ ಕನಸುಗಳು ಅರ್ಥ ಕಳೆದುಕೊಳ್ಳುತ್ತಿವೆ. ಈಸ್ಟ್ ಇಂಡಿಯಾ ಕಂಪೆನಿ ಭಾರತದಲ್ಲಿ ಹೆಜ್ಜೆಯಿಟ್ಟ ನಂತರ ಮೂರ್ತಗೊಂಡ ಕಪ್ಪು ಇತಿಹಾಸ, ಗುಲಾಮಗಿರಿ ಈಗ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ, ವಿಶ್ವಬ್ಯಾಂಕ್ ಹಾಗೂ ವಿದೇಶಿ ಬಂಡವಾಳಗಾರರ 'ಸೌಜನ್ಯದಿಂದಾಗಿ' ಮರುಕಳಿಸಲಿದೆ. ಮುಂದಿನ ಚುನಾವಣೆಯಲ್ಲಿ ಗೆಲ್ಲಲಿ ಬಿಡಲಿ, ವಾಜಪೇಯಿ, ಅದ್ವಾನಿ, ಮುರಳಿ ಮನೋಹರ ಜೋಶಿ ಮತ್ತು ಫರ್ನಾಂಡಿಸರ ಪರಿವಾರ ಭಾರತದ ಖಜಾನೆಯನ್ನು ತೆರೆದಿಟ್ಟಿದೆ. ಯಾರಿಗೆ ಎಷ್ಟು ಪಾಲು ಎಂಬುದು ವಾಜಪೇಯಿ-ಬುಷ್‌ರ ನಿರ್ಧಾರಕ್ಕೆ ಬಿಟ್ಟದ್ದು !

ಸಾಮ್ರಾಜ್ಯಶಾಹಿಗಳ ಕುತಂತ್ರಗಳನ್ನು ಬಲ್ಲ, ಇತಿಮಿತಿಯಿಲ್ಲದ ಹಾಗೂ ಲಂಗು ಲಗಾಮಿಲ್ಲದ ವಿದೇಶಿ ಬಂಡವಾಳ ಹೂಡಿಕೆಯಿಂದ ಸಂಭವಿಸುವ ಆಘಾತಗಳ ಅರಿವು ಇರುವ ಎಲ್ಲ ದೇಶಪ್ರೇಮಿ ಶಕ್ತಿಗಳು ಒಂದಾಗಿ ರಾಷ್ಟ್ರ ರಕ್ಷಣೆಗಾಗಿ ಸಜ್ಜಾಗಬೇಕಾಗಿದೆ. ಆಗಸ್ಟ್ ೯ರ ''ಭಾರತ ಬಿಟ್ಟು ತೊಲಗಿ'' ದಿನಾಚರಣೆ ಇಂದು ಎಷ್ಟು ಅರ್ಥಪೂರ್ಣ !

- ಎಸ್. ಸುರೇಂದ್ರ







**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧ ☎ : ೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪ ☎ : ೪೨೪೮೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨ ☎ : ೨೪೩೦೨




ಆಗಸ್ಟ್ ತಿಂಗಳ 'ಹೊಸತು' ಸಂಚಿಕೆಯಲ್ಲಿ ಉಡುಪಿಯ ಅದಮಾರು ಶ್ರೀಪತಿ ಆಚಾರ್ಯ ಅವರು 'ಕುದುರೆಮುಖ ರಾಷ್ಟ್ರೀಯ ಉದ್ಯಾನ' ಯೋಜನೆಯ ಬಗ್ಗೆ ಶ್ರೀ ಲೋಕೇಶ ಅವರು ಬರೆದ ಲೇಖನಕ್ಕೆ ಪ್ರತಿಕ್ರಿಯೆ ವ್ಯಕ್ತಪಡಿಸುತ್ತ ನನ್ನ ಹೆಸರನ್ನು ಪ್ರಸ್ತಾಪಿಸಿರುವುದರಿಂದ ಈ ಪ್ರತಿಕ್ರಿಯೆ.

ಪರಿಸರವಾದಿ ಆಂದೋಲನದ ಜೊತೆಗೆ ಎಡಪಂಥೀಯರು ಯಾಕೆ ಶುರುಮಾಡಿಕೊಳ್ಳುತ್ತಿಲ್ಲ ಎಂಬ ನನ್ನ ಪ್ರಶ್ನೆ ಹಾಗೂ ಸ್ವಯಂಸೇವಾ ಸಂಸ್ಥೆಗಳ ಬಗೆಗೆ ಎಡಪಕ್ಷಗಳು ತಮ್ಮ ನಿಲುವನ್ನು ಮಾರ್ಪಡಿಸಿಕೊಳ್ಳ ಬೇಕಾದ ಅಗತ್ಯದ ಕುರಿತು ನನ್ನ ಅನಿಸಿಕೆ ಆಚಾರ್ಯರಿಗೆ ಅಪಥ್ಯವಾಗಿದೆ. ಇಂಥ ಅಭಿಪ್ರಾಯ ವ್ಯಕ್ತಪಡಿಸುವ ನನ್ನಂಥವರಿಗೆ ವಿಷಯದ ಪೂರ್ಣ ಪರಿಜ್ಞಾನವಿಲ್ಲ ಎಂಬ ತೀರ್ಮಾನಕ್ಕೆ ಆಚಾರ್ಯರು ಬಂದಿದ್ದಾರೆ. ಪ್ರಜಾ ಸತ್ತಾತ್ಮಕ ಯುವಜನ ಫೆಡರೇಷನ್‌ನ ಸತ್ಯ ಶೋಧನಾ ತಂಡದ ವರದಿ ಅವರ ದೃಷ್ಟಿಯಲ್ಲಿ ಪೂರ್ಣ ಪರಿಜ್ಞಾನ ದಿಂದ ಕೂಡಿದಂತೆ ಕಾಣುತ್ತದೆ. ಅಂತಲೇ 'ಅಮಾಯಕ' ಬುದ್ಧಿಜೀವಿಗಳ ಅಭಿಪ್ರಾಯ ಸತ್ಯಕ್ಕೆ ದೂರ ಎಂಬ ತೀರ್ಪನ್ನು ಅವರು ನೀಡಿದ್ದಾರೆ. ತಾವು ಎಡಪಂಥೀಯ ರಾದುದರಿಂದ ತಮ್ಮ ವರದಿಗೆ ಪ್ರಚಾರ ಸಿಕ್ಕಿಲ್ಲ ಎಂಬ ನೋವನ್ನು ಅವರು ವ್ಯಕ್ತಪಡಿಸಿದ್ದಾರೆ. ಆದರೆ ಗಣಿಗಾರಿಕೆ ಯನ್ನು ವಿರೋಧಿಸುತ್ತಿರುವವರಲ್ಲೂ ಎಡಪಂಥೀಯ ರಿದ್ದಾರೆನ್ನುವುದನ್ನು ಅವರು ಮರೆಯಬಾರದು.

ಇನ್ನು ಸ್ವಯಂಸೇವಾ ಸಂಸ್ಥೆಗಳ ಬಗ್ಗೆ ಪ್ರಸ್ತಾಪಿಸಲೇ ಬೇಕಾಗುತ್ತದೆ. ಗುಜರಾತ್‌ದಲ್ಲಿ ಮತಾಂಧರು ನಡೆಸಿದ ಹತ್ಯಾಕಾಂಡದ ಸಂದರ್ಭದಲ್ಲಿ ಬೀದಿಗೆ ಬಿದ್ದ ಜನರ ಪುನರ್ವಸತಿ ಕಾರ್ಯದಲ್ಲಿ ಮೊದಲು ತೊಡಗಿಸಿಕೊಂಡ ವರು ಸ್ವಯಂಸೇವಾ ಸಂಸ್ಥೆಗಳ ಕಾರ್ಯಕರ್ತರು. ಅದಕ್ಕಾಗಿ ಅವರು ಹಲ್ಲೆಗೂ ಗುರಿಯಾದರು. ಎಲ್ಲ ಎನ್. ಜಿ. ಓ. ಗಳನ್ನು ಕಪ್ಪುಪಟ್ಟಿಗೆ ಸೇರಿಸುವ ಆಚಾರ್ಯರ ನಿಲುವು ಸರಿಯಲ್ಲ, ಹಿಂದುತ್ವ ಫಾಸಿಸಂ ರೂಪವನ್ನು ತಾಳುತ್ತಿರುವ ಈ ದಿನಗಳಲ್ಲಿ ಅದರ ವಿರುದ್ಧ ಹೋರಾಟಕ್ಕೆ ಎನ್.ಜಿ.ಓ.ಗಳು ಬಂದರೆ ಅವರನ್ನು ದೂರ ತಳ್ಳುವುದು ಸರಿಯೇ?

*ಬೆಂಗಳೂರು* — ***ಸನತ್‌ಕುಮಾರ ಬೆಳಗಲಿ***

ಜುಲೈ ೨೦೦೭ರ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ ಎಸ್. ಆರ್. ಗುರುನಾಥ ಅವರ ಲೇಖನ 'ಗ್ರಾಮೀಣ ದಲಿತ: ಒಂದು ಲಘು ವ್ಯಾಖ್ಯಾನ' ವಾಸ್ತವಿಕ ಕಟು ಸತ್ಯಗಳ ಕಡೆಗೆ ಗಮನ ಹರಿಸುವಂತೆ ಮಾಡಿದೆ. ದಲಿತ ಬದುಕು ದೇಶದಲ್ಲಿ ಇನ್ನೂ ನಿಕೃಷ್ಟವಾಗಿದೆ. ಅಪಹರಣ, ದೌರ್ಜನ್ಯ, ಮಾನಭಂಗ, ಬೆತ್ತಲೆ ಮೆರವಣಿಗೆ ಇಂದಿಗೂ ಪತ್ರಿಕೆಗಳ ತಲೆಬರಹಗಳಾಗಿ ರಾರಾಜಿಸಿ ಮರೆಯಾಗುತ್ತಿವೆ. ಈ ಸ್ವತಂತ್ರ ಭಾರತದಲ್ಲಿ ಬುನಾದಿ ಜನರ ಬವಣೆ ಕೇಳುವವರಿಲ್ಲವೆ?

ಇದೇ ಸಂಚಿಕೆಯ ಪಿ. ಪಿ. ಬಾಬುರಾಜ್ ಅವರ ಲೇಖನ 'ಪ್ರಾಥಮಿಕ ಶಿಕ್ಷಣ : ಕೆಲವು ಮೂಲಭೂತ ಪ್ರಶ್ನೆಗಳು' ಸಕಾಲಿಕವೂ, ಚಿಂತನಶೀಲವೂ ಹೌದು.

*ಸೇಡಂ* — ***ಅಣ್ಣಾಸಾಗರ್ ಬಿ. ಆರ್.***

ಹೊಸತು-ಆಗಸ್ಟ್ ೨೦೦೭ರಲ್ಲಿ ಮಾನ್ಯ ಅನಂತಸುಬ್ಬ ರಾವ್ ಅವರ ಲೇಖನ 'ಕಾಮ್ರೇಡ್ ಸೂರಿ ಒಂದು ನೆನಪು' ತಮ್ಮ ಒಡನಾಡಿಗಳೊಂದಿಗಿನ ಮಧುರ ನೆನಪುಗಳನ್ನು ಹೊರಹಾಕುವಲ್ಲಿ ಯಶಸ್ವಿಯಾಗಿದೆ. ಲೋಕಾಯುಕ್ತ ಶ್ರೀ ವೆಂಕಟಾಚಲರನ್ನು ಪರಿಚಯಿಸುವ ಯತ್ನದಲ್ಲಿ ಕೆ. ಶ್ರೀನಿವಾಸಮೂರ್ತಿಗಳ ಅನಿಸಿಕೆ ಸ್ತುತ್ಯಾರ್ಹ. 'ಮಧುಮೇಹ' ರೋಗದ ಬಗ್ಗೆ ಮಾಹಿತಿ ನೀಡಿರುವ ಡಾ॥ ನಾಗಲೋಟಿಮಠ ತಮ್ಮ ವಾದ ಮಂಡಿಸುವಲ್ಲಿ ಸಫಲ ರಾಗಿದ್ದಾರೆ. ಅರಿವು ಮೂಡಿಸುವಲ್ಲಿ ಯಶ ಗಳಿಸಿದ್ದಾರೆ.

ಸ್ವಾಮಿ ರಾಮಕೃಷ್ಣಾರ್ಪಣಾನಂದರು ನಿರುದ್ಯೋಗ ನಿವಾರಣೆಯ ನಿರ್ಮೂಲನೆಗೆ ನೀಡಿರುವ ಸಲಹೆ ಅನುಕರಣೀಯ ಮತ್ತು ಉಪಯುಕ್ತ.

ಮುಖಪುಟದಷ್ಟೇ ಉಪಯುಕ್ತವಾಗಿದೆ ಡಾ॥ ಸಿ. ಆರ್. ಚಂದ್ರಶೇಖರ್‌ರವರ ಲೇಖನ. ಎಲ್ಲ ಆಯಾಮಗಳಲ್ಲೂ ಹಾಸುಹೊಕ್ಕಾಗಿ ಅತಿ ಸೊಗಸಾಗಿ ಮೂಡಿ ಬಂದಿದೆ. ಮಾಹಿತಿಯೂ ಪೂರಕ. ಒಟ್ಟಾರೆ ಸಂಚಿಕೆ ಸಂಗ್ರಹಣಾರ್ಹ.

*ಬೆಂಗಳೂರು* — ***ಎನ್. ಎಲ್. ರಾಮಮೂರ್ತಿ***




### ವಿಶೇಷ ಮೆಚ್ಚಿಗೆಯ ಲೇಖನ

'ಹೊಸತು'ವಿನಲ್ಲಿ ಮೆಚ್ಚಿಗೆಯಿಲ್ಲದ ಲೇಖನಗಳು ಯಾವುವೂ ಇರುವುದಿಲ್ಲ. ಆದರೂ ೨೦೦೭ರ ಜುಲೈ ಸಂಚಿಕೆಯಲ್ಲಿಯ 'ನಮ್ಮ ಪರಂಪರೆಯನ್ನು ಉಳಿಸಿಕೊಡಿ' (ಟಿ. ಎಸ್. ವೇಣುಗೋಪಾಲ ಮತ್ತು ಶೈಲಜ), 'ಕೋಮು ಗಲಭೆಗಳು' (ಎಚ್. ಎಸ್. ದೊರೆಸ್ವಾಮಿ), 'ಸ್ವತಂತ್ರ ಮನೋಭಾವದ ಇತಿಹಾಸಕಾರ ಡಾ. ಎಸ್. ಗೋಪಾಲ' (ಡಾ. ಎಚ್. ಎಸ್. ಗೋಪಾಲರಾವ್) ಮತ್ತು 'ಭಾವನಾವಾದ, ಭೌತವಾದ ಮತ್ತು ಮತೀಯ ಕೋಮುವಾದ' (ಅರವಿಂದ ಚೊಕ್ಕಾಡಿ) ಲೇಖನಗಳು ವಿಶೇಷದ್ದಾಗಿವೆ. ಈ ನಾಲ್ಕೂ ಲೇಖನಗಳಲ್ಲಿ ಒಂದೇ ಅಂದರೆ ಸೆಕ್ಯುಲರ್ ಜೀವನ ದೃಷ್ಟಿಯಿದ್ದು ಯಾವುದು ನಮಗೆ ತಾರಕವೊ ಅದೇ ಚಿಂತನದ್ರವ್ಯವನ್ನು ಹೊಂದಿದೆ.

ಈ ನಾಲ್ಕೂ ಲೇಖನಗಳೂ ಒಂದೇ ಲೇಖನದ ಬಿಡಿಭಾಗಗಳಂತಿದ್ದು ನಮ್ಮ ಸಂಸ್ಕೃತಿ ಮತ್ತು ರಾಜಕೀಯದಲ್ಲಿ ಯಾವುದು ಅಳಿಯಬೇಕು ಮತ್ತು ಯಾವುದು ಬೆಳೆಯಬೇಕು ಎಂಬುದರ ಕಡೆ ಗಮನ ಸೆಳೆಯುತ್ತದೆ.

*ಕೆರೆಕೋಣ* — ***ಆರ್. ವಿ. ಭಂಡಾರಿ***

ಆಗಸ್ಟ್ ತಿಂಗಳ ಪತ್ರಿಕೆ ಬಹಳ ಚೆನ್ನಾಗಿದೆ. ನಾಡಿನ ಹೆಸರಾಂತ ಸಾಹಿತಿಗಳು ಹಾಗೂ ಪ್ರಖ್ಯಾತ ವೈದ್ಯರಾದ ಡಾ॥ ನಾಗಲೋಟಿಮಠರ ''ಎರಡನೇ ಪ್ರಕಾರದ ಮಧುಮೇಹ ಒಂದು ರೋಗವೇ?'' – ಹಾಗೂ ಮನೋವೈದ್ಯ ಶ್ರೀ ಸಿ. ಆರ್. ಚಂದ್ರಶೇಖರ್ ಅವರ ''ಶ್ರೀಲಂಕಾ ಭೇಟಿ – ಕೆಲವು ಅನುಭವಗಳು'' ತುಂಬಾ ಹಿಡಿಸಿದವು. ಪತ್ರಿಕೆಯು ಹೆಸರಿಗೆ ತಕ್ಕಂತೆ ಮಾಸ-ಮಾಸವೂ ಲೇಖನ – ಕಥೆ, ಕಾವ್ಯ, ಹಾಸ್ಯವಿಡಂಬನೆ ಇತ್ಯಾದಿಗಳೊಂದಿಗೆ ವಾಚಕರನ್ನು ಸೆಳೆಯುವುದರಲ್ಲಿ ಯಶಸ್ವಿಯಾಗಿದೆ.

ಪಂಡಿತ್ ಭೀಮಸೇನ ಜೋಶಿಯವರ ಇನ್ನೊಂದು ಮುಖ ಕಾರ್ ಡ್ರೈವಿಂಗ್‌ನಲ್ಲಿಯೂ ಪಾಂಡಿತ್ಯ ಪಡೆದಿರು ವುದು ಸೋಜಿಗವೆನಿಸಿತು. ಪ್ರಯಾಣದ ಸಮಯದಲ್ಲಿ ಅವರು ಮಾನವೀಯತೆಯನ್ನು ತೋರಿದ್ದನ್ನು ಅಚ್ಚುಕಟ್ಟಾಗಿ ನಿರೂಪಿಸಿದ್ದೀರಿ. ವಿವೇಚನೆಯುಳ್ಳ ಪ್ರತಿಯೊಬ್ಬರೂ ಗಮನಿಸಬೇಕಾದ ಮಾನವೀಯತೆಯನ್ನು ಲೇಖಕರು ಮನಮುಟ್ಟುವಂತೆ ಬರೆದಿದ್ದಾರೆ.

ಹೀಗೆ ವೈವಿಧ್ಯಮಯ ಲೇಖನಗಳ ಸರಮಾಲೆಯೇ ತಮ್ಮ 'ಹೊಸತು' ಪತ್ರಿಕೆ. ನನ್ನ ನೆಚ್ಚಿನ ಪತ್ರಿಕೆ.

*ಭಾನಾಪುರ* — ***ಶಂಕರ ಕೆ. ಪತ್ತಾರ***

### ಹೀಗೊಬ್ಬ ಕ್ಯಾಷಿಯರ್

ನಮ್ಮ ಬರೋಡ ನಗರದ ಸುಭಾನ್‌ಪುರದಲ್ಲಿ ಕರ್ನಾಟಕ ಮೂಲದ ರಾಷ್ಟ್ರೀಕೃತ ಬ್ಯಾಂಕೊಂದರ ಶಾಖೆಯಿದೆ. ಇದರಲ್ಲಿ ನಮ್ಮ ಕನ್ನಡದವರೇ ಆದ ಒಬ್ಬ ಕ್ಯಾಷಿಯರ್ ಇದ್ದಾರೆ. ಇವರ ಕಾರ್ಯಶೈಲಿಯೇ ವಿನೂತನವಾದದ್ದು. ಗ್ರಾಹಕರು ಹಣ ತೆಗೆದುಕೊಂಡು ಹೋಗುವುದಕ್ಕೆ ಬರಲಿ ಅಥವಾ ಹಣ ಜಮಾ ಮಾಡುವುದಕ್ಕೆ ಬರಲಿ ಯಾವುದೇ ಗ್ರಾಹಕರನ್ನು ಒಂದು ನಿಮಿಷಕ್ಕಿಂತ ಹೆಚ್ಚು ಕಾಯಿಸುವುದಿಲ್ಲ. ಬ್ಯಾಂಕಿನ ಇತರೆ ಸಿಬ್ಬಂದಿಯಿಂದ ಗ್ರಾಹಕರಿಗೆ ಸರಿಯಾದ ರೀತಿಯಲ್ಲಿ ಸೇವೆ ಸಿಗದಿದ್ದಲ್ಲಿ ಅವರೇ ಗ್ರಾಹಕರನ್ನು ಕರೆದು ಅವರ ತೊಂದರೆಗಳನ್ನು ವಿಚಾರಿಸುತ್ತಾರೆ. ಅವರಿಗೆ ಸೂಕ್ತ ಸೇವೆ ಸಿಗುವಂತೆ ಎಚ್ಚರ ವಹಿಸುತ್ತಾರೆ. ಬ್ಯಾಂಕಿನ ವ್ಯವಹಾರದ ಸಮಯ ಮೀರಿದರೂ, ತುರ್ತು ಸಂದರ್ಭಗಳಲ್ಲಿ ಹಣದ ಅವಶ್ಯಕತೆಯಿದ್ದು ಬರುವ ಗ್ರಾಹಕರಿಗೆ ಸ್ಪಂದಿಸುತ್ತಾರೆ. ವ್ಯವಹಾರದ ವೇಳೆ ಮುಗಿದ ನಂತರ ಹಣವನ್ನು ಕೋರಿ ಬರುವ ಯಾವೊಬ್ಬ ಗ್ರಾಹಕನ ಬೇಡಿಕೆಯನ್ನೂ ತಮ್ಮ ಇದುವರೆಗಿನ ಸೇವಾ ಅವಧಿಯಲ್ಲಿ ತಿರಸ್ಕರಿಸಿಲ್ಲ ಎನ್ನುವ ಹೆಗ್ಗಳಿಕೆ ಅವರದು.

ಕ್ಯಾಷಿಯರ್ ಅವರ ಈ ಗುಣಗಳಿಂದ ಪ್ರಯೋಜನ ವೇನು ಎನ್ನುವಿರಾ! ಬ್ಯಾಂಕಿಗೆ ಲಾಭ. ಅವರಿಗೆ ಕಾರ್ಯತೃಪ್ತಿ. 'ಕಾಯಕವೇ ಕೈಲಾಸ' ಎನ್ನುವ ನುಡಿಯಲ್ಲಿ ಅವರ ಅಚಲ ನಂಬಿಕೆ.

ಈಗ ಬೆನ್ನು ನೋವಿನಿಂದಾಗಿ ಕ್ಯಾಷ್ ಡಿಪಾರ್ಟ್ ಮೆಂಟ್‌ನಲ್ಲಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ, ಕ್ಲರಿಕಲ್ ಡಿಪಾರ್ಟ್‌ಮೆಂಟ್‌ಗೆ ಬದಲಾವಣೆ ಕೊಡಿ ಎಂದು ಮೇಲಧಿಕಾರಿಗಳನ್ನು ಕೇಳಿದರೆ ಇಲ್ಲಸಲ್ಲದ ಬ್ಯಾಂಕಿನ ನಿಯಮಗಳನ್ನು ಮುಂದೊಡ್ಡಿ ಬೇಡಿಕೆಯನ್ನು ತಿರಸ್ಕರಿಸಿದ್ದಾರೆ.

ಈ ನಿಷ್ಠಾವಂತ ಕ್ಯಾಷಿಯರ್ ಕಾರ್ಯ ಬದಲಾವಣೆಯ ಆದೇಶದ ನಿರೀಕ್ಷೆಯಲ್ಲಿ ಹಲವು ತಿಂಗಳಿನಿಂದ ಮನೆಯಲ್ಲಿ ಕಾಲಕಳೆಯುತ್ತಿದ್ದಾರೆ.

*ಬರೋಡ* — ***ಸುಷುಮಾ ವಡೋವರ***

ಹೇಸಿಗೆ ಕಾರ್ಯಕ್ರಮದಲ್ಲಿ ಭಾಗಿಗಳಾಗಿದ್ದರು. ಬರಗಾಲ್ದದಲ್ಲಿ ಬುದ್ಧಿಗೂ ಬರ ಬಂತಲ್ಲಾ ಎಂದು ಮರುಗಬೇಕೋ ಕೋಪಗೊಳ್ಳಬೇಕೋ ತೀರ್ಮಾನವಾಗಬೇಕು. ಈ ಜನಕ್ಕೆ ನಾಚಿಕೆ-ಮರ್ಯಾದೆಗಳೇನಾದರೂ ಉಂಟೇ ಎಂದು ಶಂಕಿಸಬೇಕಾಗಿದೆ. ಕೋತಿ ಕುಣಿಸುವವನಿಗೆ ರಾಜಮರ್ಯಾದೆ ಏನಾದರೂ ಇದ್ದರೆ ಈ ಆರ್ಬೈಟೋಗೆ ಪ್ರಶಸ್ತಿ ಖಚಿತ. ಎರಡನೆಯ ಪ್ರಶಸ್ತಿ, ನಮ್ಮ ಕೆಲವು ಮಾಧ್ಯಮಗಳಿಗೆ. ಏಕೆಂದರೆ, ಅವನ ಚಿಕಿತ್ಸಕ ಶಕ್ತಿಯ ಗುಣಗಾನ ಮಾಡಿ ಪುನೀತರಾದರಲ್ಲಾ, ಅದಕ್ಕೆ.

ಚುನಾವಣಾ ಆಯುಕ್ತರು ಗುಜರಾತಿನಲ್ಲಿ ನಾಲಿಗೆ ಹರಿಬಿಟ್ಟರೆಂದು ಕೆಲವರಿಗೆ ಅಸಮಾಧಾನ. ಸಂತ್ರಸ್ತರಿಗೆ ಪರಿಹಾರ ಕೊಡಲಾಯಿತೇ, ಇಲ್ಲವೇ, ಎಂಬುದು ಚುನಾವಣಾ ಆಯುಕ್ತರ ಕಾರ್ಯಪರಿಧಿಗೆ ಸೇರಿಲ್ಲವೆಂಬುದು ಅವರ ತರ್ಕ. ತಮ್ಮ ಪಕ್ಷದ ಕಾರ್ಯತಂತ್ರಕ್ಕೆ ಅಡಚಣೆ ಉಂಟಾಗಬಹುದೆಂಬ ಭಯದಿಂದ ಭಾರತೀಯ ಜನತಾ ಪಕ್ಷದ ಕಾರ್ಯದರ್ಶಿ ಅರುಣ್ ಜೇಟ್ಲಿ ಸಂಯಮ ಕಳೆದುಕೊಂಡು ಬಾಯಿಗೆ ಬಂದಂತೆ ಅರಚಿದ್ದಾರೆ. ಮಲ್ಹೋತ್ರಾ ಅದಕ್ಕೆ ದನಿಗೂಡಿಸಿದ್ದಾರೆ. ಮೋದಿಯ ಮೋಡಿ ಇನ್ನೂ ಜೀವಂತವಿರುವಾಗಲೇ ಗುಜರಾತಿನಲ್ಲಿ ಚುನಾವಣೆ ನಡೆಯಬೇಕೆಂಬುದು ಅವರ ಅಪೇಕ್ಷೆ. ಕಾಶ್ಮೀರ ಚುನಾವಣೆಯಲ್ಲಿ ಇದೇ ಚುನಾವಣಾ ಆಯುಕ್ತರ ಕಾರ್ಯಶೈಲಿಯನ್ನು ಮೆಚ್ಚುವ ಜೇಟ್ಲಿ ಗುಜರಾತಿಗೆ ಅವರು ಭೇಟಿಯಿತ್ತುದನ್ನು ಖಂಡಿಸುತ್ತಾರೆ. ಇದೊಂದು ಘೋರ ವಿಪರ್ಯಾಸವೆಂದು ಅವರಿಗೆ ಅನ್ನಿಸದಿರುವುದು ಅಚ್ಚರಿ ತರುತ್ತದೆ. ಅವರ ಆಣತಿಯಂತೆ ಎಲ್ಲಾ ನಡೆಯಬೇಕೆನ್ನುವ ಜೇಟ್ಲಿ ಪಕ್ಷಕ್ಕೆ ಸಂವಿಧಾನದತ್ತವಾದ ನಿಯಮಗಳು, ಆಶಯಗಳು ಮಾನ್ಯವಲ್ಲ. ಆದ್ದರಿಂದ ರಾಷ್ಟ್ರಾಧ್ಯಕ್ಷರನ್ನು ಪೇಚಿಗೆ ಸಿಲುಕಿಸಿ ನ್ಯಾಯಾಲಯದಿಂದ ಶ್ರೀರಕ್ಷೆ ಬಯಸಿದ್ದಾರೆ. ಈ ಮಂದಿ ಎಷ್ಟು ಚಾಣಾಕ್ಷರೆಂದರೆ, ಪಾರ್ಲಿಮೆಂಟಿನಲ್ಲಿ ಪೆಟ್ರೋಲ್ ಬಂಕುಗಳ ಹಗರಣದ ಬಗ್ಗೆ ಆರೋಪ-ಪ್ರತ್ಯಾರೋಪಗಳು ನಡೆದು ಪ್ರತಿಭಟನೆ ಹೆಚ್ಚಾದಾಗ ಪಾರ್ಲಿಮೆಂಟ್ ಅಧಿವೇಶನವನ್ನೇ ರದ್ದು ಮಾಡುತ್ತಾರೆ. ಅದಕ್ಕೆ ಪ್ರಧಾನಿ ಚಕಾರವೆತ್ತುವುದಿಲ್ಲ. ಇವೆಲ್ಲಾ ಪ್ರಜಾಪ್ರಭುತ್ವದ ಕ್ರಮವನ್ನು ಕ್ರಮೇಣ ಕೈಬಿಡುವುದರ ಸೂಚನೆ. ಎಲ್ಲ ರಾಜಕೀಯ ಪಕ್ಷಗಳೂ ಇದರ ಬಗ್ಗೆ ಗಂಭೀರವಾಗಿ ಆಲೋಚಿಸಬೇಕು; ಇಲ್ಲದಿದ್ದರೆ ನಿಷ್ಕ್ರಿಯತೆಯಿಂದ ಫ್ಯಾಸಿಸ್ಟ್ ದುರಾಕ್ರಮಣವನ್ನು ಆಹ್ವಾನಿಸಿದಂತಾಗುತ್ತದೆ. ಪಾರ್ಲಿಮೆಂಟಿನಲ್ಲಿ ಆರೋಪ ಹೊರಿಸಿ ಅಧಿವೇಶನ ನಡೆಯದಂತೆ ಮಾಡುವ ಪ್ರತಿನಿಧಿಗಳು ಅವರ ಪ್ರತಿಭಟನೆಗೆ ಪೂರಕವಾಗಿ ಹೊರಗೆ ಒಂದು ಲಕ್ಷ ಸಾರ್ವಜನಿಕರನ್ನು ಮೆರವಣಿಗೆಗೆ ಸಜ್ಜುಗೊಳಿಸದಿರುವುದು ದೊಡ್ಡ ಲೋಪವೆಂದು ತಿಳಿದುಕೊಳ್ಳಬೇಕು. ನಾಗರಿಕರ ಭಾಗವಹಿಸುವಿಕೆ ಇಲ್ಲದೆ ಪಾರ್ಲಿಮೆಂಟಿನಲ್ಲಿ ಎಂತಹ ಗಲಭೆ ನಡೆದರೂ ವಾಜಪೇಯಿ-ಅದ್ವಾನಿ ಹತಾಶರಾಗುವುದಿಲ್ಲ. ಅವರಿಗೆ ಬೇಕಾದ್ದೂ ಅದೇ: ಗಲಭೆ ನಡೆಯಲಿ, ಚರ್ಚೆ ಬೇಡ, ಆಮೇಲೆ ಅಧಿವೇಶನವೂ ಬೇಡ !

ರಾಷ್ಟ್ರಾಧ್ಯಕ್ಷರು ಗುಜರಾತಿಗೆ ಭೇಟಿ ನೀಡಿ ಬಂದ ತರುವಾಯದಲ್ಲಿ ಪ್ರಧಾನಿ ಸ್ವಲ್ಪ ಕಣ್ಣು ಬಿಡಬೇಕಾಗಿ ಬಂದಿದೆ. ಅತ್ತ ಅದ್ವಾನಿ ಮುಖ್ಯಮಂತ್ರಿ ಮೋದಿಯನ್ನು ಸಮರ್ಥಿಸುತ್ತಿರುವಾಗಲೇ ವಾಜಪೇಯಿಯವರು ಕೆಂಪುಕೋಟೆಯ ಮೇಲಿನಿಂದ ಮತೀಯವಾದವನ್ನು ಖಂಡಿಸುವ ಮಾತನಾಡಿದ್ದಾರೆ. ಅಂದರೆ, ಮಗು ಜಿಗುಟುವವರೊಬ್ಬರು, ತೊಟ್ಟಿಲು ತೂಗುವವರು ಇನ್ನೊಬ್ಬರು. ಪ್ರಧಾನಿಯವರ ಮಾತು ಸಾರ್ವಜನಿಕರ ಸಾಂತ್ವನಕ್ಕಾಗಿ ಮಾತ್ರವೋ ಅಥವಾ ಕ್ರಿಯಾವಿಧಿಗೆ ನಾಂದಿಯೋ ಎಂಬುದನ್ನು ಕಾದುನೋಡಬೇಕು. ಅದ್ವಾನಿ ಹಿಂಬಾಲಕರು ಬ್ರಿಟನ್ನಿನಲ್ಲಿ ಹೇಳಿಕೆಗಳನ್ನು ವಿನಿಮಯ ಮಾಡಿಕೊಳ್ಳುತ್ತಾ ಹೇಳಿದರಂತೆ : ನಾವು ಗಾಂಧಿಗಿಂತ ಇಂದು ಗೋಡ್ಸೆಯನ್ನೇ ಅವಲಂಬಿಸುವುದು, ಇದು ಅನಿವಾರ್ಯ, ಎಂದು. ಏನು ಮಾಡುವುದಕ್ಕೆ ಇದು ಅನಿವಾರ್ಯ ಎಂಬುದನ್ನು ಮೋದಿ ತೋರಿಸಿಕೊಟ್ಟಿದ್ದಾರೆ. ಕಾಶ್ಮೀರದ ಸಂದರ್ಭದಲ್ಲಿ ಹಿಂಸಾಚಾರ ಮತ್ತು ಪ್ರಚೋದನೆಗಳಿರುವಂತೆ ಗುಜರಾತಿನ ಸಂದರ್ಭದಲ್ಲೂ ಇವೆ. ಆ ಹಿನ್ನೆಲೆಯಲ್ಲಿ ಈ ತಿಂಗಳು ನಾವು ಸ್ವಾತಂತ್ರ್ಯೋತ್ಸವದಲ್ಲಿ ಪಾಲ್ಗೊಂಡಿದ್ದೇವೆ ಎಂಬುದನ್ನು ಮರೆಯಬಾರದು.

ಕಾಶ್ಮೀರದಲ್ಲಿ ಮಧ್ಯಸ್ಥಿಕೆ ವಹಿಸಲು ಹಾತೊರೆಯುತ್ತಿರುವ ಅಮೆರಿಕಾ ಈ ತಿಂಗಳಲ್ಲಿ ಇನ್ನೊಂದು ಪರಾಕ್ರಮವನ್ನು ಸಾಧಿಸಿದೆ. ಇತ್ತೀಚಿಗೆ ಅಂತರರಾಷ್ಟ್ರೀಯ ಅಪರಾಧಗಳ ನ್ಯಾಯಾಲಯವೊಂದು ಅಸ್ತಿತ್ವಕ್ಕೆ ಬಂದಿದೆ. ವಿಶ್ವದ ಯಾವ ರಾಷ್ಟ್ರದಲ್ಲೇ ಆಗಲಿ, ಬೇರೆ ರಾಷ್ಟ್ರಗಳವರು ಹಲ್ಲೆ ನಡೆಸಿದರೆ ಅಂತಹವರನ್ನು ಈ ನ್ಯಾಯಾಲಯದ ಮುಂದೆ ತಂದು ಅಪರಾಧಿ ಸ್ಥಾನದಲ್ಲಿ ನಿಲ್ಲಿಸಬಹುದು. ಉದಾಹರಣೆಗೆ, ಭಾರತದ ಸೈನಿಕರು ಬೇರಾವುದೋ ದೇಶದಲ್ಲಿ ಯಾರನ್ನೋ ಹಿಂಸಿಸಿದರೆ ಅವರನ್ನು ಈ ನ್ಯಾಯಾಲಯ ತನಿಖೆಗೆ ಗುರಿಪಡಿಸುತ್ತದೆ. ತನ್ನ ದೇಶದವರು ಈ ಕಟ್ಟಳೆಗೆ ಸಿಲುಕಕೂಡದೆಂಬುದು ಅಮೆರಿಕಾದ ನಿಲುವು. ಏಕೆಂದರೆ ಎಲ್ಲೆಡೆ ಕೊಲೆಪಾತಕಿಗಳು ಅವರೇ ! ಆದ್ದರಿಂದ ಆ ನ್ಯಾಯಾಲಯಕ್ಕೆ ತಾನು ಬದ್ಧನಲ್ಲವೆಂದು ಅಮೆರಿಕಾ ಸಾರಿದೆ. ಈಗ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ಬೇರೆ ರಾಷ್ಟ್ರಗಳಿಗೆ ತಾಕೀತು ಮಾಡಿದೆ: ನೀವೇನಾದರೂ ಆ ನ್ಯಾಯಾಲಯವನ್ನು ಮಾನ್ಯ ಮಾಡಿದರೆ ನಿಮಗೆ ಇನ್ನು ಮುಂದೆ ಶಸ್ತ್ರಾಸ್ತ್ರ ನೆರವು ನೀಡುವುದಿಲ್ಲ ಎಂದು. ದೊಡ್ಡಣ್ಣನ ಘನತೆ ಎಂದರೆ ಇದು : ನಾನು ಕೊಲ್ಲುತ್ತೇನೆ, ಆದರೆ ಯಾರೂ ನನ್ನನ್ನು ಶಿಕ್ಷಿಸುವಂತಿಲ್ಲ. ಇದನ್ನು ನೋಡಿಯೂ ಅಮೆರಿಕಾದ ಪ್ರಜಾಪ್ರಭುತ್ವ, ಸ್ವಾತಂತ್ರ್ಯದ ಅಭಿಮಾನ ಮತ್ತು ಮಾನವ ಹಕ್ಕುಗಳ ರಕ್ಷಣೆ ಬಗ್ಗೆ ಅನುಮಾನ ಹುಟ್ಟದಿದ್ದರೆ ನಮ್ಮಲ್ಲೇನೋ ಊನವಿರಬೇಕು. ಈಚೆಗೆ ಇರಾಕಿನ ಕೆಲವು ಸದ್ದಾಂ-ವಿರೋಧಿಗಳನ್ನು ಅಮೆರಿಕಾಕ್ಕೆ ಕರೆಸಿ ಸದ್ದಾಂನನ್ನು ಕೆಳಗಿಳಿಸುವುದು ಅಥವಾ ಕೊಲ್ಲುವುದು ಹೇಗೆ ಎಂದು ಉನ್ನತಮಟ್ಟದ ಚರ್ಚೆ ಬಹಿರಂಗವಾಗಿ ನಡೆಸಲಾಯಿತು. ಅದೇ ರೀತಿ ಬುಶ್ ಹತ್ಯೆಗಾಗಿ ಸದ್ದಾಂ ಸಹ ಸಂಚು ಹೂಡಿದರೆ ಹೇಗಿರುತ್ತದೆ ? ಬುಶ್ ಮಾಡಬಹುದಾದ್ದನ್ನು ಸದ್ದಾಂ ಏಕೆ ಮಾಡಬಾರದು ? ಸೆಪ್ಟೆಂಬರ್ ೧೧ ಹತ್ತಿರ ಬರುತ್ತಿದೆ. ಈಗಿನ ಬುಶ್ ಕಾರ್ಯಕ್ರಮವು ಇನ್ನಷ್ಟು ಸೆಪ್ಟೆಂಬರ್ ೧೧ರ ಘಟನೆಗಳಿಗೆ ಹಾದಿ ಮಾಡಿಕೊಟ್ಟರೆ ಆಗ ಯಾರನ್ನು ದೂಷಿಸುವುದು ? ಇಂತಹ ಕ್ರೂರ ಚೆಲ್ಲಾಟಗಳನ್ನು ನಿಲ್ಲಿಸಬೇಕೆಂದು ಇಡೀ ಮಾನವ ಜನಾಂಗ ಇದೇ ಸೆಪ್ಟೆಂಬರ್ ೧೧ರಂದು ಗಟ್ಟಿಯಾಗಿ ಕೂಗಿ ಹೇಳಬೇಕು.

**ಜಿ. ರಾಮಕೃಷ್ಣ**

## ಸಾಬರಮತಿಯಿಂದ ರಾವೀ ತೀರಕ್ಕೆ

ಅಸಘರ್ ವಜಾಹತ್ ಅವರ ಹಿಂದಿ ನಾಟಕವೊಂದನ್ನು ಇಟಗಿ ಈರಣ್ಣ ಅವರು 'ಸಾಬರಮತಿಯಿಂದ ರಾವೀ ತೀರಕ್ಕೆ' ಎಂಬ ಹೆಸರಿನಿಂದ ಕನ್ನಡಕ್ಕೆ ರೂಪಾಂತರಿಸಿದ್ದನ್ನು ಈಚೆಗೆ ನಂದನ ರಂಗತಂಡ ಪ್ರಯೋಗಿಸಿತು.

ಭಾರತದ ವಿಭಜನೆಯ ನಂತರ ಧರ್ಮದ ಹಿನ್ನೆಲೆಯಲ್ಲಿ ಜನರ ಸಂಕಷ್ಟ ಬದುಕನ್ನು ಈ ನಾಟಕ ಪ್ರಸ್ತುತಪಡಿಸುತ್ತದೆ. ಲಾಹೌರ್ ಪಟ್ಟಣದಲ್ಲಿ ಏಕಾಂಗಿಯಾಗಿ ಬದುಕುತ್ತಿರುವ ಒಬ್ಬ ಮುದುಕಿಯಿಂದ ನಾಟಕ ಪ್ರಾರಂಭವಾಗುತ್ತದೆ. ಈಗಾಗಲೇ ಈ ವೃದ್ಧೆ ತನ್ನ ಜೀವನದಲ್ಲಿ ಪಡಬಾರದ ಕಷ್ಟವನ್ನು ಪಟ್ಟು ಮುದ್ದಿನ ಮಗನಾದ ರತನ್‌ಲಾಲ್‌ನನ್ನು ಕಳೆದುಕೊಂಡಿದ್ದಾಳೆ. ಅಷ್ಟು ದೊಡ್ಡ ಬಂಗಲೆಯಲ್ಲಿ ತಾನೊಬ್ಬಳೇ ವಾಸ ಮಾಡುತ್ತಿರುತ್ತಾಳೆ. ಅಲ್ಲಿಗೆ ಸಿಕಂದರ್ ಮಿರ್ಜಾ ಕುಟುಂಬ ಪ್ರವೇಶ ಮಾಡುತ್ತದೆ. ರತನ್‌ಲಾಲ್ ಬಂಗಲೆ ಇವರಿಗೆ ಗೊತ್ತುಮಾಡಿರುತ್ತಾರೆ. ಆತ ಈ ಮುದುಕಿಯನ್ನು ಹಿಂದೂಸ್ತಾನಕ್ಕೆ ಕಳುಹಿಸಲು ಪ್ರಯತ್ನಿಸಿದಾಗ ಹಮೀದಾ ಬೇಗಂಳ ಮಾನವೀಯತೆ ಅಡ್ಡಿ ಬರುತ್ತದೆ. ಬರಬರುತ್ತಾ ಮಿರ್ಜಾ ಕುಟುಂಬ ಮುದುಕಿಯನ್ನು ತನ್ನ ತಾಯಿಯಾಗಿ ಸ್ವೀಕರಿಸುತ್ತದೆ.

ಆದರೆ ಇದರ ಅಂತಃಕರಣದಲ್ಲಿ ಹುದುಗಿರುವ ದೊಡ್ಡ ಅರ್ಥವೇನು ? ನಮ್ಮ ದಿನನಿತ್ಯದ ಬದುಕಿಗೆ ಧರ್ಮ ಅಗತ್ಯವೋ, ಮಾನವೀಯತೆ-ಪ್ರೀತಿ ಅಗತ್ಯವೋ ಎಂಬ ಪ್ರಶ್ನೆಗಳು ಮತ್ತು ಗುಜರಾತಿನ ನರಮೇಧ ಪ್ರೇಕ್ಷಕನ ಮನಸ್ಸನ್ನು ನಾಟಕದ ಕೊನೆಯವರೆಗೂ ಆವರಿಸಿರುತ್ತದೆ. ಜನನಾಯಕನೆಂದು ಹೇಳಿಕೊಂಡು ಧರ್ಮದ (ಕುರಾನ್ ಧರ್ಮ) ಸ್ವಾರಸ್ಯವನ್ನು ಸರಿಯಾಗಿ ಅರ್ಥ ಮಾಡಿಕೊಳ್ಳದೆ ಇರುವ ಪೈಲ್ವಾನ್ ಯಾಕೂಬ್ ಖಾನ್‌ರಂಥವರಲ್ಲಿ ಮಾನವೀಯತೆ ಸತ್ತುಹೋಗಿದೆ. ಧರ್ಮದ ಹಿನ್ನೆಲೆಯಲ್ಲಿ ಇವರು ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುತ್ತಾರೆ. ಮೌಲ್ವಿ ಹೇಳುವ 'ಮನಸ್ಸಿನ ವಿಕಾರಗಳೊಡನೆ ನಿಜವಾದ ಹೋರಾಟವೇ ಧರ್ಮ' ಎಂಬ ಮಾತು ಅವರಿಗೆ ಅರ್ಥವಾಗುವುದಿಲ್ಲ. ಆದರೂ ಮೌಲ್ವಿ, ಮಿರ್ಜಾ, ಕವಿ ಮುಂತಾದವರೆಲ್ಲಾ ಪೈಲ್ವಾನ್ ಸೃಷ್ಟಿಸುವ ಪ್ರಪಂಚದಲ್ಲಿ ಸಂದಿಗ್ಧ ಪರಿಸ್ಥಿತಿಯಲ್ಲಿ ಬದುಕುತ್ತಾರೆ. 'ನಾವು (ಹಿಂದೂ-ಮುಸ್ಲಿಂ) ಯಾಕೆ ಒಂದಾಗಿ ಬದುಕಬಾರದು' ಎಂಬ ತನ್ನೂ ಮಾತಿಗೆ ಮಿರ್ಜಾ ಅಂಥವರು ಉತ್ತರಕ್ಕಾಗಿ ಆಕಾಶದ ಕಡೆ ಕೈಚಾಚುತ್ತಾರೆ.

ರತನ್‌ಲಾಲ್ ತಾಯಿ ತನ್ನ ಮಗನ ನೆನಪಿಗೆ ದೀಪಾವಳಿಯನ್ನು ಆಚರಿಸಿದಾಗ ಮಿರ್ಜಾ ಕುಟುಂಬಕ್ಕೆ ಆದ ಸಂತೋಷ ಪ್ರೇಕ್ಷಕನ ಎದೆ ತಟ್ಟುತ್ತದೆ. ಮುದುಕಿಯ ಜೀವನದಲ್ಲಿ ಬತ್ತಿಹೋಗಿದ್ದ ಪ್ರೀತಿ-ಮಮತೆಯನ್ನು ಬೇಗಂ, ಹುಸೇನ್, ತನ್ನೂ ಇವರು ಹೃದಯದಿಂದ ತುಂಬುತ್ತಾರೆ. 'ನಮ್ಮ ಸುತ್ತಮುತ್ತ ಸಂಬಂಧಗಳನ್ನು ಕಿವಿಗೊಟ್ಟು ಕೇಳು' ಎನ್ನುವ ಕವಿ ಪೈಲ್ವಾನ್‌ರಂಥವರಲ್ಲಿ ಕಾಣದ ಗುಣಗಳನ್ನು ರತನ್‌ಲಾಲ್ ತಾಯಿಯಲ್ಲಿ ಕಾಣುತ್ತಾನೆ. ಈತ ಹೇಳುವ ಪ್ರತಿಯೊಂದು 'ಶಾಯರಿ'ಯೂ ನಾಟಕದ ವಸ್ತುವಿಗೆ ಚೆನ್ನಾಗಿ ಹೊಂದಾಣಿಕೆಯಾಗಿತ್ತು. ನಾಟಕದ ಅಂತ್ಯ ಮುದುಕಿಯ ಶವಯಾತ್ರೆಯ ಮೂಲಕ. ಪ್ರಸ್ತುತ ದಿನಗಳ ಮೂಲಭೂತ ಸಮಸ್ಯೆಗಳಲ್ಲಿ ಒಂದಾಗಿರುವ ಕೋಮುಗಲಭೆಗಳಿಗೆ ಈ ನಾಟಕ ಸ್ವಲ್ಪವಾದರೂ ಜನತೆಯ ಹೃದಯಾಂತರಾಳದಲ್ಲಿ ಉತ್ತರಗಳನ್ನು ತುಂಬುತ್ತದೆ.

*-ಸುರೇಶ್ ನಾಗಲಮಡಿಕೆ, ಬೆಂಗಳೂರು*

# ದ್ವೀಪ

## ಬದುಕಿನ ಭರವಸೆಯ ಸಂಕೇತ

ಕಳೆದ ಜೂನ್ ತಿಂಗಳಿನ 'ಹೊಸತು'ವಿನಲ್ಲಿ ಪ್ರಕಟವಾಗಿದ್ದ ಸಂದರ್ಶನದಲ್ಲಿ ಶ್ರೀ ಗಿರೀಶ್ ಕಾಸರವಳ್ಳಿ ಹೀಗೆಂದಿದ್ದರು : ನಾ. ಡಿಸೋಜರ ಕಾದಂಬರಿ ಆಧರಿಸಿದ 'ದ್ವೀಪ' ನನ್ನ ಚಿತ್ರಗಳಲ್ಲೇ ವಿಶಿಷ್ಟವಾದದ್ದು. ಕೇವಲ ನಾಲ್ಕು ಪ್ರಧಾನ ಪಾತ್ರಗಳು. ಜೊತೆಗೆ ಐದನೆಯ ಪಾತ್ರವಾಗಿ ಮಳೆ. ಅನೇಕ ಕನ್ನಡ ಚಿತ್ರಗಳಲ್ಲಿ ಮಳೆ ಹಿನ್ನೆಲೆಯಾಗಿ ಬಂದಿತ್ತು. ಪ್ರಧಾನ ಪಾತ್ರವಾಗಿ ಬಂದದ್ದು ಇಲ್ಲವೆನ್ನುವಷ್ಟು ಅಪರೂಪ. ಈ ನಾಲ್ಕು ಪಾತ್ರಗಳು ವಿಭಿನ್ನ ಜೀವನ ಧರ್ಮವನ್ನು ಹೊಂದಿವೆ. ಮಳೆಯ ಅರ್ಭಟ ಅವರವರ ನಂಬಿಕೆಗಳನ್ನು ನಿಕಷಕ್ಕೆ ಒಡ್ಡುತ್ತದೆ. ಈ ನಿಕಷದಲ್ಲಿ ಗೆಲ್ಲುವುದು 'ನಾಗಿ' ಮಾತ್ರ. 'ದ್ವೀಪ' ಮಳೆಗಾಗಿ ಕಾದು ಮಾಡಿದ ಚಿತ್ರ. ಮಳೆ ಸಂಭ್ರಮ ತರುವ, ಬೆರಗು ಹುಟ್ಟಿಸುವ, ಬೇಸರ ಬರಿಸುವ, ಭೀತಿ ಹುಟ್ಟಿಸುವ, ಅದೇ ವೇಳೆ ಅನುಭವಕ್ಕಾಗಿ ಕಾತರಿಸುವಂತೆ ಮಾಡುವ ವಿದ್ಯಮಾನವಾಗಿ ಚಿಕ್ಕಂದಿನಿಂದಲೂ ನನ್ನ ಮನಸ್ಸಿನಲ್ಲಿ ಹುದುಗಿರುವ ವಸ್ತು. ಹೊಸ ರೀತಿಯ ಚಿತ್ರ. ಇಲ್ಲಿ ಪ್ರಕೃತಿ ಹಿನ್ನೆಲೆಯಲ್ಲಿಲ್ಲ, ಅದೇ ಮುನ್ನೆಲೆ.

ಚಲನಚಿತ್ರದ ತಾಂತ್ರಿಕ ಭಾಷೆಯನ್ನು ಕರಗತ ಮಾಡಿಕೊಂಡಿರುವ ಗಿರೀಶರು, ದಂತಗೋಪುರದಲ್ಲಿ ಕುಳಿತು ಸುತ್ತಲಿನ ಜಗತ್ತನ್ನು ಮರೆತವರಲ್ಲ, ಅವರ ಸಾಮಾಜಿಕ ಕಳಕಳಿ, ಜವಾಬ್ದಾರಿಕೆ ಸದಾ ಎಚ್ಚರವಾಗಿರುತ್ತವೆ.

ಕೆಲವು ವರ್ಷಗಳ ಹಿಂದೆ ಸಾಕ್ಷ್ಯ ಚಿತ್ರಕ್ಕೆಂದು ಲೊಕೇಶನ್ ಹುಡುಕುತ್ತ ಬಾಗೂರು ನವಿಲೆಗೆ ಹೋಗಿದ್ದರು. ಯಾರಿಗೋ ಕಾಯುತ್ತಾ ನಿಂತಿದ್ದಾಗ ಸುರಂಗ ನಿರ್ಮಾಣಕ್ಕೆ ಕಲ್ಲು ಹೊಡೆಯುತ್ತಿದ್ದ ಒಬ್ಬ ವ್ಯಕ್ತಿಯನ್ನು ಸಂಧಿಸಿದರು. ಆತ ಹಿಂದೆ ದೊಡ್ಡ ಕುಳವಾಗಿ ಬದುಕಿದವನಂತೆ. ಮೊದಲು ಹೇಮಾವತಿ ಜಲಾಶಯ ಬಂದಾಗ ಜಮೀನು ಮುಳುಗಡೆಯಾಗಿ, ದೊರಕಿದ ಪರಿಹಾರ ಹಣದಿಂದ ಅಲ್ಲಿ ಸ್ವಲ್ಪ ಜಮೀನು ಖರೀದಿಸಲು ಸಾಧ್ಯವಾಯಿತಂತೆ. ಮುಂದೆ ಬಾಗೂರು ನವಿಲೆ ಪ್ರಾಯೋಜನೆಯ ಕಾರಣ ಪುನಃ ಜಮೀನು ಕಳೆದುಕೊಂಡನಂತೆ. ಅಲ್ಲಿ ಸಿಕ್ಕಿದ ಪರಿಹಾರದಿಂದ ಬೇರೇನೂ ಖರೀದಿಸಲು ಸಾಧ್ಯವಾಗದೆ, ಹೀಗೆ ಕಲ್ಲು ಕುಟಿಗನಾಗಿ ಜೀವನ ಸಾಗಿಸಬೇಕಾದ ಸ್ಥಿತಿಗೆ ತಲುಪಿದ್ದ. ಆ ಪ್ರಾಯೋಜನೆಯಿಂದ ಜನರಿಗಾಗುವ ಅನುಕೂಲಗಳನ್ನು ಚಿತ್ರಿಸ ಹೊರಟ ಅವರಿಗೆ, ಅದರ ಮತ್ತೊಂದು ಮುಖ ಕಾಣಿಸಿತು. ಹೊಸ ಅಣೆಕಟ್ಟುಗಳು, ಅಭಿವೃದ್ಧಿ ಪ್ರಾಯೋಜನೆಗಳ ವಿಷಯದಲ್ಲಿ ನಾವೊಂದು ಗೆರೆ ಹಾಕಿಕೊಳ್ಳುತ್ತೇವೆ. ಗೆರೆಯ ಈ ಕಡೆಯವರಿಗೆ ಅದು ಅಭಿವೃದ್ಧಿ ಪಥವಾಗಿ ಕಾಣಿಸಿದರೆ, ಗೆರೆಯ ಆಚೆಗುಳಿದವರಿಗೆ ಅದು ವಿನಾಶದ ಪಥವಾಗುತ್ತದೆ. ಈಚೆಗಿರುವವರು ಆ ಪ್ರಾಯೋಜನೆಯಿಂದಾಗುವ ಅನುಕೂಲಗಳ ಬಗ್ಗೆ, ಒಂದು ವೇಳೆ ನಾವೇ ಗೆರೆಯ ಆಚೆಗಿದ್ದು, ಜಮೀನು, ಮನೆ ಮಠ ಕಳೆದುಕೊಳ್ಳುವವರಾಗಿದ್ದರೆ ಅಭಿವೃದ್ಧಿ ಕುರಿತು ಇಷ್ಟು ಉಮೇದಿನಿಂದ ಮಾತಾಡುತ್ತಿದ್ದೆವೆ? ತನ್ನ ಜಮೀನು ಕಳೆದುಕೊಂಡು ಈಗ ಕಾರ್ಮಿಕನಾಗಿ ದುಡಿಯುತ್ತಿರುವ ಆ ವ್ಯಕ್ತಿಯ ಅಭಿಪ್ರಾಯ ಹೇಗಿರಬಹುದು? ಈ ಪ್ರಶ್ನೆಗಳ ಬಗ್ಗೆ ಗಿರೀಶ್ ಆಳವಾದ ಚಿಂತನೆ ನಡೆಸಿದ್ದಾರೆ.

ಗಿರೀಶರ ಮನಸ್ಸನ್ನು ಅಲುಗಾಡಿಸಿದ ಮತ್ತೊಂದು ಪ್ರಸಂಗ: ಒಮ್ಮೆ ಜನಸ್ಪಂದನ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವರು ಕಾರವಾರದ ಒಂದು ಹಳ್ಳಿಗೆ ಹೋಗಿದ್ದರು. ಕೈಗಾ ಅಣುಸ್ಥಾವರಕ್ಕಾಗಿ ಜನರನ್ನು ಗುಳೇ ಎಬ್ಬಿಸಲಾಗುತ್ತಿತ್ತು. ಸರಕಾರದ ಅಳತೆಗೋಲಿನಿಂದ ಅಳೆಯಬಹುದಾದ ಆಸ್ತಿ ಇಲ್ಲದ ಅನೇಕರು ಗೌರವಯುತವಾಗಿ ಜೀವನ ಸಾಗಿಸುತ್ತಿರುವ ಬಗ್ಗೆ ಮಾತು ಬಂತು. ಅವರ ಆಸ್ತಿ ಎಂದರೆ ಸಮಾಜದ ಅನೇಕ 'ಬೇಕು'ಗಳನ್ನು ಪೂರೈಸುವುದು. ಊರಿನವರನ್ನು ಗುಳೇ ಎಬ್ಬಿಸಿದಾಗ ಈ ಜನರ ಆಸರೆ ತಪ್ಪುತ್ತದೆ. ಅವರು ಹೆಣೆಯುತ್ತಿದ್ದ ಚಾಪೆ, ಮಂಕರಿಗಳನ್ನು, ಅವರು ಹಿಡಿಯುತ್ತಿದ್ದ ಮೀನು, ಏಡಿಗಳನ್ನು ಕೊಳ್ಳುವವರಿಲ್ಲದಾಗಬಹುದು. ಮುಂದೆ ಅವರ ಗತಿ?

ಕೆ. ಪಿ. ಸ್ವಾಮಿ

ಇದ್ದಕ್ಕಿದ್ದಂತೆ ಸಂಭವಿಸುವ ಬದಲಾವಣೆ ಒಂದು ಸಮಾಜವನ್ನು ಎರಡು ಭಾಗಗಳಾಗಿ ವಿಂಗಡಿಸುತ್ತದೆ. ಕೆಲವರನ್ನು ಅದು ಹತ್ತು ಹೆಜ್ಜೆ ಮುಂದಕ್ಕೆ ತಳ್ಳಿದರೆ, ಮತ್ತೆ ಕೆಲವರನ್ನು ಹತ್ತು ಹೆಜ್ಜೆಗಿಂತ ಇನ್ನೂ ಹೆಚ್ಚು ಹಿಂದಕ್ಕೆ ನೂಕಿಬಿಡುತ್ತದೆ. ಕಾಲದ ನಡೆಯಲ್ಲಿ ಕೆಲವರು ಮುಂದೆ ಜಿಗಿದರೆ, ಕೆಲವರು ಹಿಂದಕ್ಕೆ ತಳ್ಳಲ್ಪಡುತ್ತಾರೆ.

ಹಾಗೆ ಹಿಂದಕ್ಕೆ ತಳ್ಳಲ್ಪಟ್ಟವರ ಬವಣೆಯನ್ನು ಚಿತ್ರಿಸುತ್ತದೆ 'ದ್ವೀಪ'.

ನಾ. ಡಿಸೋಜರ ಮೂಲ ಕಥೆಯನ್ನು ಸಿನಿಮಾಕ್ಕಾಗಿ ಅಲ್ಲಲ್ಲಿ ಮಾರ್ಪಾಡು ಮಾಡಿಕೊಂಡಿದ್ದಾರೆ. ಸೀತಾಪರ್ವತ ವಾಸಿ ದುಗ್ಗಜ್ಜ. ಆತನ ಮಗ ಗಣಪ. ಸೊಸೆ ನಾಗಿ. ದುಗ್ಗಜ್ಜನ ವಂಶಜರು ಎರಡು ಮೂರು ತಲೆಮಾರುಗಳ ಹಿಂದೆ ದಕ್ಷಿಣ ಕನ್ನಡ ಜಿಲ್ಲೆಯಿಂದ ಬಂದು ಅಲ್ಲಿ ನೆಲೆಸಿದವರು. ಭೂತ ಕಟ್ಟುವ ಕಾಯಕವನ್ನು ಅತ್ಯಂತ ನಿಷ್ಠೆಯಿಂದ ನಡೆಸಿಕೊಂಡು ಬಂದವರು.

ನದಿಗೆ ಅಣೆಕಟ್ಟು ಕಟ್ಟಿರುವ ಕಾರಣ ಹಿನ್ನೀರು ಪ್ರದೇಶದ ಹಲವು ಹಳ್ಳಿಗಳು ಮುಳುಗಡೆಯಾಗುತ್ತವೆ. ಆ ಪೈಕಿ ಸೀತಾಪರ್ವತ ಪ್ರದೇಶವೂ ಸೇರುತ್ತದೆ. ತಮ್ಮ ಗದ್ದೆ, ತೋಟ, ಮನೆ ಕಳೆದುಕೊಂಡ ಆ ಊರಿನವರು ಸರಕಾರ ನಿಗದಿ ಮಾಡಿದ ಪರಿಹಾರ ಧನ ಪಡೆದು ಒಬ್ಬೊಬ್ಬರಾಗಿ ಬೇರೆ ಬೇರೆ ಕಡೆ ಹೋಗಿ ನೆಲಸತೊಡಗುತ್ತಾರೆ.

ದುಗ್ಗಜ್ಜನಿಗೆ ಸರಕಾರದವರ ಮಾನಕಕ್ಕೆ ಸಿಕ್ಕಬಹುದಾದ ಆಸ್ತಿ ಪಾಸ್ತಿ ಇಲ್ಲ. ಭೂತವನ್ನೇ ಅಚಲವಾಗಿ ನಂಬಿದವ ಆತ. ಭೂತದ ಗುಡಿ ಸಹ ಸಾಧಾರಣವಾದದ್ದು. ಪುರಾತತ್ವಶಾಸ್ತ್ರದ ಪ್ರಕಾರ ಅದಕ್ಕೆ ಅಂಥ ಮಹತ್ವವೇನೂ ಇಲ್ಲ. ಅವರಿಗೆ ಪರಿಹಾರಧನ ಸಿಕ್ಕುವ ಬಗೆ ಹೇಗೆ ?

ಈ ಸಂದರ್ಭದಲ್ಲಿ ಹೊರಗಿನ ವ್ಯಕ್ತಿಯಾಗಿ ಕೃಷ್ಣ ಅವರ ಮನೆಗೆ ಬರುತ್ತಾನೆ. ಕೃಷ್ಣ ಮುಂಬೈನಲ್ಲಿ ಬದುಕಲು ಹೋಗಿ ಸೋತು ಬಂದವನು. ಅವರ ಕಷ್ಟ ಸುಖಗಳಲ್ಲಿ ಭಾಗಿಯಾಗುತ್ತಾನೆ. ಅವರ ಯಾವುದೇ ಕೆಲಸವನ್ನು ಮಾಡಲು ಮುಂದಾಗುವ ಆ ಯುವಕ ನಾಗಿಯ ಹೃದಯದಲ್ಲಿ ಒಂದು ಬಗೆಯ ಮರುಕದ ಸ್ಥಾನ ಗಳಿಸಿದರೆ, ಅದರಿಂದ ಗಣಪನ ಮನಸ್ಸಿನಲ್ಲಿ ಸಂಶಯ ತಲೆದೋರುತ್ತದೆ.

ಸರಕಾರದ ಪರಿಹಾರ ಧನ ಪಡೆಯಬೇಕೇ ಬೇಡವೇ ಎಂಬ ವಿಷಯದಲ್ಲಿ ಅವರು ತಾಕಲಾಟಕ್ಕೆ ಸಿಕ್ಕಿಕೊಳ್ಳುತ್ತಾರೆ. ರಾಮ ಸೀತೆಯರು ಕುಳಿತು ಸಲ್ಲಾಪ ನಡೆಸಿದ್ದರೆಂಬ ಸ್ಥಳವಾದ ಸೀತಾಪರ್ವತವನ್ನು, ಭೂತವನ್ನು ಅಚಲವಾಗಿ ನಂಬಿದ್ದ ದುಗ್ಗಜ್ಜ. ಗಣಪನಿಗೆ ಅಷ್ಟು ಅಚಲ ನಂಬಿಕೆಯಿಲ್ಲದಿದ್ದರೂ, ಒಂದು ಬಗೆಯ ಶ್ರದ್ಧೆಯಿತ್ತು. ಹೊಸ ಸ್ಥಳಕ್ಕೆ ಗುಳೇ ಹೋಗಲು ಒಪ್ಪದ ಮನಸ್ಸು ಅವರಿಬ್ಬರದು. ಇವರ ಮಧ್ಯೆ ನಾಗಿ ಇರುವಲ್ಲಿಯೇ ಹೇಗೋ ಬದುಕಬಲ್ಲೆ, ಹೊಸ ಸ್ಥಳಕ್ಕೆ ಗುಳೇ ಹೋದರೂ ಬದುಕಬಲ್ಲೆ ಎಂಬ ಆತ್ಮವಿಶ್ವಾಸ ಉಳ್ಳವಳು. ಕಷ್ಟಗಳು, ಅಪಾಯಗಳು ಎದುರಾದಾಗ, ಇತರರು ದಿಕ್ಕುಗೆಟ್ಟು ನಿಷ್ಕ್ರಿಯರಾದಾಗ, ಅಪಾಯವನ್ನು ಎದುರಿಸಲು ಪ್ರಯತ್ನಿಸುವ ದಿಟ್ಟೆ ಅವಳು.

ಸದಾ ಅವರ ಜೊತೆಗಿರುವ ಮಲೆನಾಡ ಮಳೆಯದು ಐದನೆಯ ಪಾತ್ರ. ಪ್ರತಿಬಾರಿ ಮಳೆ ಬಂದಾಗಲೂ ಅದು ಕತೆಗೆ ಹೊಸ ತಿರುವು ನೀಡುತ್ತ ಹೋಗುತ್ತದೆ.

ಅಷ್ಟು ವರ್ಷ ಮರ್ಯಾದೆಯಿಂದ ಬಾಳಿದ ದುಗ್ಗಜ್ಜ ಸರಕಾರದಿಂದ ಸಹಾಯಧನ ಪಡೆಯಬೇಕೇ ಬೇಡವೇ ಎಂಬ ತಾಕಲಾಟದಲ್ಲಿ ಸಿಕ್ಕಿಕೊಳ್ಳುತ್ತಾನೆ. ತನ್ನ ನಂಬಿಕೆಗೆ, ತಾನು ನಂಬಿದ ಭೂತಕ್ಕೆ ಸರಕಾರ ಪರಿಹಾರಧನ ನಿಗದಿಪಡಿಸುವ ವಿಷಯ ಆತನಿಗೆ ವಿಚಿತ್ರವೆನ್ನಿಸುತ್ತದೆ.

ಕಾಲ ಸಂದಂತೆ ಅವರಿದ್ದ ಪ್ರದೇಶ ಒಂದು ದ್ವೀಪವಾಗುತ್ತದೆ. ಅಲ್ಲಿಯೇ ಉಳಿದಿದ್ದ ನಾಲ್ಕು ಮಂದಿಯ ನಡುವಣ ಸಂಬಂಧಗಳು ಒಂದೊಂದೂ ವಿಚಿತ್ರ ಸುಳಿಯಲ್ಲಿ ಸಿಕ್ಕಿಕೊಂಡಂತಾಗಿ ಅವರೂ ಪ್ರತ್ಯೇಕ ದ್ವೀಪಗಳಂತಾಗುತ್ತಾರೆ. ನೀರು ಅವರ ಮನೆ ಬಾಗಿಲ ವರೆಗೂ ಬಂದಾಗ, ಅವರು ಅಲ್ಲಿಂದ ಸ್ವಲ್ಪ ಎತ್ತರದಲ್ಲಿದ್ದ, ಹಿಂದಿನ ಮಾಲೀಕರು ತ್ಯಜಿಸಿಹೋಗಿದ್ದ ತೋಟದ ಸಮೀಪದ ಮನೆಯೊಂದಕ್ಕೆ ಸ್ಥಳಾಂತರವಾಗುತ್ತಾರೆ.

ಸೀತಾಪರ್ವತದಂಥ ಪವಿತ್ರ ಪ್ರದೇಶ ತನ್ನ ಕಣ್ಣ ಮುಂದೆಯೇ ನೀರಿನಲ್ಲಿ ಮುಳುಗುತ್ತಿರುವುದನ್ನು ಅರಗಿಸಿಕೊಳ್ಳಲು ದುಗ್ಗಜ್ಜನಿಗೆ ಸಾಧ್ಯವಾಗುವುದಿಲ್ಲ. ಅಷ್ಟಾದರೂ ನಂಬಿದ ದೈವ ತಮ್ಮನ್ನು ಕೈಬಿಡುವುದಿಲ್ಲ ಎಂಬ ನಂಬಿಕೆ. ಕೊನೆಗೆ ದುಗ್ಗಜ್ಜ ಈ ನಂಬಿಕೆಯನ್ನು ಪರೀಕ್ಷೆಗೆ ಗುರಿ ಮಾಡುವುದಕ್ಕೆ ಮುಂದಾಗುತ್ತಾನೆ. ಅದರಲ್ಲಿ ಅವನಿಗೆ ಸೋಲು. ಅಂದು ರಾತ್ರಿ ಸುರಿದ ಮಾಮೇರಿ ಮಳೆಯಲ್ಲಿ ಆತನ ನಂಬಿಕೆ ಕುಸಿದು ಆತ ಮರಣವನ್ನಪ್ಪುತ್ತಾನೆ.



*ತಮ್ಮ ಚೊಚ್ಚಲು ನಿರ್ದೇಶನದ ಚಿತ್ರ 'ಘಟಶ್ರಾದ್ಧ'ಕ್ಕಾಗಿ, ಅನಂತರ 'ತಬರನ ಕಥೆ' ಮತ್ತು 'ತಾಯಿ ಸಾಹೇಬ' ಚಿತ್ರಗಳಿಗಾಗಿ, ಚಲನಚಿತ್ರಗಳಿಗೆ ನೀಡಲಾಗುವ ರಾಷ್ಟ್ರದ ಅತ್ಯುನ್ನತ ಪ್ರಶಸ್ತಿಯಾದ 'ಸ್ವರ್ಣಕಮಲ'ವನ್ನು ಗಳಿಸಿದ ಶ್ರೀ ಗಿರೀಶ್ ಕಾಸರವಳ್ಳಿಯವರು, ಈ ವರ್ಷ 'ದ್ವೀಪ' ಚಿತ್ರಕ್ಕಾಗಿ ಸ್ವರ್ಣಕಮಲ ಪಡೆದುಕೊಂಡಿದ್ದಾರೆ. ನಾಲ್ಕನೆಯ ಬಾರಿಗೆ ಈ ಶ್ರೇಷ್ಠ ಪ್ರಶಸ್ತಿ ಗಳಿಸಿದ ನಿರ್ದೇಶಕರಾಗಿ ಕನ್ನಡದ ಕೀರ್ತಿಗೆ ಮತ್ತೊಂದು ತುರಾಯಿ ತೊಡಿಸಿದ್ದಾರೆ. ಸಿನೆಮಾ ಕ್ಷೇತ್ರದಲ್ಲಿ ತಮ್ಮದೇ ಛಾಪು ಉಳಿಸಿಕೊಂಡು ಮುಂದುವರಿಯುತ್ತಿರುವ, ಅದೇ ವೇಳೆ ಸಾಮಾಜಿಕ ಕಳಕಳಿಯನ್ನು ಉಳಿಸಿಕೊಂಡಿರುವ ಶ್ರೀ ಗಿರೀಶ್ ಅಸಾಧಾರಣ ಪ್ರತಿಭಾವಂತರು, ಸಮಕಾಲೀನ ಬದುಕಿಗೆ ಸ್ಪಂದಿಸುವ ಪ್ರಜ್ಞಾವಂತರಾಗಿದ್ದು ಕನ್ನಡಿಗರೆಲ್ಲರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ.*

ಉಳಿದ ಮೂವರು ಪರಸ್ಪರ ಮಾತನಾಡದಂಥ ಪರಿಸ್ಥಿತಿಗೆ ತಲಪುತ್ತಾರೆ. ಹೊರಗಿನಿಂದ ಬಂದಿದ್ದ ಕೃಷ್ಣ ಒಂದು ರಾತ್ರಿ ಬೆಳಗಾಗುವಷ್ಟರಲ್ಲಿ ಅಲ್ಲಿದ್ದ ದೋಣಿ ಸಹಿತ ಅಲ್ಲಿಂದ ಹೊರಟುಹೋಗುತ್ತಾನೆ.

ಗಣಪ ಮತ್ತು ನಾಗಿ ಉಳಿಯುತ್ತಾರೆ. ರಾತ್ರಿ ಎಂದಿನಂತೆ ಬಿರುಮಳೆ. ಮನೆಯ ಹಿಂದೆ ಹುಲಿಯ ಘರ್ಜನೆ ಕೇಳಿಸುತ್ತದೆ. ಗಣಪ ಸಂಪೂರ್ಣ ನಿಷ್ಕ್ರಿಯನಾಗಿ ಮಲಗಿಬಿಡುತ್ತಾನೆ. ನಾಗಿ ಎಷ್ಟು ಬೇಡಿಕೊಂಡರೂ ಪ್ರಯೋಜನವಾಗುವುದಿಲ್ಲ. ಕೊನೆಗೆ ರಾತ್ರಿಯಿಡೀ ಬೆಂಕಿ ಕೊಳ್ಳಿ ಉರಿಸುತ್ತ, ಮನೆಯ ಸುತ್ತಲೂ ಕಾವಲು ಕಾಯುತ್ತ ಹುಲಿಯನ್ನು ಬೆದರಿಸುವ ಪ್ರಯತ್ನ ಮಾಡುತ್ತಾಳೆ. ಬೆಳಗಾಗುವಷ್ಟರಲ್ಲಿ ಮಳೆ ನಿಲ್ಲುತ್ತದೆ. ದೂರದಲ್ಲಿ ಎಲ್ಲಿಯೋ ನೀರು ಧುಮುಕುವ ಸದ್ದು ಕೇಳಿಸುತ್ತದೆ. ಸ್ವಲ್ಪ ಎತ್ತರದ ಸ್ಥಳಕ್ಕೆ ಹೋಗಿ ಅದೇನೆಂದು ನೋಡುತ್ತಾಳೆ. ಅಣೆಕಟ್ಟೆಯ ಮೇಲಿನಿಂದ ನೀರು ಧುಮುಕುತ್ತಿದೆ ! ಓಡಿ ಬಂದು ಗಣಪನಿಗೆ ಸುದ್ದಿ ಮುಟ್ಟಿಸುತ್ತಾಳೆ. ಅವರ ಪಾಲಿಗೆ ಅದೊಂದು ಪವಾಡವೇ ಸರಿ. ಗಣಪನ ಬಿಗುಮಾನ ಸಡಿಲವಾಗುತ್ತದೆ, ಆವರಿಸಿದ್ದ ಹತಾಶೆ ಒಮ್ಮೆಲೇ ಕರಗಿ ಹೋಗುತ್ತದೆ. ಒಂದು ದ್ವೀಪವಾಗಿಯಾದರೂ ಈ ಪ್ರದೇಶ ಉಳಿಯುತ್ತದೆ. ಹಿಂದಿನವರು ತ್ಯಜಿಸಿ ಹೋಗಿದ್ದ ಮನೆ, ತೋಟ ತಮ್ಮ ಪಾಲಿಗೆ ಉಳಿದಿದೆ. ನಾವು ಇಲ್ಲಿಯೇ ಬದುಕಬಲ್ಲೆವು, ಇಲ್ಲಿಯೇ ಬದುಕುತ್ತೇವೆ, ಎಂದು ನಿರ್ಧರಿಸುತ್ತಾರೆ. ಇಬ್ಬರೂ ಸಂಭ್ರಮದಿಂದ ಸಂತೋಷದ ಆ ಕ್ಷಣವನ್ನು ಅನುಭವಿಸುತ್ತಾರೆ. ಮಹಾದೇವಿಯಕ್ಕನ ಒಂದು ವಚನದೊಂದಿಗೆ ಚಿತ್ರ ಮುಕ್ತಾಯವಾಗುತ್ತದೆ.

ಮೇಲುನೋಟಕ್ಕೆ ಅವರ ಕಥೆ ಮೂಢನಂಬಿಕೆ ಮತ್ತು ವೈಚಾರಿಕತೆಗಳ ಮಧ್ಯೆ ನಡೆಯುವ ಸಂಘರ್ಷದಂತೆ ಕಾಣಿಸಿದರೂ, ಬದುಕಿನ ಬಗೆಗಿರುವ ನಾಗಿಯ ಅದಮ್ಯ ಬಯಕೆಯನ್ನು, ಜೀವನ ಚೈತನ್ಯವನ್ನು, ನೀರಿನೊಂದಿಗೆ ಸಮೀಕರಿಸಿರುವುದನ್ನು ಗ್ರಹಿಸಬಹುದಾಗಿದೆ. ನೀರಿಗೆ ಎಷ್ಟು ತಡೆ ಹಾಕಿದರೂ ಅದು ತನ್ನ ಮೂಲಗುಣವನ್ನು ಕಳೆದುಕೊಳ್ಳುವುದಿಲ್ಲ, ಒಂದಲ್ಲ ಒಂದು ಕಡೆ ಅದು ಪ್ರಕಟವಾಗಿಯೇ ಆಗುತ್ತದೆ, ಉಕ್ಕಿ ಹರಿಯುತ್ತದೆ ಎಂಬುದನ್ನು ಗಿರೀಶರು ಸೂಚ್ಯವಾಗಿ ಬಿಂಬಿಸುತ್ತಾರೆ. ಜೀವನವೂ ಅದೇ ಲಕ್ಷಣವನ್ನು ಮೈಗೂಡಿಸಿಕೊಳ್ಳಬೇಕಲ್ಲವೆ ಎಂದು ಪ್ರೇಕ್ಷಕ ಬೇಕಾದರೆ ಅರ್ಥಮಾಡಿಕೊಳ್ಳಬಹುದು.

* * *

'ದ್ವೀಪ'ವನ್ನು ಸಿನೆಮಾ ಮಾಡುವ ಆಲೋಚನೆ ೧೯೮೦ರ ಸುಮಾರಿನಲ್ಲೇ ಗಿರೀಶರಿಗೆ ಹೊಳೆದಿತ್ತು. 'ತಬರನ ಕಥೆ'ಯ ನಂತರ ಅದನ್ನು ಕೈಗೆತ್ತಿಕೊಳ್ಳಲೂ ನಿರ್ಧರಿಸಿದ್ದರು. ಅದು ಸಾಧ್ಯವಾಗಿದ್ದಿದ್ದರೆ, ಪರಿಹಾರ ಧನಕ್ಕಾಗಿ ಹೋರಾಡುವ ಕಥೆಯಾಗುವ ಸಾಧ್ಯತೆ ಇದ್ದಿತು. ಕಾಲ ಸಂದಂತೆ ಕಥೆ ಇಂದಿನ ರೂಪ ತಳೆಯಿತು. ಮೂಲ ಕಥೆಯಲ್ಲಿ ಮುಖ್ಯ ಪಾತ್ರವಾದ ಗಣಪಯ್ಯ ಹಿಂದೆ ಸರಿದು,

ಸಜೀವ ಪಾತ್ರವಾಗಿ ನಾಗಿ ರೂಪುಗೊಳ್ಳಲು ಸಾಧ್ಯವಾಯಿತು.

೨೦೦೦ನೇ ವರ್ಷ, ಗಿರೀಶರಿಂದ ಒಂದು ಸಿನೆಮಾ ಮಾಡಿಸುವ ಪ್ರಸ್ತಾಪ ನಟಿ ಸೌಂದರ್ಯ ಅವರ ಅಣ್ಣನಿಂದ ಬಂದಾಗ ಇವರಿಗೆ ಆಶ್ಚರ್ಯವಾಗದೆ ಇರಲಿಲ್ಲ. ಒಂದೆರಡು ಚಿತ್ರಕಥೆಗಳನ್ನು ಅವರೇ ಆಯ್ಕೆ ಮಾಡಿಕೊಂಡಿದ್ದರು. ಮಾತುಕತೆಯ ಸಂದರ್ಭದಲ್ಲಿ ಗಿರೀಶರು 'ದ್ವೀಪ'ದ ಪ್ರಸ್ತಾಪ ಮಾಡಿದಾಗ, ಆ ಕಾದಂಬರಿಯನ್ನು ತಾವು ಓದಿರುವುದಾಗಿಯೂ, ಕನ್ನಡದಲ್ಲಿ ಅಂಥ ಕಥೆ ಈವರೆಗೆ ಬಂದಿಲ್ಲವೆಂದೂ, ಇದು ಸೂಕ್ತ ಆಯ್ಕೆಯೆಂದೂ ಅವರು ಸಮ್ಮತಿಸಿದರು. ಅಲ್ಲದೆ ಗಿರೀಶರ ಶೈಲಿಯಲ್ಲೇ ಚಿತ್ರ ತಯಾರಿಸಲು ಪೂರ್ಣ ಸ್ವಾತಂತ್ರ್ಯ ಇರುತ್ತದೆಂಬ ಸೂಚನೆ ನೀಡಿದರು.

ಚಿತ್ರೀಕರಣವನ್ನು ೨೦೦೦ನೇ ವರ್ಷದ ಮಳೆಗಾಲದಲ್ಲೇ ಮುಗಿಸಲು ಸಿದ್ಧತೆ ಮಾಡಿಕೊಂಡರು. ಆ ಸಮಯಕ್ಕೆ ಸರಿಯಾಗಿ ಡಾ|| ರಾಜಕುಮಾರರ ಅಪಹರಣ ಪ್ರಕರಣ ನಡೆದು ಚಿತ್ರೀಕರಣ ನಿಲ್ಲಿಸಬೇಕಾಯಿತು. ರಾಜಕುಮಾರರ ಬಿಡುಗಡೆ ಆಗುವ ವೇಳೆಗೆ ಮಳೆಗಾಲ ಮುಗಿದಿತ್ತು! ಮುಂದಿನ ಮಳೆಗಾಲಕ್ಕಾಗಿ ಒಂದು ವರ್ಷ ಕಾಯಬೇಕು. ಈ ತರಾತುರಿಯ ಕಾಲದಲ್ಲಿ ನಿರ್ಮಾಪಕರು ಒಂದು ವರ್ಷ ಕಾಯಬಹುದೆ ?

ಗಿರೀಶರಿಗೆ ಆತಂಕವಾಗತೊಡಗಿತು. 'ದ್ವೀಪ'ದ ಕಥೆ ಮುಗಿದಂತೆಯೇ ಎಂಬ ಹತಾಶೆ. ಆದರೆ ನಿರ್ಮಾಪಕರು ಇವರ ಆತಂಕಗಳಿಗೆ ಪರದೆ ಎಳೆದು ಮಳೆಗಾಲಕ್ಕಾಗಿ ಕಾಯುವುದಲ್ಲದೆ, ಗಿರೀಶರಿಗೆ ತೃಪ್ತಿಯಾಗುವ ರೀತಿಯಲ್ಲಿ ಚಿತ್ರೀಕರಣ ನಡೆಸಲೂ ಸಹಕರಿಸಿದರು.

ಜೋಗದ ಆಸುಪಾಸಿನಲ್ಲಿ, ಮೂಲಕಥೆಯಲ್ಲಿ ಬರುವ ದೃಶ್ಯಗಳಿಗೆ ಹೋಲಿಕೆಯಾಗುವಂಥ ಸ್ಥಳಗಳಲ್ಲಿ, ತಾಳಗುಪ್ಪೆಯಿಂದ ಎಂಟು ಕಿ. ಮೀ. ದೂರದ ಬೆಳ್ಳಿಣ್ಣೆ ಎಂಬಲ್ಲಿ ಚಿತ್ರೀಕರಣ. ಮಳೆಗಾಗಿ ಗಂಟೆಗಟ್ಟಲೆ ಕಾಯುತ್ತ ಕುಳಿತಿರುವುದು, ಮಳೆ ಬಂದಕೂಡಲೇ ಚಿತ್ರೀಕರಣ ನಡೆಸಿ ಸಂಭ್ರಮಿಸುವುದು ಒಂದು ರೋಚಕ ಅನುಭವ ನಿರ್ದೇಶಕರಿಗೆ ಹಾಗೂ ಚಿತ್ರತಂಡದವರಿಗೆ.

ಸೌಂದರ್ಯರಂಥ ಸೊಬಗಿನ ನಟಿ ತಮ್ಮನ್ನು ಡೀ-ಗ್ಲಾಮರೈಸ್ ಮಾಡಿಕೊಂಡು ಮಣ್ಣಿನ ಮಗಳಾದ ನಾಗಿಯಾಗಿ ರೂಪಾಂತರಗೊಂಡದ್ದು ಗಿರೀಶರಿಗೆ ಒಂದು ಅಚ್ಚರಿಯ ಮತ್ತು ಸಂತಸದ ಅನುಭವ!

ದುಗ್ಗಜ್ಜನಾಗಿ ವಾಸುದೇವರಾವ್, ಗಣಪನಾಗಿ ಅವಿನಾಶ್, ನಾಗಿಯಾಗಿ ಸೌಂದರ್ಯ, ಹಾಗೂ ಕೃಷ್ಣನ ಪಾತ್ರಧಾರಿ, ಆಯಾ ಪಾತ್ರಗಳಲ್ಲಿ ನಿರ್ದೇಶಕರ ಕಲ್ಪನೆಯನ್ನು ಸಾಕಾರಗೊಳಿಸಿದ್ದಾರೆ.

ಪುಣೆಯ ಫಿಲ್ಮ್ ಇನ್‌ಸ್ಟಿಟ್ಯೂಟ್‌ನಲ್ಲಿ ಗಿರೀಶರ ಸಹಪಾಠಿಯಾಗಿದ್ದ ಐಸಾಕ್ ಥಾಮಸ್ ಸಂಗೀತ ನೀಡಿದ್ದಾರೆ. ಶ್ರೀಮತಿ ವೈಶಾಲಿ ಕಾಸರವಳ್ಳಿಯವರು ಉಡುಪುಗಳನ್ನು ವಿನ್ಯಾಸಗೊಳಿಸಿದ್ದಾರೆ. ಛಾಯಾಗ್ರಾಹಕ ರಾಮಚಂದ್ರ ಮಲೆನಾಡಿನ ಮಳೆಯ ಅನುಭವ ಪ್ರೇಕ್ಷಕರಿಗೂ ತಟ್ಟುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ. ಚಿತ್ರ ನೋಡುತ್ತ ನೋಡುತ್ತ ನಾವೂ ಮಳೆಯಲ್ಲಿ ನೆನೆಯುತ್ತಿದ್ದೇವೋ ಎಂಬ ಅನುಭವ ಬರಿಸುವುದು ನಿರ್ದೇಶಕರ ಹಾಗೂ ಛಾಯಾಚಿತ್ರಕಾರರ ನೈಪುಣ್ಯ.

ಚಿತ್ರದ ತಂತ್ರಜ್ಞರೂ ಸೇರಿದಂತೆ ಇಡೀ ತಂಡ ಒಮ್ಮನಸ್ಸಿನಿಂದ ತೊಡಗಿಕೊಂಡಿದೆ. ಚಿತ್ರೀಕರಣ ಸಂದರ್ಭದ ಆತಂಕ, ಕಾತರ, ಕುತೂಹಲ, ಸಂಭ್ರಮಗಳನ್ನು ಇಡೀ ತಂಡ ಅನುಭವಿಸಿದೆ.

ಮತ್ತೊಂದು ಸ್ವಾರಸ್ಯದ ಸಂಗತಿಯೆಂದರೆ, ಸೌಂದರ್ಯರಿಗೆ ನೀರು ಕಂಡರೆ ಹೆದರಿಕೆ ! ಈ ವಿಷಯ ತಿಳಿದಾಗ ನಿರ್ದೇಶಕ ಗಿರೀಶರಿಗೆ ಮತ್ತೊಂದು ಹೊಸ ಆತಂಕ ಎದುರಾಗಿತ್ತು. ಮಳೆಯ ನೀರಿನ ಜೊತೆಗೆ ಪ್ರತಿ ವರ್ಷ ಏರುತ್ತಲೇ ಹೋಗುವ ಅಣೆಕಟ್ಟೆಯ ನೀರಿನೊಂದಿಗೂ ನಡೆಯುವ ಕಥೆ 'ದ್ವೀಪ'. ಇದನ್ನು ನಿಭಾಯಿಸುವುದು ಹೇಗೆ ಎಂಬ ಆತಂಕ ಅವರದು.

ಇದಕ್ಕಾಗಿ ಬೇರೆ ಉಪಾಯಗಳಿಗೆ ಮೊರೆ ಹೋಗಬೇಕಾಯಿತು. ಚಿತ್ರೀಕರಣ ಸಾಗಿದಂತೆ ನಿಧಾನಕ್ಕೆ ಸೌಂದರ್ಯ ಅವರ ನೀರಿನ ಭಯ ಕಡಿಮೆಯಾಗತೊಡಗಿತು. ಷಾಟ್‌ಗಾಗಿ ಕಾಯುತ್ತ ದೋಣಿಯಲ್ಲಿ ಒಬ್ಬರೇ ಉಳಿದಾಗ ಹುಟ್ಟು ಹಾಕಲು ಪ್ರಯತ್ನಿಸುತ್ತಿದ್ದರು. ದೋಣಿ ಮುಳುಗುವುದಿಲ್ಲ ಎಂಬ ಧೈರ್ಯ ಬಂದಾಗ ಹುಟ್ಟು ಹಾಕುವುದನ್ನು ಅಭ್ಯಾಸ ಮಾಡಿಕೊಂಡರು. ಕೊನೆಗೊಂದು ದಿನ ಯಾರ ಸಹಾಯವೂ ಇಲ್ಲದೆ ದೋಣಿ ನಡೆಸುತ್ತ ಕ್ಯಾಮರಾ ದಿಕ್ಕಿನಲ್ಲಿ ಸಾಗಿಬಂದಾಗ ಇಡೀ ಚಿತ್ರತಂಡ ಹರ್ಷದಿಂದ ಕೇಕೆ ಹಾಕಿತು.

ಮಳೆಗಾಗಿ ಕಾಯುತ್ತ ಕುಳಿತಿದ್ದು, ಮಳೆ ಬೀಳಬಹುದಾದ ಸ್ಥಳಗಳಲ್ಲೇ ಚಿತ್ರೀಕರಣ ನಡೆಸಲು ಅಲೆದಾಡಿದ್ದು ಸಾರ್ಥಕವಾಯಿತು ಎಂಬಂತೆ ಚಿತ್ರೀಕರಣ ಮುಗಿಸಿದರು.

ಮಳೆಯನ್ನು ಅರಸುತ್ತ ಹೋದವರನ್ನು ಸ್ವರ್ಣಕಮಲ ಅರಸಿಬಂದಿತು. ನಿರ್ದೇಶಕರೂ ಸೇರಿದಂತೆ ತಮ್ಮನ್ನು ಕ್ರಿಯಾಶೀಲವಾಗಿ ತೊಡಗಿಸಿಕೊಂಡ ಇಡೀ ತಂಡಕ್ಕೆ ಸಲ್ಲುವ ಸ್ವರ್ಣಕಮಲ ಅದು !

ಕನ್ನಡದ ಜನತೆ ಗಿರೀಶರಿಗೆ ಅಭಿನಂದನೆ ಸಲ್ಲಿಸುತ್ತಾ ಚಿತ್ರವನ್ನು ನೋಡಲು ಮರೆಯುವುದಿಲ್ಲವೆಂಬ ಆಶಯ ನಮ್ಮದು.

ಕೆ. ಪಿ. ಸ್ವಾಮಿ
೧೬೭, ೧೦ನೇ ಮೇನ್, ೩ನೇ ಘಟ್ಟ
ಪೀಣ್ಯಾ ಕೈಗಾರಿಕಾ ಪ್ರದೇಶ, ಬೆಂಗಳೂರು-೫೬೦ ೦೫೮



*ದುಗ್ಗಜ್ಜ ವಾಸುದೇವರಾವ್*

*ಗಣಪ ಅವಿನಾಶ್*

# ಪರಮಾಣುವಿನಿಂದ ನಾವೆಷ್ಟು ಸುರಕ್ಷಿತ?

ಡಾ॥ ದಯಾನಂದ

ನಾವೆಷ್ಟು ಪ್ರಗತಿ ಸಾಧಿಸಿದರೇನು ? ಜಗತ್ತಿನ ನಾವೆಲ್ಲರೂ ಒಂದೇ ಭುವಿಯ ಮಕ್ಕಳು ಎಂಬುದನ್ನು ಮರೆತಿದ್ದೇವೆ. ಇತಿಹಾಸದಿಂದ ಪಾಠ ಕಲಿಯಲಿಲ್ಲ, ಕೀಳು ಭೂ ರಾಜಕೀಯ, ಅಸೂಯೆ ಮತ್ತು ಸ್ವಾರ್ಥವನ್ನು ಬಿಡಲಿಲ್ಲ. ಅಣು ಬಾಂಬುಗಳನ್ನು ತಯಾರಿಸಿ ನಮ್ಮ ಅವಸಾನಕ್ಕೆ ನಾವೇ ಕಾರಣರಾಗಿದ್ದೇವೆ. ಇನ್ನೂ ಕಾಲ ಮಿಂಚಿಲ್ಲ, ಶಾಂತಿಗಾಗಿ ಮಾತ್ರ ಪರಮಾಣು ಶಕ್ತಿ ಎಂದು ಎಲ್ಲಾ ರಾಷ್ಟ್ರಗಳವರೂ ತೀರ್ಮಾನಿಸಿಕೊಳ್ಳಲು ಇದು ಸುಸಮಯ. 'ಶಾಂತಿಗಾಗಿ' ಪರಮಾಣು ಶಕ್ತಿ ಎಂಬುದು ಪೂರ್ತಿಯಾಗಿ ಅಸಾಧ್ಯವಿಲ್ಲದ್ದು ಎಂಬ ಮಾತು ಸಹ ಇದೆ. ಇಂದು 'ಶಾಂತಿಗಾಗಿ' ಎಂದು ಆರಂಭಿಸಿ, ನಾಳೆ ಅದನ್ನು ಶಾಂತಿ ಕದಡುವುದಕ್ಕೆ ಬಳಸುವುದು ಅಸಂಭವವಲ್ಲ. ಜೊತೆಗೆ, ಅದನ್ನು ಯಾವ ರೀತಿ ಬಳಸಿದರೂ ವಿಕಿರಣದ ಅಪಾಯ ಇದ್ದೇ ಇರುತ್ತದೆ ಎಂಬ ಎಚ್ಚರಿಕೆಯೂ ಅಗತ್ಯ.

ಕಳೆದ ಶತಮಾನದಲ್ಲಿ ಮಾನವ ಕಂಡುಕೊಂಡ ಅದ್ಭುತ ಶಕ್ತಿ ಸಾಧನವೇ ಅಣುಶಕ್ತಿ. ಸಾಂಪ್ರದಾಯಿಕ ಶಕ್ತಿ ಸಂಪನ್ಮೂಲಗಳು ಮುಗಿದುಹೋಗುತ್ತಿರುವುದರಿಂದ ಕಡಿಮೆ ಪರಮಾಣು ಖನಿಜ (ಯುರೇನಿಯಂ, ಥೋರಿಯಂ, ಪ್ಲೂಟಾನಿಯಂ) ಬಳಸಿ, ಅಗ್ಗದ ದರದಲ್ಲಿ ಹೆಚ್ಚು ವಿದ್ಯುಚ್ಛಕ್ತಿಯನ್ನು ಉತ್ಪಾದಿಸಬಹುದು. ಪರಮಾಣು ಶಕ್ತಿಯಿಂದ ಕ್ಷಿಪ್ರಗತಿಯಲ್ಲಿ ಆರ್ಥಿಕ ಪ್ರಗತಿ ಸಾಧಿಸಬಹುದು. ಇಲ್ಲವೇ, ಅಣು ಬಾಂಬುಗಳಿಂದ ಅಷ್ಟೇ ಶೀಘ್ರವಾಗಿ ವಿನಾಶ ಹೊಂದಲೂಬಹುದು.

ಮಾನವನ ಇತಿಹಾಸದಲ್ಲಿ ಅಣುಶಕ್ತಿಯ ಶೋಧನೆ ಒಂದು ಮೈಲಿಗಲ್ಲು. ಆದರೆ, ಅದನ್ನು ಬಾಂಬುಗಳ ತಯಾರಿಕೆಗೆ ಬಳಸುವುದು ಅವಿವೇಕತನ. ಅಣು ಬಾಂಬುಗಳು ವಿನಾಶಕಾರಿಯಾದವು. ಇವುಗಳಷ್ಟು ಮಾರಕವಾದ ಅಸ್ತ್ರಗಳು ಬೇರೆಯಿಲ್ಲ. ಅಣು ಬಾಂಬುಗಳು TNT (TRI NITRO TOLUENE), RDX ಮತ್ತು ಅಮೋನಿಯಂ ನೈಟ್ರೇಟ್‌ಗಳಂತಹ ಸ್ಫೋಟಕ ಮತ್ತು ವಿಷಾನಿಲಗಳನ್ನು ಒಳಗೊಂಡಿರುತ್ತವೆ. ಅಂತಹ ಬಾಂಬುಗಳು ಅಮೆರಿಕಾದಲ್ಲಿ ೧೦೦೦೦ಕ್ಕೂ ಹೆಚ್ಚಿದ್ದರೆ, ರಷ್ಯಾದಲ್ಲಿ ೭೪೫, ಚೈನಾದಲ್ಲಿ ೪೫ ಮತ್ತು ಭಾರತದಲ್ಲಿ ನಾಲ್ಕು ಹಾಗೂ ಪಾಕೀಸ್ತಾನದಲ್ಲಿ ಮೂರಿವೆ. ಅನಧಿಕೃತವಾಗಿ ಯಾರು ಎಷ್ಟು ಇರಿಸಿಕೊಂಡಿದ್ದಾರೋ ತಿಳಿಯದು.

**ಅಣ್ವಸ್ತ್ರದ ದುಷ್ಪ್ರಯೋಗ – ಐತಿಹಾಸಿಕ ದುರಂತ**

ಎರಡನೇ ಮಹಾಯುದ್ಧದಲ್ಲಿ ಅಮೆರಿಕಾ ಜಪಾನಿನ ಹಿರೋಶಿಮಾ ಮತ್ತು ನಾಗಸಾಕಿ ನಗರಗಳ ಮೇಲೆ ೫೭ ವರ್ಷಗಳ ಹಿಂದೆ ಆಗಸ್ಟ್ ೬ ಮತ್ತು ೯, ೧೯೪೫ರಂದು ಮೊಟ್ಟಮೊದಲು ಆಸ್ಫೋಟಿಸಿದ 'ಲಿಟ್ಲ್ ಬಾಯ್' ಮತ್ತು 'ಫ್ಯಾಟ್ ಮ್ಯಾನ್' ಎಂಬ ಹೆಸರಿನ ತಲಾ ಸುಮಾರು ೧೫ ಕಿಲೋಟನ್ (ಒಂದು ಕಿಲೋಟನ್ ಒಂದು ಸಾವಿರ ಟನ್ನುಗಳಿಗೆ ಸಮ) ತೂಗುವ ಅಣು ಬಾಂಬುಗಳು ವೇಗವಾಗಿ ಅಪ್ಪಳಿಸಿದವು. ಇದರಿಂದ ಜಪಾನಿನ ಆ ಎರಡೂ ನಗರಗಳು ಸಂಪೂರ್ಣವಾಗಿ ನಾಶವಾದವು. ಒಂದೂವರೆ ಲಕ್ಷಕ್ಕೂ ಹೆಚ್ಚು ಜನರು ಅಸುನೀಗಿದರು. ಅಲ್ಲಿನ ಅಣು ವಿಕಿರಣ ಕ್ರಿಯೆ ಜೀವ ಜಗತ್ತಿನ ಮೇಲೆ ಈಗಲೂ ದುಷ್ಪರಿಣಾಮ ಉಂಟುಮಾಡುತ್ತಿದೆ! ಅಲ್ಲಿ ಹುಟ್ಟುವ ಮಕ್ಕಳು ಅಂಗವಿಕಲರಾಗಿದ್ದು ಅದರ ಸಂಖ್ಯೆ ಲಕ್ಷಾನುಲಕ್ಷ ದಾಟಿದೆ. ಆದುದರಿಂದ ಅಣ್ವಸ್ತ್ರಗಳ ಬಗೆಗೆ ಎಲ್ಲರಿಗೂ ಎಂದೆಂದಿಗೂ ಅಪಾರ ಭಯ. ಜಪಾನಿನಲ್ಲಾದ ಆ ಘಟನೆ ಎಂದಿಗೂ, ಎಲ್ಲಿಯೂ ಮರುಕಳಿಸಬಾರದು. ಅದಕ್ಕಾಗಿ ಪ್ರಪಂಚದಾದ್ಯಂತ ವರ್ಷಕ್ಕೊಮ್ಮೆ ಆಗಸ್ಟ್ ಮೊದಲ ವಾರದಲ್ಲಿ 'ಅಣುಬಾಂಬ್ ವಿರೋಧಿ ದಿನ'ವನ್ನು ಆಚರಿಸಲಾಗುತ್ತದೆ.

ಮಾನವನ ಒಳಿತಿಗಾಗಿ ಶೋಧಿಸಿದ ಅಣುಶಕ್ತಿಯನ್ನು ಅದರ ಆರಂಭಿಕ ದಿನಗಳಲ್ಲೇ ಅವನು ತನ್ನ ವಿನಾಶಕ್ಕೆ ಬಳಸಿದುದು ದುರದೃಷ್ಟಕರ. ಇದರ ಕೊನೆಯ ಬಳಕೆಯೂ ಸಹ ಈ ಧರೆಯ ಸರ್ವನಾಶಕ್ಕಿರಬಹುದೇ ?

ಇಂದು ಹಿರೋಶಿಮಾ ಮತ್ತು ನಾಗಸಾಕಿಗಳನ್ನು ಪುನರ್ ನಿರ್ಮಿಸಲಾಗಿದೆ. ಅಲ್ಲಿ ಅಣುಬಾಂಬ್ ನಿಷೇಧಿಸಬೇಕೆಂದು ತಾತ್ವಿಕವಾಗಿ ಆಗ್ರಹಿಸುವ ಕೇಂದ್ರ, ಮತ್ತು ಅಣು ವಿಕಿರಣ ಕ್ರಿಯೆಯಿಂದಾಗಿರುವ ಹಾನಿಯನ್ನು ಅಧ್ಯಯನ ಮಾಡುವ ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸಲಾಗಿದೆ. ಅಲ್ಲದೆ ಅಣುಬಾಂಬಿನಿಂದ ಮೃತರಾದವರ ನೆನಪಿಗಾಗಿ ಶಾಂತಿ ಸ್ಮಾರಕಗಳನ್ನು ನಿರ್ಮಿಸಲಾಗಿದೆ. ಇವು ಜಗತ್ತಿಗೆ ಅಣುಬಾಂಬಿನ ವಿಕಾರ ಮುಖಗಳನ್ನು ಪರಿಚಯಿಸುತ್ತಾ ಮನುಕುಲದ ಉಳಿವಿಗಾಗಿ ಶಾಂತಿ, ಪ್ರೀತಿ ಮತ್ತು ಸೌಹಾರ್ದತೆಯ ಅಗತ್ಯಗಳನ್ನು ಸಾರುತ್ತಿವೆ.

**ಶಾಂತಿಗಾಗಿ ಪರಮಾಣು**

ಆಲ್ಬರ್ಟ್ ಐನ್‌ಸ್ಟೀನ್ ಅಣುಶಕ್ತಿಯ ಜನಕ. ಜಪಾನಿನಲ್ಲಿ ಅಣುಬಾಂಬಿನಿಂದಾದ ಮಾರಕ ಹಾನಿಯನ್ನು ಕಂಡು ಮರುಗಿದವರು. ಅಣುಶಕ್ತಿಯ ಸಂಶೋಧನೆಯಿಂದ ಶಕ್ತಿಯ ಉತ್ಪಾದನೆಯಲ್ಲಿ ಹೊಸ ಯುಗವೇ ಪ್ರಾರಂಭವಾಯಿತು. ಮಾನವ ಅಣುಶಕ್ತಿಯನ್ನು ಶಾಂತಿ ಮತ್ತು ಆರ್ಥಿಕ ಪ್ರಗತಿಗಾಗಿ ಮಾತ್ರ ಉಪಯೋಗಿಸಿದರೆ ಸಮಸ್ತ ಮಾನವ ಕುಲವೇ ಉದ್ಧಾರವಾಗಬಹುದು. ಖ್ಯಾತ ಅಣು ವಿಜ್ಞಾನಿ ಡಾ॥ ರಾಜಾರಾಮಣ್ಣನವರು ಕಳೆದ ವರ್ಷದ ಜುಲೈ ತಿಂಗಳಲ್ಲಿ ಮೈಸೂರಿನಲ್ಲಿ ಏರ್ಪಡಿಸಿದ್ದ 'ಅಣುಶಕ್ತಿಯ ಭವಿಷ್ಯ' ಎಂಬ ಉಪನ್ಯಾಸ ಕಾರ್ಯಕ್ರಮವೊಂದರಲ್ಲಿ ಮಾತನಾಡುತ್ತ 'ದೇಶದ ಆರ್ಥಿಕ ಸುಭದ್ರತೆಗೆ ಅಣುಶಕ್ತಿ ಉತ್ಪಾದನೆ ಅಗತ್ಯ' ಎಂದಿದ್ದಾರೆ. ಅಣುಶಕ್ತಿಯಿಂದ ತಯಾರಾಗುವ ಕೆಲವು ರೇಡಿಯೋ ಐಸೋಟೋಪ್‌ಗಳನ್ನು ಕ್ಯಾನ್ಸರ್‌ನಂತಹ ಕಾಯಿಲೆಗಳ ಚಿಕಿತ್ಸೆಯಲ್ಲಿ ಬಳಸಲಾಗುತ್ತಿದೆ. ಹಡಗು ಮತ್ತು ಜಲಾಂತರ್ಗಾಮಿಗಳ ಸಂಚಾರಕ್ಕೆ ಈ ಶಕ್ತಿಯು ಸಾಧನವಾಗಿದೆ. ಒಟ್ಟಾರೆ ಈ ಶಕ್ತಿಯನ್ನು ಇಂದು ಕೈಗಾರಿಕೆ, ಕೃಷಿ, ವೈದ್ಯಕೀಯ ಕ್ಷೇತ್ರ ಹಾಗೂ ಅಣ್ವಸ್ತ್ರಗಳ ತಯಾರಿಕೆಯಲ್ಲಿ ಬಳಸಲಾಗುತ್ತಿದೆ.



ಇಂದು ಹಲವು ದೇಶಗಳು ಪರಮಾಣು ವಿದ್ಯುಚ್ಛಕ್ತಿಯನ್ನು ಉತ್ಪಾದಿಸುತ್ತಿವೆ. ಅಂತರರಾಷ್ಟ್ರೀಯ ಪರಮಾಣು ಶಕ್ತಿ ಏಜೆನ್ಸಿಯ ಪ್ರಕಾರ (೧೯೯೬) ಇಂದು ಒಟ್ಟು ೩೧ ರಾಷ್ಟ್ರಗಳಲ್ಲಿ ೪೩೭ ಅಣು ವಿದ್ಯುಚ್ಛಕ್ತಿ ಉತ್ಪಾದನಾ ಸ್ಥಾವರಗಳಿವೆ. ಪ್ರಪಂಚದಲ್ಲಿ ಲಿಥುವೇನಿಯಾ, ಫ್ರಾನ್ಸ್, ಬೆಲ್ಜಿಯಂ ಮತ್ತು ಸ್ವೀಡನ್ ದೇಶಗಳು ಪ್ರಮುಖ ಅಣುಶಕ್ತಿ ಉತ್ಪಾದನೆ ಮಾಡುತ್ತಿವೆ. ಈ ನಿಟ್ಟಿನಲ್ಲಿ ಭಾರತವು ಹಿಂದೆ ಬಿದ್ದಿಲ್ಲ. ವಾರ್ಷಿಕವಾಗಿ ನಮ್ಮ ದೇಶವು ಸುಮಾರು ೧೦ ಮಿಲಿಯನ್ ಕಿ.ವ್ಯಾ.ನಷ್ಟು ಪರಮಾಣು ವಿದ್ಯುಚ್ಛಕ್ತಿಯನ್ನು ಉತ್ಪಾದಿಸುವ ಸಾಮರ್ಥ್ಯ ಹೊಂದಿದೆ.

**ಬಳಕೆ ಸುರಕ್ಷಿತವಲ್ಲ**

ಅಣುಶಕ್ತಿ ಎಷ್ಟೇ ಉಪಯುಕ್ತವಾದುದಾದರೂ ಅಪಾಯಕಾರಿಯಾದುದು. ಅಣುಸ್ಥಾವರದ ಸೋರಿಕೆ ಮತ್ತು ವಿಕಿರಣ ಕ್ರಿಯೆ ಶತಶತಮಾನಗಳವರೆಗೆ ಸರಿಪಡಿಸಲಾಗದ ಮಾರಕ ದುಷ್ಪರಿಣಾಮಗಳನ್ನು ಜೀವ ಜಗತ್ತಿನ ಪರಿಸರದ ಮೇಲೆ ಉಂಟುಮಾಡುತ್ತವೆ. ಉದಾಹರಣೆಗೆ, ರಷ್ಯಾದ ಚೆರ್ನೋಬಿಲ್ ದುರಂತ (೧೯೮೬)

ಅಣುಶಕ್ತಿಯ ಇನ್ನೊಂದು ಅನಾನುಕೂಲವೆಂದರೆ ಪರಮಾಣು ತ್ಯಾಜ್ಯ ಪದಾರ್ಥಗಳು. ಇವು ದೀರ್ಘಕಾಲದವರೆಗೆ ಉಂಟು ಮಾಡುವ ವಿಕಿರಣ ಕ್ರಿಯೆಯನ್ನು ನಿಷ್ಕ್ರಿಯಮಾಡಲು ಸಾಧ್ಯವೇ ಇಲ್ಲ.

**ಪರಮಾಣುವಿನಿಂದ ಮುಕ್ತವಾಗಲು ನಾವೇನು ಮಾಡಬೇಕು ?**

ಈಗಿರುವ ಅಣ್ವಸ್ತ್ರಗಳಿಂದ ಇಡೀ ಪ್ರಪಂಚವನ್ನು ಸುಮಾರು ಐವತ್ತು ಬಾರಿ ಸುಟ್ಟು ಬೂದಿ ಮಾಡಬಹುದೆಂಬ ಅಭಿಪ್ರಾಯವಿದೆ. ಸ್ವಾರ್ಥ ಸಾಧನೆಗಾಗಿ ಪರಮಾಣು ನೀತಿಯನ್ನು ಕೆಲವು ರಾಷ್ಟ್ರಗಳು ಅನುಸರಿಸುತ್ತಿವೆ. 'ಭಯೋತ್ಪಾದನೆ'ಯಲ್ಲಿ ಪರಮಾಣು ಅಸ್ತ್ರಗಳ ಬಳಕೆ ಆಗಬಾರದು. ನಮಗಿರುವುದೊಂದೇ ಭೂಮಿ. ಅದರ ರಕ್ಷಣೆಗಾಗಿ ಹಲವು ರಕ್ಷಣಾ ಕ್ರಮಗಳನ್ನು ಜರೂರಾಗಿ ಜಾರಿಗೆ ತಂದು ಅನುಸರಿಸಬೇಕಾಗಿದೆ.

- ಶಾಂತಿಗಾಗಿ ಮಾತ್ರ ಪರಮಾಣು ಎಂಬ ಐನ್‌ಸ್ಟೀನ್‌ರ ಕನಸು ನನಸಾಗಬೇಕು. ಈ ಅಪರೂಪದ ಭೂಗ್ರಹದ ಎಲ್ಲ ಜೀವಿಗಳ ಉಳಿವಿಗಾಗಿ ನಮಗೆ ಅಣುಶಕ್ತಿ ಬೇಕೋ, ಬೇಡವೋ ಎಂಬುದನ್ನು ಮೊದಲು ನಿರ್ಧರಿಸಬೇಕು. ಅಣುಶಕ್ತಿ ಬೇಕು ಎಂದಾದರೆ ಅದು ಶಾಂತಿ ಮತ್ತು ಪ್ರಗತಿಗಾಗಿ ಮಾತ್ರ ಬಳಕೆಯಾಗಲಿ. ಅದರ ಬಳಕೆಯಲ್ಲಿ ಸುರಕ್ಷತೆಗೆ ಹೆಚ್ಚಿನ ಆದ್ಯತೆಯಿರಲಿ.
- ಪರಮಾಣು ವಿದ್ಯುಚ್ಛಕ್ತಿಗೆ ಬದಲಾಗಿ ಪರಿಸರ ಸ್ನೇಹಿ ಸೌರಶಕ್ತಿ ವ್ಯಾಪಕವಾಗಿ ಬಳಕೆಗೆ ಬರಲಿ. ಅದರ ಬಳಕೆಗಿರುವ ಹೂಡಿಕೆಯ ವೆಚ್ಚ ಕಡಿಮೆಯಾಗಲಿ.
- ಪ್ರಪಂಚದ ಕೆಲವು ಬಲಿಷ್ಠ ರಾಷ್ಟ್ರಗಳು ಅಣು ಬಾಂಬುಗಳನ್ನು ಪೈಪೋಟಿಯಿಂದ ತಯಾರಿಸಿರುವುದು ನಮ್ಮ ಅಳಿವು-ಉಳಿವಿನ ಪ್ರಶ್ನೆಯಾಗಿದೆ. ವಿಪರ್ಯಾಸವೆಂದರೆ ಅಣುಬಾಂಬುಗಳಿಂದ ನಾವು ಏನನ್ನೋ ಸಾಧಿಸುತ್ತೇವೆಂದು ನಂಬಿದ್ದರೆ, ಅವು ನಮ್ಮನ್ನೇ ಸರ್ವನಾಶ ಮಾಡಲು ಹೊಂಚುಹಾಕುತ್ತಿವೆ. 'ರಕ್ಷಣೆಗಾಗಿ ಪರಮಾಣು ಬಾಂಬ್' – ಈ ಮಾತು ಎಷ್ಟು ಸಮಂಜಸ ಯೋಚಿಸಬೇಕು.
- ನಾವೆಲ್ಲರೂ ಯುದ್ಧ ಮತ್ತು ಅಣ್ವಸ್ತ್ರವೆಂಬ ಮಾರಕಾಸ್ತ್ರದ ನೆರಳಲ್ಲಿ ಬದುಕುತ್ತಿದ್ದೇವೆ. ಈ ಆತಂಕ ಕೊನೆಯಾಗುವುದ್ಯಾವಾಗ ? ನಮ್ಮ ಉಳಿವು ಕೇವಲ ಸಿ.ಟಿ.ಬಿ.ಟಿ.ಗೆ ಸಹಿ ಮಾಡುವುದರಲ್ಲಿಲ್ಲ, ಅದರ ಪಾಲನೆಯಲ್ಲಿದೆ. ಯಾವುದೇ ರಾಷ್ಟ್ರವು ಎಂಥದೇ ಪರಿಸ್ಥಿತಿಯಲ್ಲಿಯೂ ಪರಮಾಣು ಅಸ್ತ್ರವನ್ನು ಬಳಸಲೇ ಬಾರದೆಂಬ ಕಡ್ಡಾಯದ ನೀತಿ ಜಾರಿಗೆ ಬರಬೇಕು. ವಿಶ್ವಸಂಸ್ಥೆ ಇದರ ಉಸ್ತುವಾರಿ ವಹಿಸಬೇಕು. ಅಣ್ವಸ್ತ್ರ ನಿಷೇಧದಲ್ಲಿ ಅಮೆರಿಕಾದಂತಹ ಬಲಿಷ್ಠ ರಾಷ್ಟ್ರಗಳು ಸಕ್ರಿಯವಾಗಿ ತೊಡಗಿಕೊಳ್ಳಬೇಕು ಮತ್ತು ಅವು ತಮ್ಮ ದ್ವಂದ್ವ ನೀತಿಯನ್ನು ಬಿಡಬೇಕು.
- ಮೊದಲೇ ಈ ಭುವಿ ಬಡತನ, ಭೂಕಂಪ, ಬರಗಾಲ, ಪ್ರವಾಹ, ಕಾಡ್ಗಿಚ್ಚು, ಭಯೋತ್ಪಾದನೆ ಮೊದಲಾದ ಹಲವು ಸಮಸ್ಯೆಗಳಿಂದ ಸೊರಗಿರುವಾಗ ಅದು ಅಣು ಬಾಂಬುಗಳ ಆಕ್ರಮಣದಿಂದ ನಾಮಾವಶೇಷವಾಗ ಬೇಕೇ ? 'ಹೊಟ್ಟೆಗೆ ಹಿಟ್ಟಿಲ್ಲದಿರುವಾಗ ಜುಟ್ಟಿಗೇಕೆ ಮಲ್ಲಿಗೆ ಹೂವು' ? ನಮ್ಮ ದೇಶ, ಪಾಕಿಸ್ತಾನ ಮತ್ತು ಪ್ರಪಂಚದ ಹಲವು ಹಿಂದುಳಿದ ದೇಶಗಳ ಜನರು ಹಸಿವಿನಿಂದ ಬಳಲುತ್ತಿರುವಾಗ ನಮಗೇಕೆ ಬೇಕು ಅಣು ಬಾಂಬು ? ಅಣುಶಕ್ತಿಯನ್ನು ಉದ್ಧಾರದ ಸಾಧನವಾಗಿ ಮಾತ್ರ ಬಳಸಬೇಕೇ ಹೊರತು ಅವಸಾನಕ್ಕಲ್ಲ.
- ರಾಷ್ಟ್ರ ರಾಷ್ಟ್ರಗಳ ನಡುವಿನ ಗಡಿ ಸಮಸ್ಯೆ ಮತ್ತು ಇತರ ಯಾವುದೇ ಭಿನ್ನಾಭಿಪ್ರಾಯಕ್ಕೆ ಭಯೋತ್ಪಾದನೆ ಮತ್ತು ಯುದ್ಧ ಪರಿಹಾರವಲ್ಲ. ಭಿನ್ನಾಭಿಪ್ರಾಯಗಳನ್ನು ಮಾತುಕತೆಯ ಮೂಲಕ ಪರಿಹರಿಸಿಕೊಳ್ಳಬೇಕು. ಕೊಡು-ಕೊಳ್ಳುವಿಕೆಯ ಸೂತ್ರ ಜಾರಿಗೆ ಬರಲಿ.
- ಎರಡನೇ ಪ್ರಪಂಚ ಯುದ್ಧದ ನಂತರ ಸ್ಥಾಪನೆಗೊಂಡ ವಿಶ್ವಸಂಸ್ಥೆ ಯುದ್ಧಗಳನ್ನು ತಡೆಯುವುದರಲ್ಲಿ ಮತ್ತು ಅಣ್ವಸ್ತ್ರಗಳ ಪರೀಕ್ಷೆ ತಯಾರಿ ನಿಯಂತ್ರಿಸುವುದರಲ್ಲಿ ವಿಫಲವಾಗಿದೆ. ಅದು ಪ್ರಬಲ ರಾಷ್ಟ್ರಗಳ ಕಪಿಮುಷ್ಟಿಯಿಂದ ಮುಕ್ತವಾಗಬೇಕು.
- ಜಪಾನ್ ಎರಡನೇ ಮಹಾಯುದ್ಧದಲ್ಲಿ ತನ್ನೆರಡು ಪ್ರಮುಖ ನಗರಗಳನ್ನು ಕಳೆದುಕೊಂಡು ಆರ್ಥಿಕತೆ ಹದಗೆಟ್ಟರೂ, ಹಲವು ನೈಸರ್ಗಿಕ ವಿಕೋಪಗಳ ನಡುವೆಯೂ ಕೆಲವೇ ವರ್ಷಗಳಲ್ಲಿ ಪವಾಡದ ರೀತಿಯಲ್ಲಿ ಪ್ರಗತಿಯನ್ನು ಸಾಧಿಸಿರುವುದು ಶ್ಲಾಘನೀಯ. ಅಣ್ವಸ್ತ್ರಗಳಿಂದ ನಾಶವಾಗುವ ಎಲ್ಲ ರಾಷ್ಟ್ರಗಳೂ ಹೀಗೆಯೇ ಪವಾಡ ಸಾಧಿಸಬಹುದೆನ್ನುವ ಭ್ರಾಂತಿ ಬೇಡ.
- ೨೦ನೇ ಶತಮಾನದ ಅಣುವೆಂಬ ಅದ್ಭುತ ಶಕ್ತಿ ಸಾಧನ ೨೧ನೇ ಶತಮಾನದ ಅಂತ್ಯಕ್ಕೆ ಕಾರಣವಾಗದಿರಲಿ. ಅಣ್ವಸ್ತ್ರ ಬಳಕೆ ಮತ್ತು ಉತ್ಪಾದನೆಯ ನಿಷೇಧಕ್ಕೆ ಹಿರೋಶಿಮಾ ಮತ್ತು ನಾಗಸಾಕಿ ದಿನಗಳು ಸ್ಫೂರ್ತಿಯಾಗಲಿ. ಅಣುಬಾಂಬು ಸ್ಫೋಟದಿಂದ ಗತಿಸಿದ ಎಲ್ಲ ಹುತಾತ್ಮರ ನೆನಪಿಗೆ ಪ್ರಪಂಚಕ್ಕೆ ನಾವು ನೀಡಬಹುದಾದ ಏಕೈಕ ಕೊಡುಗೆ ಏನೆಂದರೆ – ಅಣ್ವಸ್ತ್ರಗಳ ನಿರ್ಮಾಣ ಮತ್ತು ಬಳಕೆಯ ನಿಷೇಧ.
- ಅಣ್ವಸ್ತ್ರಗಳಿಂದ ಮುಕ್ತವಾಗಲು ಕಾಲವಿನ್ನೂ ಮಿಂಚಿಲ್ಲ. ಜಗತ್ತಿನ ನಾವೆಲ್ಲರೂ ಅಣ್ಣ-ತಮ್ಮಂದಿರಂತೆ ಜಾತಿ-ಮತ-ಭೇದ ಮರೆತು, ಗಡಿಗಳಿಲ್ಲದೆ, ಗೋಡೆಗಳಿಲ್ಲದೆ, ಯುದ್ಧ ಭೀತಿಯಿಲ್ಲದೆ ಜೀವಿಸುವ ನಿಟ್ಟಿನಲ್ಲಿ ಯೋಚಿಸೋಣವೇ ? ಆ ದಿನಗಳಿಗಾಗಿ ಎದುರು ನೋಡೋಣವೇ ?

**ಡಾ॥ ದಯಾನಂದ**
೪೦೭, ನವಿಲು ರಸ್ತೆ, ೪ನೇ ಕ್ರಾಸ್ ಎದುರು, ಎ ಮತ್ತು ಬಿ ಬ್ಲಾಕ್
ಕುವೆಂಪುನಗರ, ಮೈಸೂರು-೫೭೦ ೦೨೩

## ಕವಿದ ಮೋಡ

ಏಕೆ ಕವಿದುಕೊಂಡೆ ಮೋಡವಾಗಿ
ದೀರ್ಘವಾದ ಕಾಯುವಿಕೆಯ ಮಳೆಗಾಗಿ
ವರ್ಷಧಾರೆ, ಧರೆಯ ಸ್ಪರ್ಶಿಸಬಾರದೇ ?
ಆ ಧರೆ ನಾನಾಗಬಾರದೇ ?

ಆ ಧರೆಯ ಧೂಳಿನ ರಾಶಿ ರಾಶಿ ಕಣಗಳು
ಬಿರುಗಾಳಿಗೆ ಸಿಲುಕಿ, ಕೊಳವೆಯಾಗಿ
ತಿರುತಿರುಗಿ ಮೇಲೇರಿ
ಕವಿದ ಮೋಡವನ್ನು ಬಡಿದೆಬ್ಬಿಸುತ್ತದೆಯೋ
ಅಂದೇ ಭೋರ್ಗರೆದು ಧಾರಾಕಾರ
ಮಳೆ ಸುರಿಯುತ್ತೆ.

ಮಳೆರಾಯನ ಸ್ಪರ್ಶದಿಂದ ತೇವಗೊಂಡ ಧರೆ
ಮೋಡದಿಂದ ಸೋನೆ ತೊಟ್ಟಿಕ್ಕಿದಂತೆಲ್ಲಾ
ಧರೆಯ ರಸಜ್ವಾಲೆಯಲ್ಲಿ ಮಿಂದೆದ್ದ ಜೀವ
ತಂಪೆಲರಿನ ನಿಡುಸುಯ್ಯುತ್ತೆ.

ಮಳೆರಾಯನ ಆಹ್ಲಾದ ಧರೆಯೆಲ್ಲಡಗೆ
ಸಹಸ್ರ ಜೀವ ಕಣಗಳು ಪುಟಿದೇಳುತ್ತೆ
ಸುಖವನ್ನುಂಡ ಧರೆಯು, ಒಡಲನು ತುಂಬಿಕೊಂಡು
ಆಸೆಯ ಬಸಿರೊಳು ಗರ್ಭ ಕಟ್ಟುತ್ತೆ.



ಎಚ್. ಓಂಕಾರಸ್ವಾಮಿ
ಕುವೆಂಪು ವಿಶ್ವವಿದ್ಯಾಲಯ, ಜ್ಞಾನ ಸಹ್ಯಾದ್ರಿ,
ಶಂಕರಘಟ್ಟ, ಶಿವಮೊಗ್ಗ

# ಕಾರಿಡಾರ್ ಯೋಜನೆ : ಸಾಮ್ರಾಜ್ಯಶಾಹಿ ಆಕ್ರಮಣ

ನಾ. ದಿವಾಕರ

*ಒಂದು ವೇಳೆ ಈ ಕಾರಿಡಾರ್ ಯೋಜನೆ ಅನುಷ್ಠಾನಗೊಂಡಲ್ಲಿ ಮುಂದಿನ ಅಭಿವೃದ್ಧಿ ಪಥಕ್ಕೆ ಇದನ್ನು ಒಂದು ಮಾದರಿಯಾಗಿ ತೆಗೆದುಕೊಳ್ಳುವ ಸಾಧ್ಯತೆ ಇದೆ. ರಾಜ್ಯಾದ್ಯಂತ ಈ ರೀತಿಯ ಕಾರಿಡಾರ್‌ಗಳು, ಟೌನ್‌ಶಿಪ್‌ಗಳು ತಲೆ ಎತ್ತಬಹುದು. ಈ ಬ್ರಹ್ಮ ರಾಕ್ಷಸನನ್ನು ತಡೆಗಟ್ಟುವುದು ಪ್ರಜ್ಞಾವಂತ ಜನತೆಯ ಕರ್ತವ್ಯವಾಗಬೇಕು.*

*ಇನ್ನೊಂದು ಸ್ವಾರಸ್ಯ : ಈ ಯೋಜನೆಯನ್ನು ಕಾರ್ಯಗತಗೊಳಿಸಲಿರುವ 'ನೈಸ್' ಕಂಪನಿ ಎಷ್ಟೊಂದು ನೈಸ್ ಎಂದರೆ ಈವರೆಗೆ ಯಾವ ಬ್ಯಾಂಕೂ ಅದಕ್ಕೆ ಸಾಲ ಮಂಜೂರಾತಿ ಮಾಡಲು ಒಪ್ಪಿಲ್ಲ. ಸರ್ಕಾರದ ಆಯ್ಕೆ ಅಂಥ ಕಂಪನಿ, ಯೋಜನೆ ಅಂಥ ಜನವಿರೋಧಿ.*

೯೦ರ ದಶಕದ ನಂತರದಲ್ಲಿ ತೀವ್ರವಾಗುತ್ತಿರುವ ಜಾಗತೀಕರಣ ಪ್ರಕ್ರಿಯೆಯ ದುಷ್ಪರಿಣಾಮಗಳು ಭಾರತೀಯ ಸಾಮಾಜಿಕ-ಆರ್ಥಿಕ ಕ್ಷೇತ್ರದ ಮೇಲೆ ಗಂಭೀರ ರೂಪದಲ್ಲಿ ಪರಿಣಾಮ ಬೀರುತ್ತಿವೆ. ಬಹುರಾಷ್ಟ್ರೀಯ ಕಂಪನಿಗಳ (ಬ.ರಾ.ಕಂ.) ಅನಿವಾಸಿ ಭಾರತೀಯರ ಹಾಗೂ ದೇಶೀ ಶ್ರೀಮಂತರ ಭೋಗ-ವಿಲಾಸ ಜೀವನಶೈಲಿಗೆ ಸ್ಪಂದಿಸುವ ಈ ಪ್ರಕ್ರಿಯೆಗೆ ಭಾರತದಲ್ಲಿನ ಜಾಗತೀಕರಣ ಪೂಜಾರಿಗಳು ಪರಾಕ್ ಹೇಳುವುದರಲ್ಲಿಯೇ ಮಗ್ನರಾಗಿದ್ದಾರೆ. ಇದರಿಂದ ಭಾರತೀಯ ಸಾಮಾಜಿಕ-ಆರ್ಥಿಕ-ಸಾಂಸ್ಕೃತಿಕ ಹಾಗೂ ರಾಜಕೀಯ ರಚನೆಯೇ ತನ್ನ ಅಂತಸ್ಸತ್ವವನ್ನು ಕಳೆದುಕೊಳ್ಳುತ್ತಿದೆ. ಜಾಗತೀಕರಣ ಪ್ರಕ್ರಿಯೆಯ ಹಿನ್ನೆಲೆಯಲ್ಲೇ ಬಲಗೊಳ್ಳುತ್ತಿರುವ ಬಲ ಪಂಥೀಯ ರಾಜಕಾರಣ ಸಂಘ ಪರಿವಾರದ ರೂಪದಲ್ಲಿ ಪ್ರಕಟಗೊಳ್ಳುತ್ತಿದ್ದು ಸಾಮಾನ್ಯ ಜನತೆ ಮೂಲಭೂತ ಹಕ್ಕುಗಳನ್ನು ಕಳೆದುಕೊಳ್ಳುತ್ತಿದ್ದಾರೆ. ವಿಶ್ವ ಬ್ಯಾಂಕ್, ಐ.ಎಂ.ಎಫ್. ವಿಶ್ವ ವ್ಯಾಪಾರ ಸಂಘಟನೆಗಳ ಹೊಸ ಜಗತ್ತಿನಲ್ಲಿ ಅಭಿವೃದ್ಧಿ ಹಾಗೂ ಏಳಿಗೆಯ ಹೆಸರಿನಲ್ಲಿ ಜನರ ಜೀವನ ದುಸ್ತರವಾಗುತ್ತಿದೆ. ಇಂತಹ ಒಂದು ಅಭಿವೃದ್ಧಿ ಯೋಜನೆ ಕರ್ನಾಟಕದಲ್ಲೂ ಬ್ರಹ್ಮ ರಾಕ್ಷಸನಂತೆ ತಲೆಯೆತ್ತಿ ನಿಂತಿದೆ.

ಬೆಂಗಳೂರು-ಮೈಸೂರು ನಡುವೆ ಸರ್ಕಾರವು ನಿರ್ಮಿಸಲು ಯೋಜಿಸಿರುವ ಬೆಂಗಳೂರು ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ (ಬಿ.ಎಂ.ಐ.ಸಿ.) ಯೋಜನೆಯು ಮೈಸೂರು-ಮಂಡ್ಯ ಪ್ರಾಂತ್ಯದ ಜನತೆಯ ಜೀವನಕ್ಕೆ ಸಂಚಕಾರ ತರುವಂತಿದೆ. ಶ್ರೀಮಂತ ವರ್ಗಗಳ ಹಾಗೂ ಅನಿವಾಸಿ ಭಾರತೀಯರ ಭೋಗದ ಜೀವನಕ್ಕೆ ಉಪಯುಕ್ತವಾಗುವ ಈ ಕಾರಿಡಾರ್ ಯೋಜನೆಯ ವಿರುದ್ಧ ಕಳೆದ ಐದಾರು ವರ್ಷಗಳಿಂದ ಜನತೆ ಹೋರಾಡುತ್ತಿದ್ದಾರೆ. ತಮ್ಮ ಅಳಿವು ಉಳಿವಿನ ಪ್ರಶ್ನೆ ಎದುರಿಸುತ್ತಿರುವ ಈ ಪ್ರದೇಶದ ರೈತ ಸಮುದಾಯದವರು ಈ ಕಾರಿಡಾರ್ ಯೋಜನೆ ಅನುಷ್ಠಾನಗೊಳ್ಳದಂತೆ ಉಗ್ರ ಚಳುವಳಿ ನಡೆಸುತ್ತಿದ್ದಾರೆ. ಆದರೂ ಕರ್ನಾಟಕ ಸರ್ಕಾರವು ಕಾರಿಡಾರ್ ನಿರ್ಮಾಣಕ್ಕೆ ಎಲ್ಲಾ ಸಿದ್ಧತೆಗಳನ್ನೂ ನಡೆಸುತ್ತಿದೆ. ಮುಂದಿನ ತಿಂಗಳೊಳಗಾಗಿ ಕಾರ್ಯ ಆರಂಭವಾಗುವುದೆಂದು ಸಚಿವ ಧರ್ಮ್‌ಸಿಂಗ್ ಹೇಳಿಕೆ ನೀಡಿದ್ದಾರೆ. ಇದು ಅಂಥ ನಾಲ್ಕನೆಯ ಅಥವಾ ಐದನೆಯ ಹೇಳಿಕೆ ಇರಬೇಕು !

ಬೆಂಗಳೂರು-ಮೈಸೂರು ನಡುವೆ ಪ್ರಸ್ತುತ ಎರಡು ರಾಜ್ಯ ಹೆದ್ದಾರಿಗಳಿವೆ. ರಾಜ್ಯ ಹೆದ್ದಾರಿ ಸಂಖ್ಯೆ ೧೭ ರಾಮನಗರ, ಮಂಡ್ಯದ ಮೂಲಕ ಹಾದುಹೋಗುತ್ತದೆ. ಇನ್ನೊಂದು ಹೆದ್ದಾರಿ ೮೬, ಕನಕಪುರ, ಮಳವಳ್ಳಿಯ ಮೂಲಕ ಹಾದುಹೋಗುತ್ತದೆ. ಎರಡೂ ನಗರಗಳ ನಡುವೆ ರೈಲು ಮಾರ್ಗವೂ ಇದೆ. ಆದರೂ ಇತ್ತೀಚಿನ ವರ್ಷಗಳಲ್ಲಿ ಎರಡೂ ನಗರಗಳ ನಡುವಿನ ಸಂಚಾರ ತೀವ್ರವಾಗಿ ಉಲ್ಬಣಗೊಂಡಿದೆ. ಮೈಸೂರು ಒಂದು ಉತ್ತಮ ಸಾಂಸ್ಕೃತಿಕ ಪ್ರವಾಸೀ ಕೇಂದ್ರವಾದ್ದರಿಂದ ಈ ಮಾರ್ಗದಲ್ಲಿ ಜನ, ವಾಹನ ಸಂಚಾರ ದಿನೇ ದಿನೇ ಹೆಚ್ಚಾಗುತ್ತಲೇ ಇದೆ. ಪ್ರಸ್ತುತ ಹೆದ್ದಾರಿ ೧೭ರಲ್ಲಿಯೇ ಅತಿ ಹೆಚ್ಚು ವಾಹನ ಸಂಚಾರವಿರುವುದರಿಂದ ಈ ಮಾರ್ಗವನ್ನು ನಾಲ್ಕು ರಸ್ತೆಗಳಿಗೆ ಪರಿವರ್ತಿಸುವುದರಿಂದ ಸಂಚಾರವನ್ನು ಬಹಳಷ್ಟು ನಿಯಂತ್ರಿಸಬಹುದು. ಜೊತೆಗೆ ರೈಲು ಮಾರ್ಗವನ್ನು ಜೋಡಿ ಮಾರ್ಗವಾಗಿ ಮಾಡುವುದರಿಂದಲೂ ವಾಹನ ದಟ್ಟಣೆ ಕಡಿಮೆ ಮಾಡಬಹುದು. ಆದರೆ ಸರ್ಕಾರ ಈ ಯಾವ ಯೋಜನೆಗಳಲ್ಲೂ ಆಸಕ್ತಿ ವಹಿಸುತ್ತಿಲ್ಲ. ಈ ಯೋಜನೆಯಿಂದ ಅಧಿಕಾರಶಾಹಿಗಳಿಗಾಗಲಿ, ಶಾಸಕರುಗಳಿಗಾಗಲಿ ಗುತ್ತಿಗೆದಾರರಿಗಾಗಲಿ ಹೆಚ್ಚು ಲಾಭವಾಗುವುದಿಲ್ಲ. ಇಂದಿನ ರಾಜಕಾರಣದಲ್ಲಿ ಸರ್ಕಾರ ನಡೆಸುವುದೂ ಒಂದು ವ್ಯಾಪಾರವಾದ್ದರಿಂದ, ಲಾಭದಾಯಕವಲ್ಲದ ಯಾವ ಕೆಲಸವನ್ನೂ ಆಳುವ ವರ್ಗಗಳು ಕೈಗೊಳ್ಳುವುದಿಲ್ಲ. ಪ್ರಜೆಗಳ ಏಳಿಗೆ, ಸಾಮಾಜಿಕ ಅಭಿವೃದ್ಧಿಯ ಹೆಸರಿನಲ್ಲಿ ಲೂಟಿ ಮಾಡುವುದನ್ನೇ ಮುಖ್ಯ ಧ್ಯೇಯವನ್ನಾಗಿಸಿಕೊಂಡು ಚುನಾವಣೆಗಳಲ್ಲಿ ಆರಿಸಿ ಬರುವ ಈ ಜನಪ್ರತಿನಿಧಿಗಳಿಗೆ ರಾಜ್ಯದ ಬೊಕ್ಕಸ ಬರಿದಾದರೂ ಚಿಂತೆಯಿರುವುದಿಲ್ಲ. ಬದಲಾಗಿ, ಅವರ ಮತ್ತವರ ಪಕ್ಷಗಳ ಬೊಕ್ಕಸ ತುಂಬಿದರೆ ಸಾಕು. ಹಾಗಾಗಿಯೇ ಬೆಂಗಳೂರು-ಮೈಸೂರು ನಡುವೆ ರಸ್ತೆಯನ್ನು ವಿಸ್ತರಿಸಲು ಸರ್ಕಾರ ಹಿಂಜರಿಯುತ್ತಿದೆ. ಇದಕ್ಕಿಂತಲೂ ಹೆಚ್ಚು ಫಲಕಾರಿಯಾದ, ಸಾಮ್ರಾಜ್ಯಶಾಹಿಗಳ ಮನ ಒಲಿಸಲು ಸಹಾಯಕವಾಗುವ, ಬ.ರಾ.ಕಂ.ಗಳ ಖಜಾನೆ ತುಂಬಿಸುವ ಕಾರಿಡಾರ್ ಯೋಜನೆಯನ್ನು ಅನುಷ್ಠಾನಗೊಳಿಸಲು ಸರ್ಕಾರ ಶತಾಯಗತಾಯ ಯತ್ನಿಸುತ್ತಿದೆ.

## ಬಿ.ಎಂ.ಐ.ಸಿ. ಯೋಜನೆಯ ಹಿನ್ನೆಲೆ

ಪ್ರಸ್ತುತ ವಿವಾದಾಸ್ಪದ ಕಾರಿಡಾರ್ ಯೋಜನೆ ಇತ್ತೀಚಿನದೇನಲ್ಲ. ೮೦ರ ದಶಕದ ಅಂತ್ಯದಲ್ಲಿಯೇ, ಜನತಾದಳ ಸರ್ಕಾರವಿದ್ದಾಗ ಬೆಂಗಳೂರು-ಮೈಸೂರು ನಡುವೆ ಒಂದು ಸೂಪರ್ ಎಕ್ಸ್‌ಪ್ರೆಸ್ ಹೈವೇ ನಿರ್ಮಿಸುವ ಯೋಜನೆ ಸಿದ್ಧವಾಗಿತ್ತು. ಇಂಟರ್ ಕಾಂಟಿನೆಂಟಲ್ ಕನ್ಸಲ್ಟೆಂಟ್ಸ್ ಎಂಬ ಬ.ರಾ.ಕಂ. ಈ ಯೋಜನೆಯ ಅನುಷ್ಠಾನಕ್ಕೆ ಬಂಡವಾಳ ಹೂಡಲು ಯಾವುದೇ ಖಾಸಗಿ ಕಂಪನಿ ಮುಂದಾಗದ ಕಾರಣ ಯೋಜನೆಯನ್ನು ಕೈಬಿಟ್ಟಿತು. ೧೯೯೩ರಲ್ಲಿ ಪುನಃ ಇದೇ ಯೋಜನೆಗೆ ಏಷಿಯಾ ಅಭಿವೃದ್ಧಿ ಬ್ಯಾಂಕ್ (ಎ.ಡಿ.ಬಿ.) ಒಂದು ಯೋಜನಾ ವರದಿ ತಯಾರಿಸಿ ೪ ರಸ್ತೆಗಳ ಸೂಪರ್ ಎಕ್ಸ್‌ಪ್ರೆಸ್ ಹೈವೇ ನಿರ್ಮಾಣಕ್ಕಾಗಿ ೩೦೦ ಕೋಟಿ ರೂ.ಗಳ ವೆಚ್ಚದ, ೨,೫೦೦ ಎಕರೆ ಪ್ರದೇಶವನ್ನೊಳಗೊಂಡ, ನೀಲಿ ನಕ್ಷೆಯನ್ನು ಸರ್ಕಾರದ ಮುಂದಿರಿಸಿತು. ಈ ಯೋಜನೆಯ ಅನುಷ್ಠಾನಕ್ಕೆ ಸರ್ಕಾರವು ಬಂಡವಾಳ ಹೂಡುವುದು ಅವಶ್ಯವಾಗಿತ್ತು. ಆದರೆ ಆ ವೇಳೆಗಾಗಲೇ ಸಾರ್ವಜನಿಕ ಬಂಡವಾಳ ಹೂಡಿಕೆಯನ್ನು ಸಂಪೂರ್ಣವಾಗಿ ಕೈಬಿಟ್ಟಿದ್ದ ಸರ್ಕಾರವು ಈ ಯೋಜನೆಗೆ ಸಹಾಯಧನ ನೀಡಲೂ ಒಪ್ಪದ ಕಾರಣ ಈ ಯೋಜನೆಯನ್ನೂ ಕೈಬಿಡಲಾಯಿತು.

೧೯೯೪ರಲ್ಲಿ ದೇವೇಗೌಡರು ಮುಖ್ಯಮಂತ್ರಿಗಳಾಗಿದ್ದಾಗ ಪುನಶ್ಚೇತನ ಪಡೆದ ಈ ಯೋಜನೆ ಹೊಸ ಸ್ವರೂಪವನ್ನು ಪಡೆಯಿತು. ಕೇವಲ ೪ ರಸ್ತೆಗಳ ಸೂಪರ್ ಹೈವೇ ನಿರ್ಮಿಸುವುದರಿಂದ ಯಾವುದೇ ಲಾಭವಾಗುವುದಿಲ್ಲ ಎಂದು ಗ್ರಹಿಸಿದ ಬ.ರಾ.ಕಂ.ಗಳು ಸರ್ಕಾರದೊಡನೆ ಒಂದು ಒಪ್ಪಂದ ಮಾಡಿಕೊಂಡವು. ಈ ಒಪ್ಪಂದದ ಪ್ರಕಾರ ೧೪೦ ಕಿಲೋಮೀಟರ್ ಉದ್ದದ ಹೆದ್ದಾರಿಯಲ್ಲಿ ಐದು ಟೌನ್‌ಷಿಪ್‌ಗಳನ್ನು ನಿರ್ಮಿಸಲು ಯೋಚಿಸಲಾಯಿತು. ಅಷ್ಟೇ ಅಲ್ಲದೆ ಈ ಹೆದ್ದಾರಿಗಾಗಿ ಬೇರೆ ಮಾರ್ಗವನ್ನೂ ಗುರುತಿಸಲಾಯಿತು. ಈ ಒಪ್ಪಂದದಿಂದ ಹೊರಬಂದ ಯೋಜನೆಯೇ ಬಿ.ಎಂ.ಐ.ಸಿ. (ಕಾರಿಡಾರ್) ಯೋಜನೆ, ಕಲ್ಯಾಣಿ ಗ್ರೂಪ್‌ನ ನಂದಿ ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಎಂಟರ್‌ಪ್ರೈಸಸ್ ಎಂಬ ಕಂಪನಿಗೆ ಕಾರಿಡಾರ್ ನಿರ್ಮಾಣದ ಹಕ್ಕುಗಳನ್ನು ನೀಡಲಾಯಿತು.

## ಕಾರಿಡಾರ್ ಯೋಜನೆಯ ಸ್ವರೂಪ

ಬೆಂಗಳೂರು ಮೈಸೂರು ನಡುವಿನ ೧೪೦ ಕಿ. ಮೀ. ದೂರವನ್ನು ಕ್ರಮಿಸುವ ಈ ಸೂಪರ್ ಎಕ್ಸ್‌ಪ್ರೆಸ್ ಹೆದ್ದಾರಿಯ ನಿರ್ಮಾಣದಲ್ಲಿ ನಾಲ್ಕು ಹಂತಗಳನ್ನು ಗುರುತಿಸಬಹುದು. ಈ ಹೆದ್ದಾರಿಯನ್ನು ರಾಷ್ಟ್ರೀಯ ಹೆದ್ದಾರಿ ೭ (ಚೆನ್ನೈ-ಬೆಂಗಳೂರು) ಮತ್ತು ಹೆದ್ದಾರಿ ೪ (ಬೆಂಗಳೂರು-ಪೂನ)ಗಳಿಗೆ ಸೇರಿಸುವಂತೆ ವರ್ತುಲ ರಸ್ತೆಗಳನ್ನು ನಿರ್ಮಿಸುವುದು, ೬ ರಸ್ತೆಗಳ ಸೂಪರ್ ಹೈವೆ ನಿರ್ಮಿಸುವುದು, ನಡುವೆ ೫ ಟೌನ್‌ಶಿಪ್‌ಗಳನ್ನು ನಿರ್ಮಿಸುವುದು, ಹಾಗೂ ರಸ್ತೆಯ ಎರಡೂ ಬದಿಗಳಲ್ಲಿ ೨೫ ಅಡಿ ಎತ್ತರದ ಗೋಡೆಗಳನ್ನು ನಿರ್ಮಿಸುವುದು. ೨೫೦೦ ಕೋಟಿ ರೂ.ಗಳ ಈ ಯೋಜನೆಗೆ ಸುಮಾರು ೨೨ ಸಾವಿರ ಎಕರೆ ಜಮೀನು ಬೇಕಾಗುತ್ತದೆ. ೯೦ ಮೀಟರ್ ಅಗಲದ ಈ ರಸ್ತೆಯಲ್ಲಿ ಕಾರುಗಳು ಗಂಟೆಗೆ ೧೨೦ ಕಿ. ಮೀ ವೇಗದಲ್ಲಿ ಸಂಚರಿಸಬಹುದು. ಅಂದರೆ ಬೆಂಗಳೂರಿನಿಂದ ಮೈಸೂರಿಗೆ ಕೇವಲ ೮೦ ನಿಮಿಷಗಳಲ್ಲಿ ತಲುಪಬಹುದು. ನೀರಾವರಿ ಕಾಲುವೆಗಳ ನೀರು ಹರಿಯಲು ೫೦ ಸೇತುವೆ

ಗಳನ್ನು ನಿರ್ಮಿಸಲಾಗುವುದು. ಇದಲ್ಲದೆ ಗ್ರಾಮಸ್ಥರು ಕಾರಿಡಾರನ್ನು ದಾಟಿ ಹೋಗಲು ಹಲವು ಸೇತುವೆಗಳನ್ನು ನಿರ್ಮಿಸಲಾಗುವುದು. ರಸ್ತೆಯ ಇಕ್ಕೆಲಗಳಲ್ಲಿ ಗೋಡೆಗಳ ನಿರ್ಮಾಣವಾಗುವುದರಿಂದ ಅನೇಕ ಹಳ್ಳಿಗಳು ಇಬ್ಭಾಗವಾಗುತ್ತವೆ. ರೈತರು ತಮ್ಮ ಜಮೀನಿಗೆ ಹೋಗಲು ಕಾರಿಡಾರನ್ನು ದಾಟಿಯೇ ಹೋಗಬೇಕಾಗುತ್ತದೆ. ಈ ಇಡೀ ಯೋಜನೆಯ ಕೇಂದ್ರಬಿಂದು ಎಂದರೆ ೫ ಟೌನ್‌ಶಿಪ್‌ಗಳ ನಿರ್ಮಾಣ ಮಾಡುವುದು.

ನವವಸಾಹತುಶಾಹಿಯ ಕುರುಹು ಎಂಬಂತೆ ಕೆಂಗೇರಿಯ ಬಳಿ ಕಾರ್ಪೊರೇಟ್ ಕೇಂದ್ರ, ಬಿಡದಿಯ ಬಳಿ ವ್ಯಾಪಾರ ಕೇಂದ್ರ, ಮಂಡ್ಯದ ಬಳಿ ಕೃಷಿ ಕೇಂದ್ರ,, ಶ್ರೀರಂಗಪಟ್ಟಣದ ಬಳಿ ಪ್ರವಾಸೀ ಕೇಂದ್ರ, ಹಾಗೂ ಚನ್ನಪಟ್ಟಣದ ಬಳಿ ಕೈಗಾರಿಕಾ ಕೇಂದ್ರ ಸ್ಥಾಪಿಸುವುದು ನೈಸ್ ಕಂಪನಿಯ ಉದ್ದೇಶವಾಗಿದೆ. ಈ ನಗರಗಳಲ್ಲಿ ನಿರಂತರವಾದ ಅಡೆತಡೆಯಿಲ್ಲದ ನೀರು ವಿದ್ಯುತ್ ಸರಬರಾಜು ಹಾಗೂ ಇತರ ಎಲ್ಲಾ ಮೂಲಭೂತ ಸೌಕರ್ಯಗಳೂ ಲಭ್ಯವಿರುತ್ತವೆ. ಬ.ರಾ.ಕಂ.ಗಳ ಸಾಫ್ಟ್‌ವೇರ್ ಪ್ರಪಂಚದ ಶ್ರೀಮಂತರ, ಅನಿವಾಸಿ ಭಾರತೀಯರ ಎಲ್ಲಾ ಅಗತ್ಯಗಳನ್ನು ಈ ನಗರಗಳಲ್ಲಿ ಒದಗಿಸಲಾಗುತ್ತದೆ. ವಿಧಾನಸಭೆಯಲ್ಲಿ ಕುಳಿತು ಅಭಿವೃದ್ಧಿ ಯೋಜನೆಗಳಿಗೆ ಅಸ್ತು ನೀಡುವ ಜಾಗತೀಕರಣದ ಪೂಜಾರಿಗಳಿಗೆ ಈ ಯೋಜನೆಯು ಅಭಿವೃದ್ಧಿಯ ಸಂಕೇತವಾಗಿದೆ. ಆದರೆ ಈ ಯೋಜನೆಯಿಂದಾಗುವ ದುಷ್ಪರಿಣಾಮಗಳ ಬಗ್ಗೆ ಜನ ಈಗಾಗಲೇ ಅರಿತಿದ್ದಾರೆ ಎಂಬ ಅಂಶವನ್ನು ನಮ್ಮನ್ನಾಳುವ ಜನಪ್ರತಿನಿಧಿಗಳು ಗ್ರಹಿಸಬೇಕಾಗಿದೆ.

**ಕಾರಿಡಾರ್ ಯೋಜನೆಯ ದುಷ್ಪರಿಣಾಮಗಳು**

ಮೈಸೂರಿನಿಂದ ಬೆಂಗಳೂರಿಗೆ ತಲುಪುವ ರಸ್ತೆಯಲ್ಲಿ ಬರುವ ಬಹುತೇಕ ಪ್ರದೇಶ ೪೦ರ ದಶಕದಲ್ಲಿ ಬರಡು ಪ್ರದೇಶವಾಗಿತ್ತು. ಯಾವುದೇ ನೀರಾವರಿ ಸೌಕರ್ಯವಿಲ್ಲದೆ ರೈತರು ಮಳೆಯನ್ನೇ ಆಶ್ರಯಿಸಬೇಕಾಗಿತ್ತು. ಡಾ|| ಎಮ್. ವಿಶ್ವೇಶ್ವರಯ್ಯನವರಂಥ ದಾರ್ಶನಿಕರ ದೂರದೃಷ್ಟಿಯ ಫಲವಾಗಿ ಇಡೀ ಪ್ರದೇಶವು ನೀರಾವರಿ ಸೌಕರ್ಯ ಗಳಿಸಿತ್ತು. ಸರ್ಕಾರಿ ದಾಖಲೆಗಳ ಪ್ರಕಾರವೇ ಕಾರಿಡಾರ್ ಯೋಜನೆ ಆಕ್ರಮಿಸುವ ೨೨ ಸಾವಿರ ಎಕರೆ ಪ್ರದೇಶ ಬಹುಪಾಲು ಫಲವತ್ತಾದ ಜಮೀನಾಗಿದೆ. ಈ ೨೨,೦೦೦ ಎಕರೆಯಲ್ಲಿ ೫,೦೦೦ ಎಕರೆ ಸರ್ಕಾರದ್ದಾಗಿದ್ದು ಉಳಿದ ಜಮೀನು ಖಾಸಗಿ ಸ್ವತ್ತಾಗಿದೆ. ಕಬ್ಬು, ಭತ್ತವನ್ನೇ ಮುಖ್ಯವಾಗಿ ಬೆಳೆಯಲಾಗುವ ಈ ಪ್ರದೇಶವು ಕರ್ನಾಟಕದ ಆರ್ಥಿಕ ಅಭಿವೃದ್ಧಿಯಲ್ಲಿ ಮಹತ್ವದ ಪಾತ್ರ ವಹಿಸಿದೆ ಎಂದರೆ ತಪ್ಪಾಗಲಾರದು. ಕಾರಿಡಾರ್ ಯೋಜನೆ ಅನುಷ್ಠಾನಗೊಂಡಲ್ಲಿ ಈ ೨೨,೦೦೦ ಎಕರೆ ಫಲವತ್ತಾದ ಜಮೀನು ಕಾಂಕ್ರೀಟ್ ರಸ್ತೆಯಾಗುತ್ತದೆ. ಲಕ್ಷಾಂತರ ರೈತರು ತಮ್ಮ ಜಮೀನನ್ನು ಕಳೆದುಕೊಳ್ಳುತ್ತಾರೆ. ನೈಸ್ ಕಂಪನಿಯು ಜಮೀನು ಕಳೆದುಕೊಂಡ ರೈತರಿಗೆ ಎಕರೆಗೆ ೧-೨ ಲಕ್ಷ ರೂ.ನಂತೆ ಪರಿಹಾರ ನೀಡುವುದಾದರೂ ಮಾರುಕಟ್ಟೆ ಬೆಲೆಗೂ ಈ ಪರಿಹಾರಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ರೈತರಿಂದ ಇಷ್ಟು ಅಗ್ಗದ ಬೆಲೆಯಲ್ಲಿ ಜಮೀನುಗಳನ್ನು ಖರೀದಿಸಿ ಅಲ್ಲಿ ಸುಂದರ ನಗರಗಳನ್ನು, ಕಾಂಕ್ರೀಟ್ ಕಾಡುಗಳನ್ನು ನಿರ್ಮಿಸಿ ಕೊಳ್ಳೆ ಹೊಡೆಯಲು ನೈಸ್ ಕಂಪನಿ ಉದ್ದೇಶಿಸಿದೆ. ಈ ಪಿತೂರಿಯ ಹಿಂದೆ ಸರ್ಕಾರೀ ಅಧಿಕಾರಿಗಳೂ ಶಾಸಕರೂ ಸಕ್ರಿಯರಾಗಿದ್ದಾರೆ.




ರೈತರ ಜಮೀನಿಗೆ ಆದಷ್ಟೂ ಕಡಿಮೆ ಬೆಲೆ ನೀಡಲು ಅನುಕೂಲವಾಗುವಂತೆ ನೈಸ್ ಕಂಪನಿಯು ಈ ಪ್ರದೇಶದ ಭೂಮಿ ಬಹುಪಾಲು ಬರಡು ಎಂದು ಸುಳ್ಳು ಹೇಳುತ್ತದೆ. ಆದರೆ ಈ ಪ್ರದೇಶದಲ್ಲಿರುವ ಜಮೀನು ಫಲವತ್ತಾದದ್ದೆಂದು ಸರ್ಕಾರೀ ದಾಖಲೆಗಳೇ ತಿಳಿಸುತ್ತವೆ. ಇಷ್ಟು ವಿಸ್ತಾರವಾದ ಫಲವತ್ತಾದ ಜಮೀನಿನಲ್ಲಿ ಐಷಾರಾಮ ಜೀವನದ ನಗರಗಳನ್ನು ನಿರ್ಮಿಸುವುದರಿಂದ ಲಕ್ಷಾಂತರ ರೈತರು ಬೀದಿಪಾಲಾಗುತ್ತಾರೆ. ಇದರಿಂದ ರಾಜ್ಯದ ಸಾಮಾಜಿಕ ಆರ್ಥಿಕ ವ್ಯವಸ್ಥೆಯ ಮೇಲೂ ಭಾರಿ ದುಷ್ಪರಿಣಾಮಗಳುಂಟಾಗುತ್ತವೆ. ರಸ್ತೆಯ ಇಕ್ಕೆಲಗಳಲ್ಲಿ ಗೋಡೆ ನಿರ್ಮಿಸುವುದರಿಂದ ರೈತರು ಅವರ ಜಮೀನಿನಿಂದಲೂ ದೂರವಾಗುತ್ತಾರೆ. ಕೃಷಿ ಉತ್ಪಾದನೆ ಕುಂಠಿತವಾಗುತ್ತದೆ. ಉದ್ಯೋಗಾವಕಾಶಗಳೂ ಕಡಿಮೆಯಾಗುತ್ತವೆ. ಯುವ ಜನಾಂಗ ಯಾವುದೇ ಆರ್ಥಿಕ ಸ್ಥಿರತೆಯಿಲ್ಲದೆ ಕಂಗಾಲಾಗುತ್ತಾರೆ. ನೈಸ್ ಕಂಪನಿಯಾಗಲಿ, ಸರ್ಕಾರವಾಗಲಿ ರೈತರು ಕಳೆದುಕೊಳ್ಳುವ ಜಮೀನಿಗೆ ಪರಿಹಾರ ನೀಡುವುದಾಗಿ ಘೋಷಿಸಿದ್ದರೂ, ನೀಡಿದರೂ ಹಲವಾರು ಇಂತಹ ಯೋಜನೆಗಳಲ್ಲಿ ನಿರಾಶ್ರಿತರಾದ ಜನತೆಗೆ, ದಶಕಗಳು ಕಳೆದರೂ ಪರಿಹಾರ ಒದಗದಿರುವುದನ್ನು ಕಾಣಬಹುದು. ತಮ್ಮ ಜಮೀನುಗಳಿಗೆ ಹೋಗಲು ರೈತರು ೮-೧೦ ಕಿ. ಮೀ. ದೂರದಷ್ಟು ನಡೆಯಬೇಕಾಗುತ್ತದೆ. ಜಾನುವಾರುಗಳಿಗೆ ಮೇವು ಇಲ್ಲವಾಗುತ್ತದೆ. ಎಲ್ಲಕ್ಕಿಂತಲೂ ಮಿಗಿಲಾಗಿ ಗೋಡೆಗಳ ನಿರ್ಮಾಣದಿಂದ ಹಲವಾರು ಗ್ರಾಮಗಳು ಇಬ್ಭಾಗವಾಗಿ ಗ್ರಾಮೀಣ ಸಂಸ್ಕೃತಿಯೂ ನಾಶವಾಗುತ್ತದೆ. ಅಗ್ರಹಾರ ಸಂಸ್ಕೃತಿ ನವವಸಾಹತುಶಾಹಿಯ ರೂಪದಲ್ಲಿ ಪುನಃ ಕಾಣಿಸಿಕೊಂಡಂತಾಗುತ್ತದೆ.

ಈ ಕಾರಿಡಾರ್ ಯೋಜನೆಯ ಕೇಂದ್ರಬಿಂದುವಾದ ಟೌನ್‌ಶಿಪ್ ಯೋಜನೆಯು ರಾಜ್ಯದ ಸಾಂಸ್ಕೃತಿಕ ಅಡಿಪಾಯವನ್ನು ಬುಡಮೇಲು ಮಾಡುವಂತಿದೆ. ಕೆಂಗೇರಿಯ ಬಳಿ ನಿರ್ಮಿಸಲಾಗುವ ಕಾರ್ಪೊರೇಟ್ ಕೇಂದ್ರವು ಬ. ರಾ. ಕಂ.ಗಳ ಅಧಿಕಾರಿಗಳಿಗೆ ಹಾಗೂ ಸ್ವೇಚ್ಛಾಚಾರಿ ವಿಲಾಸಮಯ ಜೀವನ ನಡೆಸುವ ಶ್ರೀಮಂತರಿಗೆ ಭದ್ರ ಕೋಟೆಯಾಗುತ್ತದೆ. ವ್ಯಾಪಾರೀ ಕೇಂದ್ರ, ಕೈಗಾರಿಕೆ, ಕೃಷಿ ಕೇಂದ್ರಗಳ ನಿರ್ಮಾಣದಿಂದ ಸ್ಥಳೀಯ ಸಣ್ಣ ಗುಡಿಕೈಗಾರಿಕೆಗಳು ನಷ್ಟ ಅನುಭವಿಸುತ್ತವೆ.

ಇನ್ನು ಪ್ರವಾಸೀ ಕೇಂದ್ರದ ನಿರ್ಮಾಣದಿಂದ ಈ ಪ್ರದೇಶವೂ ಥೈಲ್ಯಾಂಡ್‌ನಂತೆ ಆಗುತ್ತದೆ. ಭಾರತೀಯ ಸಂಸ್ಕೃತಿಯನ್ನು ನಾಶಪಡಿಸಿ ಪಾಶ್ಚಿಮಾತ್ಯ ಬಳಕೆದಾರ ಸಂಸ್ಕೃತಿ ಉದ್ಭವಿಸುತ್ತದೆ. ಕುತೂಹಲಕಾರಿಯಾದ ಅಂಶವೆಂದರೆ ಈ ಕಾರಿಡಾರ್‌ನ ಒಳಗೆ ಎತ್ತಿನ ಬಂಡಿಯಾಗಲೀ, ಟ್ರಾಕ್ಟರ್, ಆಟೋರಿಕ್ಷಾ, ಸೈಕಲ್‌ಗಳಾಗಲಿ ಚಲಿಸುವಂತಿಲ್ಲ. ಈ ರಸ್ತೆಯಲ್ಲಿ ಸಂಚರಿಸುವ ವಾಹನಗಳಿಗೆ ಭಾರಿ ಶುಲ್ಕವನ್ನು ವಿಧಿಸಲಾಗುತ್ತದೆ. ಈ ಯೋಜನೆಗೆ ತಮ್ಮ ಸರ್ವಸ್ವವನ್ನೂ ತ್ಯಾಗ ಮಾಡುವ ರೈತರಿಗೆ ಕಾರಿಡಾರ್‌ನೊಳಗೆ ಪ್ರವೇಶವೇ ಇಲ್ಲವಾಗುತ್ತದೆ.

ಈ ಯೋಜನೆಯ ದುಷ್ಪರಿಣಾಮಗಳ ಬಗ್ಗೆ ಈಗಾಗಲೇ ಸರ್ಕಾರಕ್ಕೆ ಎಚ್ಚರಿಕೆ ನೀಡಲಾಗಿದೆ. ಈ ಕಾರಿಡಾರನ್ನು ನಿರ್ಮಿಸಿ ಲಕ್ಷಾಂತರ ರೈತರನ್ನು ಬೀದಿಪಾಲು ಮಾಡಿ ಬ.ರಾ.ಕಂ.ಗಳಿಗೆ ಮುಕ್ತ ಅವಕಾಶ ನೀಡುವುದರ ಬದಲು ಈಗಿರುವ ಹೆದ್ದಾರಿ ೧೭ನ್ನೇ ನಾಲ್ಕು ಜೋಡಿ ಮಾರ್ಗವನ್ನಾಗಿ ಪರಿವರ್ತಿಸಿದಲ್ಲಿ ಮೈಸೂರು-ಬೆಂಗಳೂರು ನಡುವಿನ ಸಂಚಾರವನ್ನು ಸುಲಭವಾಗಿ ನಿಯಂತ್ರಿಸಬಹುದು. ಬೆಂಗಳೂರನ್ನು ಸಿಂಗಪೂರ್ ಮಾಡುವ ರಾಜ್ಯ ಸರ್ಕಾರಕ್ಕೆ ಇದರಲ್ಲಿ ಆಸ್ಥೆಯಿಲ್ಲ. ಏಕೆಂದರೆ ನಮ್ಮನ್ನಾಳುವ ಸರ್ಕಾರಗಳು ಅವರನ್ನು ಚುನಾಯಿಸುವ ಜನಗಳಿಗಿಂತಲೂ ವಿಶ್ವ ಬ್ಯಾಂಕ್, ಐ.ಎಂ.ಎಫ್.ನ ಮಾತುಗಳನ್ನೇ ಪಾಲಿಸುತ್ತವೆ. ಪಾರದರ್ಶಕತೆಯ ಬಗ್ಗೆ ಭಾಷಣಗಳನ್ನು ಮಾಡುವ ಸರ್ಕಾರಗಳು ಈ ಕಾರಿಡಾರ್‌ನ ಬಗ್ಗೆ ಯಾವುದೇ ಮಾಹಿತಿಯನ್ನು ಜನತೆಗೆ ನೀಡಿಲ್ಲ. ಈ ಪ್ರದೇಶದಲ್ಲಿ ಬರುವ ೧೬೦ ಗ್ರಾಮ ಪಂಚಾಯಿತಿಗಳಿಗಾಗಲಿ, ೧೧೮ ಗ್ರಾಮಗಳ ಜನತೆಗಾಗಲಿ ಈ ಯೋಜನೆಯ ಬಗ್ಗೆ ಯಾವ ಸುಳಿವೂ ತಿಳಿದಿಲ್ಲ.

ಆದರೆ ಕಾರಿಡಾರ್ ಯೋಜನೆಯ ವಿರುದ್ಧ ಈಗಾಗಲೆ ಜನತೆ ಹೋರಾಟ ನಡೆಸುತ್ತಿದ್ದಾರೆ. ಅನೇಕ ಪುರೋಗಾಮಿ ಸಂಘಟನೆಗಳು ಬಿ.ಎಂ.ಐ.ಸಿ. ವಿರೋಧಿ ಒಕ್ಕೂಟದ ಮೂಲಕ ಈ ಯೋಜನೆಯ ದುಷ್ಪರಿಣಾಮಗಳ ಬಗ್ಗೆ ಗ್ರಾಮದ ಜನತೆಗೆ, ರೈತರಿಗೆ, ತಿಳಿವಳಿಕೆ ಮೂಡಿಸಲು ಸಾಕಷ್ಟು ಶ್ರಮ ವಹಿಸಿವೆ. ಅನೇಕ ರ್‍ಯಾಲಿಗಳು, ಜಾಥಾಗಳು, ಪಾದಯಾತ್ರೆಗಳ ಮೂಲಕ ರೈತರನ್ನು ಜಾಗೃತಗೊಳಿಸಲಾಗಿದೆ. ಅನೇಕ ಬುದ್ಧಿಜೀವಿಗಳು ಈ ಹೋರಾಟದಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ. ಈ ಪರಿಶ್ರಮದ ಪರಿಣಾಮವಾಗಿ ಇಂದು ಅನೇಕ ರೈತರು ತಮ್ಮ ಜಮೀನನ್ನು ಕಾರಿಡಾರ್ ಯೋಜನೆಗಾಗಿ ಬಿಟ್ಟುಕೊಡಲು ನಿರಾಕರಿಸುತ್ತಿದ್ದಾರೆ. ಆದರೆ ಇನ್ನೊಂದೆಡೆ ರಾಜ್ಯ ಸರ್ಕಾರವು ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಎಲ್ಲಾ ಸಿದ್ಧತೆಗಳನ್ನು ಮಾಡುತ್ತಿದೆ. ಇನ್ನೊಂದು ತಿಂಗಳಲ್ಲಿ ಕಾರ್ಯಾರಂಭಗೊಳಿಸಲಾಗುವುದೆಂದು ಮಂತ್ರಿಗಳು ಹೇಳಿಕೆ ನೀಡುತ್ತಲೇ ಇರುತ್ತಾರೆ. ಸಮಯ ಬಂದರೆ ಸರ್ಕಾರವು ಹಿಂಸೆಯ ಮೂಲಕವಾದರೂ ರೈತರ ಎತ್ತಂಗಡಿ ಮಾಡಬಹುದು. ಸರ್ಕಾರದ ಈ ಪಿತೂರಿಯನ್ನು ವಿಫಲಗೊಳಿಸಲು ಎಲ್ಲಾ ಪುರೋಗಾಮಿ ಸಂಘಟನೆಗಳು, ಪ್ರಜಾತಾಂತ್ರಿಕ ಪಕ್ಷಗಳು, ಬುದ್ಧಿಜೀವಿಗಳು ಒಂದಾಗಿ ಹೋರಾಡಬೇಕಾಗಿದೆ.

ನಾ. ದಿವಾಕರ
ಮಹಾವೀರ ರಸ್ತೆ, ಬೆಳ್ಳೂರು - ೫೭೧೪೧೮, ಮಂಡ್ಯ ಜಿಲ್ಲೆ

# ಭೋಪಾಲ್ ದುರಂತದ ಹಿನ್ನೆಲೆ ಹಾಗೂ ಪರಿಣಾಮ

ಅಮೆರಿಕಾ ದೇಶದ ಯೂನಿಯನ್ ಕಾರ್ಬೈಡ್ ಭೋಪಾಲ್‌ನಲ್ಲಿ ಸ್ಥಾಪಿಸಿದ ಕೀಟನಾಶಕ ಫ್ಯಾಕ್ಟರಿಯಿಂದ ೧೯೮೪ರ ಡಿಸೆಂಬರ್ ೨-೩ ತೇದಿ ಮಧ್ಯರಾತ್ರಿ ಹೊರಸೂಸಿದ ವಿಷಾನಿಲ ಸುಮಾರು ೧೫,೦೦೦ ಜನರನ್ನು ಆಹುತಿ ತೆಗೆದುಕೊಂಡು, ೫೦೦,೦೦೦ ಜನರನ್ನು ಘಾಸಿಗೊಳಿಸಿದ್ದು ಇತಿಹಾಸದ ಅತ್ಯಂತ ದೊಡ್ಡ ದುರಂತವೆಂದು ಪರಿಗಣಿಸಲಾಗಿದೆ. ಇದೇ 'ಭೋಪಾಲ್ ಅನಿಲ ದುರಂತ'ವೆಂದು ಕುಖ್ಯಾತಿ ಗಳಿಸಿದೆ. ಈ ದುರಂತದ ಮಾನವೀಯ ಹಾಗೂ ತಾಂತ್ರಿಕ ಹಿನ್ನೆಲೆಯನ್ನು ಡೊಮಿನಿಕ್ ಲಾಪಿಯರ್ ಮತ್ತು ಜಾವಿಯರ್ ಮೋರೋ ''ಭೋಪಾಲ್‌ನಲ್ಲಿ ಮಧ್ಯರಾತ್ರಿಯ ನಂತರದ ಐದು ನಿಮಿಷಗಳು'' ಎಂಬ ಶೀರ್ಷಿಕೆಯ ಪುಸ್ತಕದಲ್ಲಿ ರೋಚಕವಾಗಿ ವಿವರಿಸಿದ್ದಾರೆ. ಡೊಮಿನಿಕ್ ಬರೆದ ಪುಸ್ತಕಗಳಲ್ಲಿ 'ಅರ್ಧರಾತ್ರಿಯಲ್ಲಿ ಸ್ವಾತಂತ್ರ್ಯ' (Freedom at Midnight) ಅತ್ಯಧಿಕ ಪ್ರಮಾಣದಲ್ಲಿ ಮಾರಾಟವಾಗಿದೆ. ಇವರ ಇನ್ನಿತರ ಹಲವು ಪುಸ್ತಕಗಳು ಅಂತಾರಾಷ್ಟ್ರೀಯ ಬೆಸ್ಟ್ ಸೆಲ್ಲರ್ ಕೃತಿಗಳಾಗಿವೆ. ಇವು ಸುಮಾರು ೩೦ ವಿವಿಧ ಭಾಷೆಗಳಿಗೆ ತರ್ಜುಮೆಯಾಗಿ ಮಿಲಿಯಗಟ್ಟಲೆ ಓದುಗರನ್ನು ಆಕರ್ಷಿಸಿವೆ. ಒಂದು ವಿಶೇಷ ಸಂಗತಿಯೆಂದರೆ ಪುಸ್ತಕಗಳ ಮಾರಾಟದಿಂದ ಸಂದಾಯವಾದ ಲಾಭವನ್ನು ಭೋಪಾಲ್‌ನಲ್ಲಿ ಮಾನವೀಯ ಉದ್ದೇಶಗಳಿಗೆ ವಿನಿಯೋಗಿಸಲಾಗುತ್ತಿದೆ.




ಡೊಮಿನಿಕ್ ಲಾಪಿಯರ್ ಮತ್ತು ಮೋರೊ ಅವರ ಮೂಲಕೃತಿ ಫ್ರೆಂಚ್ ಭಾಷೆಯಲ್ಲಿದ್ದು ಇಂಗ್ಲಿಷ್‌ಗೆ ಭಾಷಾಂತರಿಸಲಾಗಿದೆ. ಈ ಪುಸ್ತಕ ಬರೆಯಲು ಅವರು ಸುಮಾರು ಮೂರು ವರ್ಷಗಳ ಆಳವಾದ ಸಂಶೋಧನೆಯನ್ನೇ ನಡೆಸಿದ್ದಾರೆ. ನೂರಾರು ಪ್ರತ್ಯಕ್ಷದರ್ಶಿಗಳನ್ನು, ವಿಜ್ಞಾನಿಗಳನ್ನು, ಆಡಳಿತಗಾರರನ್ನು ಭೇಟಿಯಾಗಿ ವಿಷಯ ಸಂಗ್ರಹಣೆ ಮಾಡಿದ್ದಾರೆ. ಪುಸ್ತಕದಿಂದ ಪಡೆದ ಹಣವನ್ನು ಸತಿನಾಥ್ ಸಾರಂಗಿ ಭೋಪಾಲ್‌ನಲ್ಲಿ ಸ್ಥಾಪಿಸಿರುವ ಪ್ರಸೂತಿ ಆಸ್ಪತ್ರೆಗೆ ದಾನಮಾಡಲಾಗಿದೆ.

ಈ ಪುಸ್ತಕದಲ್ಲಿ ನಿರೂಪಿಸಿರುವ ಭೋಪಾಲ್ ದುರಂತದ ಕಥೆ ಒರಿಸ್ಸಾದ ಸಮುದ್ರ ತೀರದ ಕೊಳಚೆ ಪ್ರದೇಶದಲ್ಲಿ ನೆಲೆಸಿದ್ದ ಆದಿವಾಸಿ ಸಂಸಾರಗಳ ಕಷ್ಟಕಾರ್ಪಣ್ಯಗಳ ವಿಚಾರದಿಂದ ಆರಂಭವಾಗಿದೆ. ರತ್ನ ನಾಡರ್ ಮತ್ತು ಅವನ ಹೆಂಡತಿ ಶೀಲಾ ಅವರಿಗೆ ಇಬ್ಬರು ಗಂಡು ಮಕ್ಕಳು ಮತ್ತು ಒಬ್ಬಳು ಹೆಣ್ಣು ಮಗಳು: ಆಶು ಮತ್ತು ಗೋಪಾಲ್ ಹಾಗೂ ಪದ್ಮಿನಿ. ಸಮೀಪದ ಕಾಡುಗಳಿಂದ ಬೀಡಿಗೆ ಅಗತ್ಯವಾದ ಎಲೆಗಳನ್ನು ಸಂಗ್ರಹಿಸುವುದು ಮಕ್ಕಳ ದಿನನಿತ್ಯದ ಕಸುಬಾಗಿತ್ತು. ಅನಂತರದಲ್ಲಿ ಬೆಂಕಿಪೊಟ್ಟಣದ ತಯಾರಿಕೆಗೆ ಬೇಕಾದ ಕಡ್ಡಿಗಳನ್ನು ತರುವ ಉದ್ಯೋಗವೂ ಅವರದಾಗಿತ್ತು. ಒರಿಸ್ಸಾ ತೀರ ಪ್ರದೇಶದಲ್ಲಿ ಜೀವನ ನಡೆಸುವುದೇ ದುಸ್ತರವಾಗಿದ್ದ ಇವರಿಗೆ ಭೋಪಾಲ್‌ನಲ್ಲಿ ರೈಲ್ವೆ ಮಾರ್ಗಗಳ ನಿರ್ಮಾಣ ಕಾರ್ಯದಲ್ಲಿ ಅವಕಾಶ ಲಭಿಸಿದ್ದು ಆಕರ್ಷಣೀಯವಾಗಿತ್ತು. ಭೋಪಾಲ್‌ಗೆ ತೆರಳಲು ಟಿಕೇಟು ಗಳೂ ಸಹ ದೊರಕಿದವು. ಈ ಆದಿವಾಸಿ ಸಂಸಾರದ ಭೋಪಾಲ್ ಬವಣೆ ಹೀಗೆ ಆರಂಭವಾಯಿತು.

ಭೋಪಾಲ್‌ನಲ್ಲಿ ಯೂನಿಯನ್ ಕಾರ್ಬೈಡ್ ಕಂಪನಿ ಕೀಟನಾಶಕಗಳ ತಯಾರಿಕೆಗೆ ಹುಟ್ಟಿದ್ದು. ನಿಜಕ್ಕೂ ಕೃಷಿ ಉತ್ಪನ್ನಗಳಿಗೆ ಕೀಟಗಳ ಹಾವಳಿ ಪ್ರಪಂಚದಾದ್ಯಂತ ಇದ್ದದ್ದೇ. ಕರಿ ಆಫಿಡ್‌ಗಳು, ಮಿಡತೆಗಳು, ಬೀಟಲ್‌ಗಳು ಪಿಡುಗಾಗಿ ಅನೇಕ ದೇಶಗಳಲ್ಲಿ ಅತ್ಯಧಿಕವಾಗಿ ಕೃಷಿ ಸಸ್ಯಗಳನ್ನು ನಾಶಮಾಡಿದ್ದುಂಟು, ಕೊಲರಾಡೊ ಬೀಟಲ್ ಆಲೂಗಡ್ಡೆ ಫಸಲನ್ನು ನಾಶಮಾಡಿ ಐರ್ಲೆಂಡಿನ ಬರಕ್ಕೆ ಕಾರಣವಾಯಿತಷ್ಟೆ. ಫಿಲೊಕ್ಸೆನಾ ಫ್ರಾನ್ಸ್ ದೇಶದ ದ್ರಾಕ್ಷಿತೋಟಗಳನ್ನು ಹೆಸರಿಲ್ಲದಂತೆ ತಿಂದುಹಾಕಿದವು. ಕೀಟಗಳ ವಿರುದ್ಧ ವಿಜ್ಞಾನಿಗಳು ಹಾಗೂ ತಂತ್ರಜ್ಞಾನ ನಿಪುಣರು ಸಮರ ಹೂಡಲು ಸನ್ನದ್ಧರಾಗಿ ವಿವಿಧ ಕೀಟನಾಶಕಗಳನ್ನು ತಯಾರಿಸಿದ್ದಾರೆ. ಇವುಗಳಲ್ಲಿ ಡಿ.ಡಿ.ಟಿ. ಪ್ರಮುಖವಾದದ್ದು. ವಿಪರ್ಯಾಸವೆಂದರೆ ಡಿ.ಡಿ.ಟಿ. ಕೀಟಗಳನ್ನು ನಾಶ ಮಾಡುವುದರ ಜೊತೆಗೆ ಮೀನು, ಸಸ್ತನಿಗಳು, ಮತ್ತು ಫಲವತ್ತಾದ ಭೂಮಿಗೆ ಮಾರಕವಾಯಿತು. ಈ ಕ್ರಿಮಿನಾಶಕ ಮನುಷ್ಯನ ದೇಹದಲ್ಲೂ ಶೇಖರಿಸಿ ಅಪಾಯವುಂಟುಮಾಡಿದೆ, ಪರಿಸರ ಮಾಲಿನ್ಯಕ್ಕೆ ಕಾರಣವಾಗಿದೆ. ಕೀಟಗಳಿಂದ ಪ್ರಪಂಚದ ಆಹಾರಧಾನ್ಯಗಳ ಸಂರಕ್ಷಣೆಗೆ ಕಟಿಬದ್ಧವಾಗಿರುವ ಸಂಸ್ಥೆ ಕಾರ್ಬೈಡ್ ಕಂಪನಿ ಎಂದು ಅದರ ಸ್ಥಾಪಕರು ಜಂಭ ಕೊಚ್ಚಿಕೊಂಡಿದ್ದಾರೆ. ಪರಮಾಣು ಬಾಂಬಿನ ತಯಾರಿಕೆಗೆ ಕಾರಣವಾದ ಅಮೆರಿಕಾದ ಮಾನ್‌ಹಟ್ಟಾನ್ ಯೋಜನೆ ಕಾರ್ಬೈಡ್ ಕಂಪನಿಯೊಡನೆ ಸಹಯೋಗ ಬೆಳೆಸಿತ್ತು. ೨೦ನೇ ಶತಮಾನದ ಉತ್ತರಾರ್ಧದಲ್ಲಿ ಈ ಕಂಪನಿ ಅಮೆರಿಕಾದ ಅಗಾಧ ಬಹುರಾಷ್ಟ್ರೀಯ ಕಂಪನಿಗಳಲ್ಲಿ ಒಂದಾಗಿತ್ತು. ಯೂನಿಯನ್ ಕಾರ್ಬೈಡ್ ೪೦ ಕೇಂದ್ರಗಳಲ್ಲಿ ಸುಮಾರು ೧೩೦ ಅಧೀನ ಕಂಪನಿಗಳ ಸಾಮ್ರಾಜ್ಯವಾಗಿ ವಿಜೃಂಭಿಸುತ್ತಿತ್ತು. ಕೈಗಾರಿಕೆಗಳಿಗೆ ಅಗತ್ಯವಾದ ನೈಟ್ರೋಜನ್, ಆಕ್ಸಿಜನ್, ಕಾರ್ಬನ್ ಡೈಆಕ್ಸೈಡ್, ಮೀಥೇನ್, ಎಥಿಲೀನ್, ಪ್ರೋಪೇನ್, ಅಮೋನಿಯಾ ಮತ್ತು ಯೂರಿಯಾ ರಾಸಾಯನಿಕಗಳನ್ನು ಜಗತ್ತಿನ ಅನೇಕ ದೇಶಗಳಿಗೆ ಮಾರಾಟ ಮಾಡುವ ಬೃಹತ್ ಸಂಸ್ಥೆಯಾಗಿತ್ತು. ೧೯೭೦-೮೦ರ ವರ್ಷಗಳಲ್ಲಿ, ''ಕಾರ್ಬೈಡ್ ಸಂಸ್ಥೆಗೆ ಒಳ್ಳೆಯದೆನಿಸಿದರೆ, ಅಮೆರಿಕಾ ದೇಶಕ್ಕೆ ಒಳಿತು, ಅಷ್ಟೇಕೆ, ಇಡೀ ಜಗತ್ತಿಗೇ ಒಳಿತೆಂಬ'' ಅಭಿಪ್ರಾಯ ಕೈಗಾರಿಕಾ ವಲಯಗಳಲ್ಲಿ ಕೇಳಿಬರುತ್ತಿದ್ದುದುಂಟು ! ಯೂನಿಯನ್ ಕಾರ್ಬೈಡ್ ಮಾರಾಟ ಮಾಡಿದ ಕೀಟನಾಶಕಗಳಲ್ಲಿ ಪ್ರಸಿದ್ಧವಾದದ್ದು 'ಸೆವಿನ್'. ಪಶ್ಚಿಮ ವರ್ಜೀನಿಯಾ ರಾಜ್ಯದಲ್ಲಿರುವ ಕನವಾಹ್ ಕಣಿವೆ ಪ್ರದೇಶದಲ್ಲಿ ಕಾರ್ಬೈಡ್ ಕಂಪನಿಯ ರಾಸಾಯನಿಕ ಸಂಶೋಧನಾ ಕೇಂದ್ರ ಸ್ಥಾಪನೆಯಾಗಿತ್ತು. ಈ ಕೇಂದ್ರದಲ್ಲಿ ಅರ್ಜೆಂಟೈನಾದ ಎಡ್ವರ್ಡೊ ಮುನ್ಹೋಜ್ ತರಬೇತಿ ಹೊಂದಿದ ಮತ್ತು ಭೋಪಾಲ್ ಫ್ಯಾಕ್ಟರಿಗೆ ಪರಿಣತನಾಗಿ ಅವನನ್ನು ಕಳುಹಿಸಲಾಯಿತು. ಯೂನಿಯನ್ ಕಾರ್ಬೈಡ್

*ಭೋಪಾಲ್‌ನಲ್ಲಿ ಯೂನಿಯನ್ ಕಾರ್ಬೈಡ್ ನಡೆಸಿದ ನರಹತ್ಯೆ ಮತ್ತು ನಂತರದ ಆಘಾತಗಳನ್ನು ತಿಳಿದವರಾರೂ ಆ ಕಂಪನಿಯು ಉತ್ಪಾದಿಸುವ ಸರಕುಗಳನ್ನು ಬಳಸಬಾರದೆಂಬುದನ್ನು ಒಪ್ಪುವಿರಾ ? ಹಾಗಿದ್ದರೆ ನೀವು ಅದನ್ನು ಪಾಲಿಸಿ. ಉದಾಹರಣೆಗೆ, ಎವರೆಡಿ ಬ್ಯಾಟರಿ ಎಂದೂ ಕೊಳ್ಳುವುದಿಲ್ಲ ಎಂದೇಕೆ ಮನಸ್ಸು ಮಾಡಬಾರದು ?*

ಪ್ರೊ॥ ಎಂ. ಎ. ಸೇತುರಾವ್

ಕಂಪನಿಗೆ ಅಗತ್ಯವಾದ ರೈಲುಸಂಪರ್ಕ ಹಿಂದೆ ಭೋಪಾಲ್‌ನಲ್ಲಿ ರಾಜ್ಯವಾಳುತ್ತಿದ್ದ ಬೇಗಮ್ ಷಾ ಜಹಾನ್ ಕಾಲದಲ್ಲಿ ವ್ಯವಸ್ಥೆಗೊಳಿಸಲಾಗಿತ್ತು. ಭೋಪಾಲ್ ರಾಜ್ಯದಲ್ಲಿ ಆಳಿದ ಬೇಗಮ್‌ಗಳು ಪ್ರಗತಿಪರರಾಗಿದ್ದರೆಂಬುದು ಅನೇಕರಿಗೆ ತಿಳಿದಿಲ್ಲ. ಬೇಗಮ್ ಸಿಕಂದರ್, ಷಾಜಹಾನ್, ಸುಲ್ತಾನ ಜಹಾನ್ ಮತ್ತಿತ್ತರರು ರೈಲು ಮಾರ್ಗ ನಿರ್ಮಾಣಕ್ಕೆ ಹಣವನ್ನು ಒದಗಿಸಿದ್ದು, ರಸ್ತೆಗಳನ್ನು ಮಾರುಕಟ್ಟೆಗಳನ್ನು ವ್ಯವಸ್ಥೆಗೊಳಿಸಿದ್ದರು. ಹತ್ತಿ ಗಿರಣಿಗಳನ್ನೂ ಸ್ಥಾಪಿಸಿದ್ದರು. ಭೂರಹಿತರಿಗೆ ಜಮೀನನ್ನು ಕೊಟ್ಟಿದ್ದರು. ಅಂದಿನ ದಿನಗಳಲ್ಲಿ ಭೋಪಾಲ್ ಹಿಂದು-ಮುಸ್ಲಿಂ ಸೌಹಾರ್ದತೆಯ ಬೀಡಾಗಿತ್ತು.

ಯೂನಿಯನ್ ಕಾರ್ಬೈಡಿಗೆ ಅವಶ್ಯವಾದ ರೈಲು ಮಾರ್ಗದ ನಿರ್ಮಾಣ ಕಾರ್ಯದಲ್ಲಿ ಕೆಲಸ ಮಾಡಲು ಬಂದ ಒರಿಸ್ಸಾ ದೇಶೀಯರು ಭೋಪಾಲ್‌ನಲ್ಲಿ ಕೊಳಚೆ ಬಡಾವಣೆಗಳನ್ನು ಕಟ್ಟಿಕೊಂಡರು. ಹೀಗೆ, ಅಲ್ಲಿನ ಕಾಳಿ ಪ್ರದೇಶದಲ್ಲಿ ಒರಿಯಾ ಬಸ್ತಿ, ಚೋಳ ಬಸ್ತಿ ಮತ್ತು ಜೈಪ್ರಕಾಶ್ ಬಸ್ತಿಗಳು ಹುಟ್ಟಿಕೊಂಡವು. ನಾಡಾರ್ ಸಂಸಾರದ ಜೊತೆಗೇ ಕಾಳಿ ಪ್ರದೇಶದಲ್ಲಿ ಬೀಡುಬಿಟ್ಟವನೆಂದರೆ ಕುಷ್ಠ ರೋಗದಿಂದ ನರಳಿ, ವಾಸಿ ಮಾಡಿಕೊಂಡಿದ್ದ ಗಂಗಾರಾಮ್. ಗಂಗಾರಾಮನು ದಾಲಿಮ ಎಂಬುವವಳನ್ನು ವಿವಾಹವಾಗಿ ಅನಾಥ ಬಾಲಕ ದಿಲೀಪನಿಗೆ ಆಶ್ರಯ ನೀಡಿದ್ದ. ಒರಿಯಾ ಬಸ್ತಿಯಲ್ಲಿನ ಮಕ್ಕಳು ಸ್ಟೇಷನ್ನಿನಲ್ಲಿ ನಿಂತ ರೈಲುಬೋಗಿಗಳಿಂದ ಕಲ್ಲಿದ್ದಲನ್ನು ಕದಿಯುತ್ತಿದ್ದುದುಂಟು. ಇಂಜಿನ್ ಚಾಲಕನ ಕೃಪೆಯಿಂದ ಬಕೆಟುಗಳಲ್ಲಿ ಬಿಸಿನೀರನ್ನು ತುಂಬಿಕೊಳ್ಳುತ್ತಿದ್ದರು. ರೈಲ್ವೆಕಾಮಗಾರಿ ಮುಗಿದ ನಂತರ ಜೀವನ ವೆಚ್ಚವನ್ನು ತೂಗಿಸಲು ಮಕ್ಕಳು ಬೋಗಿಗಳಲ್ಲಿ ಬೆಂಚುಗಳ ಕೆಳಗೆ ಸಿಗುವ ಸಣ್ಣಪುಟ್ಟ ವಸ್ತುಗಳನ್ನು ಕಳ್ಳತನದಲ್ಲಿ ಸಾಗಿಸುವ ಹವ್ಯಾಸವನ್ನೂ ಕಲಿತಿದ್ದರು.

ಅಮೆರಿಕಾದ ಪಶ್ಚಿಮ ವರ್ಜೀನಿಯಾದಲ್ಲಿ ಸ್ಥಾಪನೆಯಾದ ಯೂನಿಯನ್ ಕಾರ್ಬೈಡಿನ ಸಂಶೋಧನಾ ಕೇಂದ್ರ ರಸಗೊಬ್ಬರಗಳು, ಔಷಧಗಳು, ಜವಳಿ, ಡೆಟ್ ಮತ್ತು ಸೋಪುಗಳು, ವರ್ಣದ್ರವ್ಯಗಳು, ಛಾಯಾಚಿತ್ರಕ್ಕೆ ಅಗತ್ಯವಾದ ರಾಸಾಯನಿಕಗಳು – ಇವೇ ಮುಂತಾದ ಕ್ಷೇತ್ರಗಳಲ್ಲಿ ನಿರತವಾಗಿತ್ತು. ಫಾಸ್ಜೀನ್ ಎಂಬ ವಿಷಾನಿಲಕಾರಕ, ಕ್ಲೋರೋಫಾರಂ, ಬೆನ್ಜೀನ್, ವೀನೈಲ್ ಕ್ಲೋರೈಡ್ – ಇಂಥ ರಾಸಾಯನಿಕಗಳ ತಯಾರಿಕೆ ಈ ಕೇಂದ್ರದಲ್ಲಿ ನಡೆಯುತ್ತಿತ್ತು. ಕಂಪನಿಯ ಸುತ್ತಮುತ್ತಲಿನ ಪ್ರದೇಶದಲ್ಲಿ (ಕನವಾಹ್ ಕಣಿವೆಯಲ್ಲಿ) ಕ್ಯಾನ್ಸರ್ ರೋಗದಿಂದ ನರಳುವ ಜನರ ಸಂಖ್ಯೆ ಹೆಚ್ಚಾಗಿರುವುದನ್ನು ಕಂಪನಿಯ ಅಧಿಕಾರಿಗಳು ಮುಚ್ಚಿಟ್ಟಿದ್ದುಂಟು. ಇಷ್ಟಾದರೂ ಅತ್ಯಂತ ಅಪಾಯಕಾರಿ ರಾಸಾಯನಿಕವಾದ ''ಸೆವಿನ್'' ತಯಾರಿಸುವುದನ್ನು ಕಂಪನಿ ನಿಲ್ಲಿಸಲಿಲ್ಲ. ''ಸೆವಿನ್'' ಕೀಟನಾಶಕವನ್ನು ಇಡೀ ವಿಶ್ವದಲ್ಲೆಲ್ಲ ಹಂಚಬೇಕೆಂಬುದು ಕಂಪನಿಯ ಉದ್ದೇಶವಾಗಿತ್ತು. ಸೆವಿನ್ ತಯಾರಿಕೆಯಲ್ಲಿ ಮಧ್ಯಂತರ ಸಂಯುಕ್ತ ರಾಸಾಯನಿಕ ಮೀಥೈಲ್ ಐಸೊಸಯನೇಟು (M.I.C.). M.I.C. ಅನಿಲ ಅತ್ಯಂತ ಅಪಾಯಕಾರಿ ವಿಷಾನಿಲವೆಂದು ತಿಳಿದಿದ್ದರೂ ಆ ವಿಷಯವನ್ನು ಕಂಪನಿ ಬಹಿರಂಗಪಡಿಸಲೇ ಇಲ್ಲ. ೧೯೬೩ ಮತ್ತು ೧೯೭೦ರಲ್ಲಿ ನಡೆಸಿದ ಗುಪ್ತ ಅಧ್ಯಯನದಿಂದ ಲಭ್ಯವಾದ ಅಮೂಲ್ಯ ಸಂಗತಿಗಳನ್ನು ಕಾರ್ಬೈಡ್ ಕಂಪನಿ ಹೊರಗೆಡಹಲಿಲ್ಲ. ಮೀಥೈಲ್ ಐಸೊಸಯನೈಡ್ ವಿಭಜಿಸಿ ಅತ್ಯಂತ ಮಾರಕ ಹೈಡ್ರೋಜನ್ ಸಯನೈಡ್ ರಾಸಾಯನಿಕವನ್ನು ಬಿಡುಗಡೆ ಮಾಡುವ ವೈಜ್ಞಾನಿಕ ವಿಷಯ ತಿಳಿದಿದ್ದರೂ ಮುಂಜಾಗ್ರತಾ ಕ್ರಮವನ್ನು ತೆಗೆದುಕೊಳ್ಳಲಿಲ್ಲವೆಂಬುದು ದುರಂತಕ್ಕೆ ಕಾರಣವಾಯಿತು. ಸೋಡಿಯಮ್ ಥಯೋಸಲ್ಫೇಟ್ ಚುಚ್ಚುಮದ್ದು ಸ್ವಲ್ಪಮಟ್ಟಿಗೆ ಸಯನೈಡ್ ವಿಷವನ್ನು ತಟಸ್ಥಗೊಳಿಸಬಹುದೆಂಬುದನ್ನೂ ಜನರಿಗೆ ತಿಳಿಸಲಿಲ್ಲ.

ಭಾರತದಲ್ಲಿ ಯೂನಿಯನ್ ಕಾರ್ಬೈಡಿನ ಪ್ರಥಮ ಕೀಟನಾಶಕ ಫ್ಯಾಕ್ಟರಿ ೧೯೬೬ನೇ ಡಿಸೆಂಬರ್ ೧೪ರಂದು ಆರಂಭವಾಯಿತು. ಮಧ್ಯಪ್ರದೇಶದ ಕಾಂಗ್ರೆಸ್ ಆಡಳಿತ ಫ್ಯಾಕ್ಟರಿಯ ಸ್ಥಾಪನೆಗೆ ಸಂಪೂರ್ಣ ಸಹಕಾರ ನೀಡಿತು. ಕಾಳಿ ಪ್ರದೇಶದಲ್ಲಿ ಜನಿಸಿದ ಈ ಫ್ಯಾಕ್ಟರಿಗೆ ಮೊದಲನೆಯ ಮ್ಯಾನೇಜರ್ ಎಡ್ವರ್ಡೊ ಮುನೋಜ್ ಎಂಬ ಆರ್ಜೆಂಟೈನಾ ದೇಶದ ಪರಿಣತ. ೧೯೭೨ರಲ್ಲಿ ಸೆವಿನ್ ಮತ್ತಿತರ ವಿಷಪೂರಿತ ರಾಸಾಯನಿಕಗಳ ತಯಾರಿಕೆಗೆ ಅಗತ್ಯವಾದ ಸಕಲ ಮಾಹಿತಿಯನ್ನು ಅಮೆರಿಕಾದ ಕಾರ್ಬೈಡ್ ಕಂಪನಿ ಭಾರತಕ್ಕೆ ರವಾನಿಸಿತು. ೧೯೬೮ರಲ್ಲೇ ಭೋಪಾಲ್ ಫ್ಯಾಕ್ಟರಿಯಲ್ಲಿ ತಯಾರಾದ ''ಸೆವಿನ್'' ರಾಸಾಯನಿಕವನ್ನು ಪಂಜಾಬಿನ ಹತ್ತಿ ಜಮೀನುಗಳಲ್ಲಿ ಬಳಸಲಾಯಿತು. ಸೆವಿನ್ ಬಳಕೆಯಲ್ಲಿ ಬೆಳಕಿಗೆ ಬಂದ ಅಪಘಾತಗಳನ್ನು ಮುನೋಜ್ ಗಮನಿಸಿ ಇವುಗಳಿಗೆ ಅನಕ್ಷರಸ್ಥ ಗ್ರಾಮೀಣ ಜನರು ಜವಾಬ್ದಾರಿಯೆಂದು ಘೋಷಿಸಿದ. ಒಟ್ಟಿನಲ್ಲಿ ಸೆವಿನ್ ತಯಾರಿಕೆ ಮತ್ತು ಬಳಕೆಯಲ್ಲಿ ಅಪಘಾತಗಳು ಸಾಮಾನ್ಯವೆಂಬ ಕಟುಸತ್ಯ ಬಹಿರಂಗವಾಯಿತೆಂದು ಹೇಳಬಹುದು. ಇಂಥ ಅಪಘಾತದ ಹಿನ್ನೆಲೆಯಿದ್ದರೂ ಸಹ ಭೋಪಾಲ್ ಯಂತ್ರಸ್ಥಾವರಕ್ಕೆ ಅಮೆರಿಕಾದ ದಕ್ಷಿಣ ಛಾರಲ್‌ಸ್ಟನ್‌ನಲ್ಲಿದ್ದ ಯೂನಿಯನ್ ಕಾರ್ಬೈಡ್ ಕಂಪನಿಯಲ್ಲಿ ಆಚರಣೆಯಲ್ಲಿದ್ದ ಸುರಕ್ಷಣಾ ವ್ಯವಸ್ಥೆಗಳನ್ನು ಭೋಪಾಲ್ ಫ್ಯಾಕ್ಟರಿಯಲ್ಲಿ ಜಾರಿಗೆ ತರಲಿಲ್ಲ. ಕಾರಣ, ಆರ್ಥಿಕ ಸಮಸ್ಯೆಗಳು. ಭೋಪಾಲ್ ಫ್ಯಾಕ್ಟರಿ ಮೀಥೈಲ್ ಐಸೊಸಯನೇಟ್ ತಯಾರಿಸಲು ಆರಂಭಮಾಡುವ ಮೊದಲೇ ಅಮೆರಿಕಾದ ಕಾರ್ಬೈಡ್ ಕಂಪನಿಯಿಂದ ಮುಂಬಯಿ ಬಂದರಿನ ಮೂಲಕ ೪೪ ಗ್ಯಾಲನ್ M.I.C. ತುಂಬಿರುವ ೧೬ ಡ್ರಮ್ಮುಗಳನ್ನು ಭೋಪಾಲ್ ನಗರಕ್ಕೆ ಸಾಗಿಸಲಾಯಿತು. ಅತ್ಯಂತ ವಿಷಪೂರಿತ ದ್ರವವನ್ನು ಸುಮಾರು ೫೩೦ ಮೈಲಿ ರಸ್ತೆಯ ಮೂಲಕ ಸಾಗಿಸಿದ್ದು ಸಾಹಸವೇ ಸರಿ ಎಂದು ವಕ್ತಾರರು ಹೇಳಿದ್ದಾರೆ. ಮುಂಬಯಿ ಬಂದರಿನಲ್ಲೇ M.I.C ಸೋರಿಹೋಗಿದ್ದುದರ ದಾಖಲೆಯೂ ಇದೆ. ಮುಂದಿನ ಆರು ವರ್ಷಗಳಲ್ಲಿ ಸಹಸ್ರಾರು ಗ್ಯಾಲನ್ ದ್ರವವನ್ನು ಮಹಾರಾಷ್ಟ್ರ ಮತ್ತು ಮಧ್ಯಪ್ರದೇಶ ರಾಜ್ಯಗಳ ಮೂಲಕ ಹಳ್ಳಿಗಳಿಗೆ ಸರಬರಾಜು ಮಾಡಲಾಯಿತು. ಇದರ ಫಲಿತಾಂಶ ವೇನಾಯ್ತು? ಹಳ್ಳಿಗಳಲ್ಲಿ ಬಾವಿಯ ನೀರು ಕಲುಷಿತವಾಯ್ತು, ದನಕರುಗಳು ಸತ್ತವು, ಪಕ್ಷಿಗಳು ಸಾಯಲು ಕಾರಣವಾಯಿತು. ಇರಾನ್‌ನಿಂದ ಭೋಪಾಲ್‌ಗೆ ವಲಸೆಬಂದ ಒಮರ್ ಪಾಷಾ ಹಾಗೂ ಗಂಗಾರಾಮ್ ಮತ್ತು ಇಕ್ಬಾಲ್ ಮತ್ತಿತರರು, ಸಂತ್ರಸ್ತ ಜನತೆಗೆ ಪರಿಹಾರ ಒದಗಿಸಬೇಕೆಂದು ಮೆರವಣಿಗೆಗಳನ್ನು ಮಾಡಿ ಆಡಳಿತ ವರ್ಗವನ್ನು ಒತ್ತಾಯಿಸಿದರು.

೧೯೮೦ರ ಮೇ ೪ನೇ ದಿನಾಂಕ; ಮರೆಯಲಾಗದ ದಿನಾಂಕ. ಅಮೆರಿಕಾದಿಂದ ಭೋಪಾಲ್ ನಗರಕ್ಕೆ ರಫ್ತಾದ ಪ್ರಥಮ ಕೀಟನಾಶಕ ಯಂತ್ರಸ್ಥಾವರ ಮೀಥೈಲ್ ಐಸೊಸಯನೇಟ್ ದ್ರವವನ್ನು ಬಳಸಿಕೊಂಡು ಕೀಟನಾಶಕಗಳನ್ನು ತಯಾರಿಸಲು ಆರಂಭಮಾಡಿತು. ಭೋಪಾಲ್ ದುರಂತದ ನಾಂದಿ ಹೀಗಾಯಿತು. 'ಸೆವಿನ್' ಉತ್ಪನ್ನದ ಆರಂಭೋತ್ಸವದ ಸಮಾರಂಭಕ್ಕೆ ಅಮೆರಿಕಾದ ಕಾರ್ಬೈಡ್ ಕಂಪನಿಯ ಮುಖ್ಯಸ್ಥ ವಾರೆನ್ ಆಂಡರ್‌ಸೆನ್ ಹಾಜರಾದ. ಭೋಪಾಲ್‌ನ ಈ ಯಂತ್ರಸ್ಥಾವರ ವಾರೆನ್ ಆಂಡರ್‌ಸನ್‌ನ ವಿಜಯ ಹಾಗೂ ಸರ್ವನಾಶಕ್ಕೆ ಕಾರಣವೆಂದು ಹೇಳಬಹುದು. ಅಮೆರಿಕಾದ ವಾರೆನ್



ವೂಮರ್ ಫ್ಯಾಕ್ಟರಿಯ ಮೊಟ್ಟಮೊದಲ ಡೈರೆಕ್ಟರ್ ಆದ. ವೂಮರ್ ಫ್ಯಾಕ್ಟರಿಯ ಸಹೃದಯೀ ಆಡಳಿತಗಾರನಾಗುವ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಿದ್ದ; ಆದರೆ, ಇವನ ಆಶೋತ್ತರಗಳೆಲ್ಲ ಭೋಪಾಲ್ ದುರಂತದಿಂದ ನುಚ್ಚು ನೂರಾದವು. ೧೯೮೧ರ ಡಿಸೆಂಬರ್ ೨೩ರಂದು ಭೋಪಾಲ್ ಫ್ಯಾಕ್ಟರಿಯಲ್ಲಿ ಮೇಲ್ವಿಚಾರಕನಾದ ಮಹಮದ್ ಅಶ್ರಾಫ್ ದ್ರವರೂಪದ ಫಾಸ್ಜೀನ್ ಅನ್ನು ಮೂಸಿ ನೋಡಿ ಮರಣಕ್ಕೀಡಾದರೂ ಸಹ ಸಾಕಷ್ಟು ಮುಂಜಾಗ್ರತಾ ಕ್ರಮಗಳನ್ನು ಜಾರಿಗೆ ತರಲಿಲ್ಲ. ೧೯೮೨ರ ಫೆಬ್ರವರಿ ೧೦ ನೇ ದಿನಾಂಕ ಫಾಸ್ಜೀನ್ ಪಂಪಿನಲ್ಲಿ ಸೋರಿಕೆಯಾಗಿದ್ದನ್ನು ಮುಚ್ಚಿಡಲಾಯಿತು. ಅಕ್ಟೋಬರ್‌ನಲ್ಲಿ ಸಹ ಅಪಘಾತವಾಗಿತ್ತೆಂದು ತಿಳಿದುಬಂದಿದೆ. ಈ ಹಿನ್ನೆಲೆಯಲ್ಲಿ ಫ್ಯಾಕ್ಟರಿಯ ಕಾರ್ಮಿಕ ಸಂಘಗಳು ಎಚ್ಚೆತ್ತು ಫ್ಯಾಕ್ಟರಿಯಿಂದ ಅಪಾಯ ನಿಶ್ಚಿತವೆಂದು ಸಾರುವ ೬,೦೦೦ ಪೋಸ್ಟರ್‌ಗಳನ್ನು ಫ್ಯಾಕ್ಟರಿಯ ಗೋಡೆಗಳ ಮೇಲೆ ಅಂಟಿಸಿದ್ದುಂಟು. ಕಾರ್ಮಿಕ ನೇತಾರನಾದ ಮಾಳವೀಯ ಫ್ಯಾಕ್ಟರಿಯನ್ನು ಮುಚ್ಚಬೇಕೆಂಬ ಹಕ್ಕೊತ್ತಾಯವನ್ನು ಮುಂದಿಟ್ಟು ಉಪವಾಸ ಸತ್ಯಾಗ್ರಹವನ್ನೇ ಮಾಡಿದ. ಧೀರ ಪತ್ರಿಕಾ ವರದಿಗಾರ ರಾಜಕುಮಾರ್ ಕೇಸ್ವಾನಿ ಫ್ಯಾಕ್ಟರಿಯ ಒಳಗೆಲ್ಲಾ ಸುತ್ತಾಡಿ ಫ್ಯಾಕ್ಟರಿ ಅತ್ಯಂತ ಅಪಾಯದ ಸನ್ನಿವೇಶದಲ್ಲಿರುವುದೆಂದು ಘೋಷಿಸಿದ. ೧೯೮೨ರ ಸೆಪ್ಟೆಂಬರ್ ೧೭ನೇ ದಿನಾಂಕ ಕೇಸ್ವಾನಿ, ''ದಯವಿಟ್ಟು ನಮ್ಮ ನಗರವನ್ನು ರಕ್ಷಿಸಿ'' ಎಂಬ ಶೀರ್ಷಿಕೆಯಡಿಯಲ್ಲಿ ಲೇಖನವನ್ನು ಪ್ರಕಟಿಸಿದ. ಒಂದು ವಾರದ ನಂತರ ಸಾಪ್ತಾಹಿಕ ಪತ್ರಿಕೆಯಲ್ಲಿ ''ಭೋಪಾಲ್ ನಗರ ಅಗ್ನಿಪರ್ವತದ ಮೇಲೆ ಕೂತಿದೆ'' ಎಂಬ ಉದ್ಗಾರವನ್ನೂ ಎತ್ತಿದ. ಇನ್ನು ಸ್ವಲ್ಪ ಕಾಲದಲ್ಲೇ ಈ ನಗರ 'ಮೃತನಗರ'ವಾಗುತ್ತದೆಯೆಂಬ ಭವಿಷ್ಯವನ್ನೇ ನುಡಿದ. ದುರದೃಷ್ಟವಶಾತ್ ಕ್ಯಸಾಂಡ್ರ ಭವಿಷ್ಯವಾಣಿಯಂತೆ ಕೇಸ್ವಾನಿಯ ಭವಿಷ್ಯವಾಣಿಯನ್ನು ಯಾರೂ ನಂಬಲಿಲ್ಲ.

೧೯೮೪ರ ಡಿಸೆಂಬರ್ ೨ನೇ ದಿನಾಂಕ! ಒರಿಯ ಬಸ್ತಿಯ ದಿಲೀಪ್ ಮತ್ತು ಪದ್ಮಿನಿಯರ ವಿವಾಹ ಸಂಬಂಧ ಸಂತೋಷಕೂಟವನ್ನು ಏರ್ಪಡಿಸಲಾಗಿತ್ತು. ರಾತ್ರಿ ೧೦ ಘಂಟೆಗೆ ವಿವಾಹದ ಮುಹೂರ್ತ ! ಅಂದೇ ಮಧ್ಯರಾತ್ರಿ M.I.C. ಸೋರಿಕೆಯಿಂದ ಭೀಕರ ಅಪಘಾತವಾಯಿತು. ಟ್ಯಾಂಕುಗಳಲ್ಲಿ ಶೇಖರಿಸಿದ್ದ ೬೩ ಟನ್ M.I.C. ಸೋರಲು ಆರಂಭವಾಯಿತು. ಟ್ಯಾಂಕುಗಳಲ್ಲಿನ ಕಲ್ಮಷ ಹೆಚ್ಚಾದಂತೆ ಉಷ್ಣ ವಿಸರ್ಜನಾಕ್ರಿಯೆಗಳು ರಭಸದಿಂದ ಜರುಗಿ ೪೨ ಟನ್ M.I.C. ವಿಭಜನೆಹೊಂದಿ ದ್ರವರೂಪದಿಂದ ಅನಿಲರೂಪಕ್ಕೆ ಬದಲಾಯಿತು. ವಿಷ ತುಂಬಿದ ಅನಿಲದ ಮೋಡ ಕಾರ್ಮಿಕರ ತಾಣವಾದ ರೈಲ್ವೆ ಕಾಲೋನಿಯತ್ತ ಸಾಗಿತು. ಮದುವೆಗೆ ಆಗಮಿಸಿದ್ದ ಅಹ್ವಾನಿತರಿಗೆ ದೂರ ಹೋಗಲು ಸೂಚನೆ ನೀಡಲಾಯಿತು. ಆದರೇನು ? ಊರು ಕೊಳ್ಳೆ ಹೋದ ಮೇಲೆ ಊರ ಬಾಗಿಲನ್ನು ಹಾಕಿದಂತಾಯಿತು, ಭೋಪಾಲ್ ಸ್ಟೇಷನ್ ಅಧಿಕಾರಿ ಹರೀಶ್ ಧುರ್ವೆ ಸೇರಿದಂತೆ ಸಹಸ್ರಾರು ಜನ ಸಾವಿಗೀಡಾದರು. ಗಾಂಧಿ ಮೆಡಿಕಲ್ ಕಾಲೇಜಿನ ಪ್ರೊಫೆಸರ್ ಶರ್ಮ, ಸ್ಥಳೀಯ ಆಸ್ಪತ್ರೆಯ ಡಾಕ್ಟರ್ ಗಂಧೆ, ಆಸ್ಪತ್ರೆಯ ನೌಕರರು, ನರ್ಸುಗಳು ಮತ್ತು ಸಿಸ್ಟರ್ ಫೆಲಿಸಿಟಿ ಇಡೀ ರಾತ್ರಿ ಬಿಡುವಿಲ್ಲದೆ ಅಪಘಾತಕ್ಕೀಡಾದ



ಸಾವಿರಾರು ಜನರಿಗೆ ನೆರವನ್ನು ನೀಡಿದರು. ನೂರಾರು ಜನರ ಬಾಯಿಂದ ನೊರೆ ಹರಿಯುತ್ತಿತ್ತು, ಮುಖದಲ್ಲಿ ಸತ್ತವರ ಛಾಯೆ ಕಾಣಿಸುತ್ತಿತ್ತು, ಕಣ್ಣುಗಳು ಉರಿಗಣ್ಣುಗಳಾದವು, ದೃಷ್ಟಿಹೀನವಾದವು, ಮೈನಡುಕ, ಜ್ವರ ಕಾಣಿಸಿಕೊಂಡು ಭೀಕರ ದೃಶ್ಯವೇ ಎದುರಾಯಿತು. ಎಲ್ಲೆಲ್ಲೂ ಸುಟ್ಟದೇಹದ ದುರ್ವಾಸನೆ ಪಸರಿಸಿತ್ತು. ಮೃತರ ಅಂತ್ಯಸಂಸ್ಕಾರ ಮಾಡುವುದೇ ದುಸ್ತರ ಕಾರ್ಯವಾಗಿ ಪರಿಣಮಿಸಿತು. ಸತ್ತವರಲ್ಲಿ ಹಿಂದುಗಳು ಯಾರು, ಮುಸ್ಲಿಮರು ಯಾರು, ಕ್ರಿಶ್ಚಿಯನ್ನರು ಯಾರು ಎಂದು ಗುರುತಿಸುವುದೇ ಕಷ್ಟವಾಗಿತ್ತು. ಆ ಸಂಕಟದ ಸನ್ನಿವೇಶದಲ್ಲಿ ಅಂತಹುದರ ಅಗತ್ಯವೂ ಇರಲಿಲ್ಲವೆನ್ನಿ.

೧೯೯೧ರಲ್ಲಿ ಭೋಪಾಲಿನ ನ್ಯಾಯಾಲಯ ಯೂನಿಯನ್ ಕಾರ್ಬೈಡ್ ಕಂಪನಿಯ ಮುಖ್ಯಸ್ಥನಾದ ವಾರೆನ್ ಆನ್‌ಡರ್‌ಸನ್ನನ ವಿರುದ್ಧ ಜನಾಂಗ ಹತ್ಯೆಯ ಅಪರಾಧದ ಆಪಾದನೆಯ ಆಧಾರದ ಮೇಲೆ ವಾರೆಂಟ್ ಹೊರಡಿಸಿತು. ಕೋರ್ಟ್ ಮುಂದೆ ಹಾಜರಾಗುತ್ತೇನೆಂದು ಆಶ್ವಾಸನೆ ನೀಡಿದ ಆನ್‌ಡರ್‌ಸನ್ ತಲೆ ತಪ್ಪಿಸಿಕೊಂಡ. ಅಮೆರಿಕದಲ್ಲಿ ಗೋಪ್ಯ ಸ್ಥಳದಲ್ಲಿ ವಾಸವಾಗಿದ್ದಾನೆಂಬ ವಿಷಯ ಈಗ ಬಯಲಿಗೆ ಬಂದಿದೆ. ಸದ್ಯದಲ್ಲಿ ಯೂನಿಯನ್ ಕಾರ್ಬೈಡ್ ಕಂಪನಿಯ ಕೃಷಿ ವಿಭಾಗವನ್ನು ಮಾರಾಟ ಮಾಡಲಾಗಿದೆ. ಸೆವಿನ್ ತಯಾರಿಸುವ



ಸ್ಥಾವರವನ್ನು ಮತ್ತು ಅದರ ಸ್ಥಿರ, ಚರ ಆಸ್ತಿಯನ್ನು ೧೯೯೯ರಲ್ಲಿ ಪರಭಾರೆ ಮಾಡಲಾಗಿದೆ. ಡೌ ಕೆಮಿಕಲ್ ಕಂಪನಿ ಸೆವಿನ್ ಸ್ಥಾವರವನ್ನು ಕೊಂಡುಕೊಂಡಿದೆಯೆಂದು ತಿಳಿದುಬಂದಿದೆ. ಸುನಿಲ್‌ಕುಮಾರ್ ಮತ್ತಿತರರು ಭೋಪಾಲ್ ಜನತೆಗಾದ ನಷ್ಟವನ್ನು ಸರಿದೂಗಿಸಲು ೧೫ ಬಿಲಿಯನ್ ಡಾಲರ್ ಪರಿಹಾರ ಒದಗಿಸಲು ದಾವ ಹಾಕಿದ್ದಾರೆ. ಕಾರ್ಬೈಡ್ ಕಂಪನಿಯ ವಕೀಲರು ಅಮೆರಿಕ ಮತ್ತು ಭಾರತೀಯ ಪ್ರಜೆಗಳ ಆರ್ಥಿಕ ತುಲನೆಮಾಡಿ, ಪ್ರತಿಯೊಬ್ಬ ಭೋಪಾಲಿನ ಸಂತ್ರಸ್ತನಿಗೆ ೮,೫೦೦ ಡಾಲರ್‌ಗಳಷ್ಟು ಪರಿಹಾರ ಒದಗಿಸಬಹುದೆಂದು ತರ್ಕಿಸಿದ್ದಾರೆ. ಅಂದರೆ, ಅವರ ಲೆಕ್ಕಾಚಾರದ ಪ್ರಕಾರ ಭಾರತದ ಸಮಗ್ರ ರಾಷ್ಟ್ರೀಯ ಉತ್ಪಾದನೆ ಅಮೆರಿಕಾದ ಜಿಎನ್‌ಪಿಯ ಶೇಕಡ ೧.೭ರಷ್ಟಿದೆ. ಹೀಗಾಗಿ ಅಮೆರಿಕಾದ ಪ್ರಜೆಯ ಮೌಲ್ಯ ೫೦೦,೦೦೦ ಡಾಲರ್ ಆದರೆ, ಭಾರತೀಯನ ಮೌಲ್ಯ (?) ೮,೫೦೦ ಡಾಲರ್ ಎಂದು ಕಂಪನಿಯ ವಕೀಲರ ಕುತರ್ಕ ಹೇಳುತ್ತದೆ.

ಭೋಪಾಲ್ ದುರಂತದಲ್ಲಿ ಮಾರಕವಾದ ವಿಷಾನಿಲ ತುಂಬಿದ ಮೋಡದಿಂದ ಸುಮಾರು ೫ ಲಕ್ಷ ಜನ ನಾನಾ ರೀತಿಯ ತೊಂದರೆಗಳನ್ನು ಅನುಭವಿಸಿದ್ದಾರೆ. ಈಗಲೂ ಅನುಭವಿಸುತ್ತಿದ್ದಾರೆ. ಅವರ ಶುಶ್ರೂಷೆಗೆ ಸಂಭಾವನಾ ಆಸ್ಪತ್ರೆ ಸ್ಥಾಪನೆಯಾಗಿದೆ. ಈ ಆಸ್ಪತ್ರೆಗೆ ಡೊಮಿನಿಕ್ ಪುಸ್ತಕದ ಮಾರಾಟದಿಂದ ಸಂದಾಯವಾದ ಹಣವನ್ನು ನೀಡಲಾಗಿದೆ. ಭೋಪಾಲ್ ಸ್ಥಾವರದ ಇಂಜಿನೀಯರ್‌ಗಳು ಈ ಆಸ್ಪತ್ರೆಯ ಸ್ಥಾಪಕರು. ಡೊಮಿನಿಕ್ ಬರೆದ ಪುಸ್ತಕಗಳು ಸುಮಾರು ೩೦ ವಿವಿಧ ಭಾಷೆಗಳಿಗೆ ಅನುವಾದಿತವಾಗಿವೆ. ಲಕ್ಷಾಂತರ ಓದುಗರನ್ನು ಪಡೆದಿವೆ. ಹಲವು ಪುಸ್ತಕಗಳು ಚಲನಚಿತ್ರದ ವಸ್ತುಗಳಾಗಿವೆ. ಡೊಮಿನಿಕ್ ಬರೆದ ಈ ಪುಸ್ತಕದಿಂದ ಲಭಿಸಿದ ಹಣವನ್ನೆಲ್ಲ ಭೋಪಾಲ್ ಸಂತ್ರಸ್ತರಿಗೆ ಮೀಸಲಿಡಲಾಗಿದೆ.

**ಪ್ರೊ॥ ಎಂ. ಎ. ಸೇತುರಾವ್**
ನಂ. ೪೨೧೯, ಮುನೇಶ್ವರ ಟೆಂಪಲ್ ಸ್ಟ್ರೀಟ್, ಸುಬ್ರಮಣ್ಯನಗರ
ಬೆಂಗಳೂರು-೫೬೦ ೦೨೧

# ಕಲ್ಲುಗಳು

ನಾ. ಡಿಸೋಜ

ಇಡೀ ರಾಜ್ಯವೇ ಕೋಮು ದಳ್ಳುರಿಯಲ್ಲಿ ಬೇಯುತ್ತಿರುವಾಗ ಈ ನಗರದ ಬಗ್ಗೆ ಕೆಲ ಒಳ್ಳೆಯ ಮಾತುಗಳು ಕೇಳಿಬಂದವು. ಎಲ್ಲ ಊರುಗಳಲ್ಲೂ ಜನ ತಮ್ಮ ಧರ್ಮ, ದೇವರು, ಜಾತಿಗಳನ್ನು ಮುಂದೆ ಮಾಡಿಕೊಂಡು ರಾಕ್ಷಸರಾಗಿದ್ದರು. ಸಣ್ಣ ಪುಟ್ಟ ಭಿನ್ನಾಭಿಪ್ರಾಯಗಳು, ಮತಭೇದಗಳು, ಹೊಟ್ಟೆಕಿಚ್ಚು, ಮತ್ಸರ, ಭೀಕರ ರೂಪ ತಾಳಿತ್ತು. ಈ ಕೋಮಿನವರು ಆ ಕೋಮಿನವರ ಮನೆಗಳನ್ನು ಸುಟ್ಟಿದ್ದರು. ಪ್ರತಿಯಾಗಿ ಆ ಕೋಮಿನವರು ಇವರ ಮನೆಗಳನ್ನು ಸುಟ್ಟಿದ್ದರು. ಎರಡೂ ಕೋಮಿನ ಅಂಗಡಿಗಳು, ಕಾರ್ಯಾಗಾರಗಳು, ಹೋಟೆಲುಗಳು ನಾಶವಾಗಿದ್ದವು. ಜನ ಸತ್ತಿದ್ದರು. ಗಾಯ ಗೊಂಡಿದ್ದರು. ಮಕ್ಕಳು ಮುದುಕರು ಸ್ತ್ರೀಯರು ನೊಂದಿದ್ದರು. ಈವರೆಗೆ ಇವರನ್ನು ಅವರು, ಅವರನ್ನು ಇವರು ನಂಬಿಕೊಂಡು ಇದ್ದ ಕಡೆ ಈಗ ಅಪನಂಬಿಕೆ, ಅನುಮಾನ, ಸಂಶಯ ತಲೆ ಹಾಕಿತ್ತು. ಹೊಡಿ ಬಡಿ ಎಂಬ ಮಾತು ಒಂದು ಕಡೆ, ಮಾರೋ, ದಾಲೋ ಎಂಬ ಮಾತು ಮತ್ತೊಂದು ಕಡೆ ಕೇಳಿಬರತೊಡಗಿತ್ತು. ಅವರ ದೇವಾಲಯಗಳಿಂದ ಇವರ ಪ್ರಾರ್ಥನಾ ಮಂದಿರಗಳಿಂದ ನೀಲಿ ಹೊಗೆ ಹೊರಬಿದ್ದು ಊರು ಕೇರಿಗಳನ್ನು ವ್ಯಾಪಿಸತೊಡಗಿತ್ತು. ರಾಕ್ಷಸರನ್ನು ಮನುಷ್ಯರನ್ನಾಗಿ ಮಾಡಲೆಂದೇ ಹುಟ್ಟಿಕೊಂಡ ಧರ್ಮ, ಮನುಷ್ಯರನ್ನು ರಾಕ್ಷಸರನ್ನಾಗಿಸಿತ್ತು. ಜಗದ್ರಕ್ಷಕ ಎಂದು ಎರಡೂ ಕೋಮಿನವರು ನಂಬಿದ ಅವರವರ ದೇವರುಗಳನ್ನು ರಕ್ಷಿಸಲು ಆ ಈ ಕೋಮಿನ ಜನ ಕತ್ತಿ, ಲಾಂಗು, ತ್ರಿಶೂಲ, ದೊಣ್ಣೆ ಹಿಡಿದು ನಿಂತಿದ್ದರು. ರಾಜ್ಯದ ಎಲ್ಲ ದೊಡ್ಡ ನಗರಗಳ ಕತೆ ಇದೇ ಆಗಿತ್ತು. ಎಲ್ಲ ಸಣ್ಣ ಊರುಗಳಲ್ಲಿ ಅದೇ ಸುದ್ದಿ ಕೇಳಿಬರುತ್ತಲಿತ್ತು. ಸಣ್ಣ ಸಣ್ಣ ಹಳ್ಳಿ ಗ್ರಾಮಗಳ ಮಾತು ಕೂಡ ಬೇರೆಯಾಗಿರಲಿಲ್ಲ.

ಆದರೆ....

ಅಲ್ಲೊಂದು ನಗರವಿದೆ. ಅಲ್ಲಿ ಎರಡೂ ಕೋಮಿನ ಜನ ಸ್ನೇಹದಿಂದಿದ್ದಾರೆ. ವಿಶ್ವಾಸದಿಂದಿದ್ದಾರೆ. ಸಂತೋಷದಿಂದಿದ್ದಾರೆ. ಆ ನಗರದಲ್ಲಿ ಅವರ ದೇವಾಲಯ ಇವರ ಪ್ರಾರ್ಥನಾ ಮಂದಿರ ಅಕ್ಕಪಕ್ಕದಲ್ಲಿವೆ. ಒಂದು ಕೋಮಿನ ಜನ ನಿಶ್ಚಿತ ಅವಧಿಯಲ್ಲಿ ಅವರ ಪ್ರಾರ್ಥನಾ ಮಂದಿರಕ್ಕೆ ಹೋಗಿ ಪ್ರಾರ್ಥನೆ ಸಲ್ಲಿಸುತ್ತಾರೆ. ಹಾಗೆಯೇ ನಿಗದಿತ ಸಮಯದಲ್ಲಿ ಬೇರೊಂದು ಕೋಮಿನ ಜನ ಅವರ ದೇವಾಲಯಕ್ಕೆ ಹೋಗಿ ಪೂಜೆ ಸಲ್ಲಿಸುತ್ತಾರೆ. ಅವರಿಂದ ಇವರಿಗೆ ತೊಂದರೆಯಾಗಿಲ್ಲ, ಇವರಿಂದ ಅವರಿಗೆ ತೊಂದರೆಯಾಗಿಲ್ಲ. ಬೇರೆ ಬೇರೆ ಊರುಗಳಲ್ಲಿ ಇಷ್ಟೆಲ್ಲ ಆಗಿದ್ದರೂ ಈ ನಗರದಲ್ಲಿ ಏನೂ ಆಗಿಲ್ಲ. ಈ ನಗರದ ಜನರ ಮನಸ್ಸಿನ ಮೇಲೆ ಏನೂ ಪರಿಣಾಮವಾಗಿಲ್ಲ ಎಂದು ಪತ್ರಿಕೆಗಳೂ ವರದಿ ಮಾಡಿದವು. ಹೀಗೆಂದೇ ನಾನು ಅಪರೂಪದ ಈ ನಗರ ನೋಡಲೆಂದು ಹೊರಟೆ.

ನಾನು ಉದ್ದಕ್ಕೂ, ಕೋಮು ಬೆಂಕಿಯಿಂದ ಬೂದಿಯಾದ ಅರೆ ಸುಟ್ಟ ಊರು ನಗರಗಳ ಮೂಲಕವೇ ಹೋಗಬೇಕಾಯಿತು. ಜನರಲ್ಲಿ ಒಂದು ಬಗೆಯ ಭೀತಿ, ಆತಂಕ ಮನೆಮಾಡಿತ್ತು. ತಮ್ಮ ನೆರಳನ್ನೇ ಆ ಜನ ನಂಬುತ್ತಿರಲಿಲ್ಲ. ತಮ್ಮ ಸದ್ದೇ ಅವರನ್ನು ತಲ್ಲಣಗೊಳಿಸುತ್ತಿತ್ತು. ಮನೆಯ ಮೇಲೊಂದು ಬೆಕ್ಕು ತಿರುಗಾಡಿದರೆ ಎಲೆಯೊಂದು ಮರದಿಂದ ಉದುರಿ ಬಿದ್ದರೆ ಈ ಜನ ಕತ್ತಿಯನ್ನೋ ದೊಣ್ಣೆಯನ್ನೋ ಹುಡುಕುತ್ತಿದ್ದರು.

''ಅಯ್ಯೋ ನಾವು ಸುಖವಾಗಿದ್ದೆವು. ನೆಮ್ಮದಿಯಿಂದ ಇದ್ದೆವು....'' ಎಂದು ಹಿಂದಿನ ದಿನಗಳನ್ನು ಸ್ಮರಿಸಿಕೊಂಡರು.

''ನಮಗೆ ವೈರಿಗಳೇ ಇರಲಿಲ್ಲ... ಯಾರೂ ನಮಗೆ ಕೇಡು ಬಗೆಯುವವರು ಇರಲಿಲ್ಲ...'' ಆದರೂ ಹೀಗೆ ಆಯಿತು... ನಮ್ಮ ಮನೆಗಳನ್ನು ಕಟ್ಟಿದವರೇ ನಮ್ಮ ಮನೆಗಳಿಗೆ ಬೆಂಕಿ ಇಟ್ಟರು. ನಮಗೆ ಶುಭ ಹಾರೈಸಿದವರೇ ಕೆಡಕನ್ನು ತಂದರು ಎಂದವರು ಗೋಳಾಡಿದರು.

''ಅಲ್ಲ, ಏಕೆ ಹೀಗಾಯಿತು ? ಬಹಳ ವರ್ಷಗಳಿಂದ ನೀವು ಒಟ್ಟಿಗೇನೇ ಇದ್ದಿರಲ್ಲ... ಈಗ ಏನಾಯಿತು ?'' ಎಂದು ಕೇಳಿದೆ ನಾನು.

''ಏಕೆ ? ಏಕೆ ? ಏನಾಯಿತು ?'' ಎಂದು ಅವರೆಲ್ಲ ಪರಸ್ಪರ ಮುಖ ನೋಡಿಕೊಂಡರು.

ಖಚಿತವಾಗಿ ಏನನ್ನು ಹೇಳಲೂ ಅವರಿಂದ ಆಗಲಿಲ್ಲ.

''ಅವರಿಗೂ ನಮಗೂ ಆಗಲ್ಲ ಬಿಡ್ರಿ'' ಎಂದರು ಹಲವರು.

''ನಮ್ಮ ದೇವರನ್ನು ಹಳೀತಾರೆ.''

''ನಮ್ಮ ದೇವರನ್ನ ಬೈತಾರೆ.''

''ಅವರಿಗೆ ಧಿಮಾಕು ಬಂದಿದೆ.''

''ಎಣ್ಣೆ ದೇಶದ ಹಣ ತಂದು ಇಲ್ಲಿ ಮಹಡಿ ಮೇಲೆ ಮಹಡಿ ಕಟ್ಟುತ್ತಾರೆ...''

''ಬಾಂಬು, ಚಾಕು, ಚೂರಿ ತಂದು ದಾಸ್ತಾನ ಇಡತಾರೆ.''

''ಲಾಠಿ ಹಿಡಕೊಂಡು ಹೆದರಸ್ತಾರೆ.''

''ನಮಗೆ ಪವಿತ್ರ ಆಗಿರೋದೆಲ್ಲ ಅವರಿಗೆ ಅಪವಿತ್ರ.''

''ನಾವು ಏತಿ ಅಂದ್ರೆ ಅವರು ಪ್ರೇತಿ.''

ಹುಡುಕಿ ಹುಡುಕಿ ಏನೇನೋ ಮಾತುಗಳನ್ನು ಜೋಡಿಸಿದರು. ಮಾತಿನಲ್ಲಿ ಕೂಡ ಸ್ಪಷ್ಟತೆ ಇಲ್ಲ. ಏನೋ ಗೊಂದಲ. ಏನೋ ತಪ್ಪು ತಿಳುವಳಿಕೆ. ಎಷ್ಟೋ ಮಾತುಗಳು ತುಟಿಯ ಮೇಲಿನಿಂದಲೇ ಹೊರ ಜಾರಿಬಿದ್ದವು. ಈ ಮಾತುಗಳಲ್ಲಿ ಕೂಡ ಜೀವವಿರಲಿಲ್ಲ. ಹೃದಯದ ಸ್ಪಂದನವಿರಲಿಲ್ಲ. ಎದೆಯಲ್ಲಿ ಏನೋ ಇರಿಸಿಕೊಂಡು ಬೇರೇನನ್ನೋ ಹೇಳಿದರು ಕೆಲವರು. ಯಾವುದೋ ಕಾರಣಕ್ಕೆ ಬೇರೇನೋ ಕ್ಯಾತೆ ತೆಗೆದಂತೆ ಮಾತನಾಡಿದವರೂ ಇದ್ದರು.

ನಾನು ಮಾತು ಮುಂದುವರಿಸಲಿಲ್ಲ. ನನಗೆ ಆ ನಗರಕ್ಕೆ ಹೋಗಬೇಕಿತ್ತಲ್ಲ. ಹೀಗಾಗಿ ಜಾತಿಯ ದಂಗೆಗಳಿಂದ ಬೆಂದು ಹೋದ, ಊರುಗಳನ್ನು ಹಿಂದೆ ಹಾಕಿ ಹೊರಟೆ. ಹೀಗೆ ಹೊರಟಾಗ ಈ ದಂಗೆ ಆ ಊರು ನಗರದ ಜನರನ್ನು ಎಲ್ಲೋ ಒಂದು ಕಡೆ ತಟ್ಟಿದೆ ಎನಿಸಿತು.

''ಇದು ಬೇಕಿರಲಿಲ್ಲ ಬಿಡಿ'' ಎಂದರು ಕೆಲವರು.

''ಯಾವುದೇ ಜಾತೀನಲ್ಲಿ ಕೆಟ್ಟವರೂ ಇರತಾರೆ...... ಒಳ್ಳೆಯವರೂ ಇರತಾರೆ...... ಒಳ್ಳೆಯವರ ಸಂಖ್ಯೇನೇ ಹೆಚ್ಚಾಗಿರುತ್ತೆ...... ಆದರೂ ಹೀಗೊಂದು ಕೆಲಸ ಆಗಿಬಿಡುತ್ತೆ ನೋಡಿ.......'' ಎಂದರು ಒಂದಿಬ್ಬರು.

''ಆಯ್ಯೋ ಜಾತಿಗೀತಿ ಅಂತ ಕೂತ್ರೆ ಮನುಷ್ಯ ಮರೆಯಾಗಿ ಹೋಗೋಲ್ವೆ... ಮುಖ್ಯ ಮನುಷ್ಯ'' ಎಂದವರೂ ಉಂಟು.

''ಹಿಂದೆಲ್ಲ ನಾವು ಚೆನ್ನಾಗಿಯೇ ಇದ್ದೆವಲ್ಲ... ನಮ್ಮ



ನಮ್ಮ ಕೆಲಸ ಮಾಡಿಕೊಂಡು ಇದ್ವಿ... ಈ ರಗಳೆ ಯಾಕೆ ಬೇಕಿತ್ತು ?'' ಎಂದೂ ಕೇಳಿದರು.

''ಈಗ ನೋಡಿ ಹೊರಗೆ ಹೋಗೋ ಹಾಗಿಲ್ಲ, ಹೆದರಿಕೆ, ಅನುಮಾನ... ಯಾವಾಗ ಹೇಗೋ ಅಂತ ಭೀತಿ... ಛೇಛೇ... ಸಾಕಾಗಿಹೋಗಿದೆ'' ಎಂದು ಮಿಡುಕಾಡಿದರು.

ಹೀಗೆ, ಬಡಿದಾಡಿದವರನ್ನು, ಗೊಂದಲದಲ್ಲಿ ಸಿಲುಕಿಹಾಕಿಕೊಂಡವರನ್ನು, ಆತಂಕದಲ್ಲಿ ದಿನ ದೂಕುತ್ತಿರುವವರನ್ನು, ಸುಟ್ಟ ಮನೆ, ಕುಸಿದ ದೇವಾಲಯ, ಮುರಿದ ಪ್ರಾರ್ಥನಾ ಮಂದಿರ, ನೆಲಕ್ಕೊರಗಿದ ಶಾಲೆ, ಕಾರ್ಖಾನೆಗಳನ್ನು ಅವುಗಳ ಪಾಡಿಗೆ ಬಿಟ್ಟು ನಾನು ಆ ನಗರಕ್ಕೆ ಬಂದೆ.

ಸುದ್ದಿ ಸುಳ್ಳಾಗಿರಲಿಲ್ಲ.

ಅಲ್ಲಿ ನೀಲಿ ಹೊಗೆ ಇರಲಿಲ್ಲ, ಭೀತಿ, ಆತಂಕ, ಕಳವಳ, ಗೊಂದಲ ಏನೂ ಇರಲಿಲ್ಲ. ಸಾಲು ಸಾಲು ಮನೆಗಳು, ಅಂಗಡಿಗಳು, ಶಾಲೆಗಳು – ಈ ಕಡೆ ದೇವಾಲಯ, ಆ ಕಡೆ ಪ್ರಾರ್ಥನಾ ಮಂದಿರ, ಗಂಟೆಯ ನಾದ, ಧ್ವನಿವರ್ಧಕದಲ್ಲಿ ಮೊಳಗಿದ ಪ್ರಾರ್ಥನೆ. ಎಲ್ಲೆಲ್ಲೂ ನಗೆ, ಶಾಂತಿ, ನೆಮ್ಮದಿ.

ರಸ್ತೆ ತುಂಬ ಜನ. ಅಂಗಡಿ ಹೋಟೆಲುಗಳಲ್ಲಿ ಜನ ಅಲ್ಲಲ್ಲಿ ನಿಂತು ಮಾತನಾಡುವವರು. ಕುಳಿತು ಹರಟುತ್ತಿರುವವರು. ರಾಮಣ್ಣ ರಹೀಮಣ್ಣ ಬೈಟು ಕಾಫಿ ಕುಡಿಯುತ್ತಿದ್ದಾರೆ. ಹುಚ್ಚಪ್ಪ ಹುಸೇನ ಒಂದೇ ಕಡ್ಡಿಯಿಂದ ಬೀಡಿಗೆ ಬೆಂಕಿ ಹೊತ್ತಿಸಿಕೊಂಡು ದಿಲ್‌ದಾರನ ಬೀಡಿ ಅಂಗಡಿ ಮುಂದೆ ನಿಂತು ಬೀಡಿ ಸೇದುತ್ತಿದ್ದಾರೆ. ದಿಲ್ಲು ಬೀಬಿಯನ್ನು ಮೊದಲ ಹೆರಿಗೆಗೆಂದು ಆಸ್ಪತ್ರೆಗೆ ಸೇರಿಸಲು ಸಿದ್ದವ್ವ ಕರೆದೊಯ್ಯುತ್ತಿದ್ದರೆ ಮೊದಲ ಹೆರಿಗೆ ಮುಗಿಸಿಕೊಂಡ ರತ್ನ ಮಗುವಿನ ಜೊತೆ ಅದೇ ಆಸ್ಪತ್ರೆಯಿಂದ ಹೊರಬೀಳುತ್ತಿದ್ದಾಳೆ, ರತ್ನಳ ಹತ್ತು ದಿನಗಳ ಮಗುವನ್ನು ಮಮತಾಜಮ್ಮ ಜೋಪಾನವಾಗಿ ಎದೆಗವಚಿಕೊಂಡು –

''ನಡೀ ಬೇಟ.. ನಿನ ಮೊಗ ನನ್ನ ಕೈಲೈತೆ.. ಯೋಸ್ನೆ ಮಾಡಬ್ಯಾಡ.. ನಿನ್ನವ್ವ ಇದ್ದಿದ್ರೆ, ಅವಳು ಇಂಗೇನೇ ಮಗೂನ ಎತಕೊಂಡಿ ಬಂದಿರಾಳು.. ನಾನೇ ನಿನ್ನವ್ವ ನಡಿ..'' ಅನ್ನುತ್ತಿದ್ದಾಳೆ.

ಇಬ್ರಾಹಿಂ ಸಾಹೇಬರು ಚಪ್ಪಲಿ ಕೊಳ್ಳಲು ಬಂದ ಶಾಸ್ತ್ರಿಗಳಿಗೆ ''ತೊಕೊಳ್ಳಿ ಶಾಸ್ತ್ರಿಗಳೇ... ನಾನು ಯಾವತ್ತಾರ ಕೆಟ್ಟ ಮಾಲು ಕೊಟ್ಟಿದೀನಾ ?'' ಎಂದರೆ,

ರಾಧಾಕೃಷ್ಣ ಭವನದಲ್ಲಿ ಖಡಕ್ ಟೀ ಕುಡಿದ ದಾರಾಪೀರ ಗಲ್ಲದ ಬಳಿ ನಿಂತು ಹಣ ಕೊಡುತ್ತ ಗಲ್ಲದ ಮೇಲೆ ಕುಳಿತ ದುರ್ಗಾಭಟ್ಟರಿಗೆ ಹೇಳುತ್ತಾನೆ –

''ನೀವು ಏನೇ ಹೇಳಿ ದುರ್ಗಣ್ಣ... ದಿನಕ್ಕೆ ಒಂದ ಸಾರಿ ನಿಮ್ ಹೋಟೆಲ ಟೀ ಕುಡೀಲಿಲ್ಲ ಅಂದ್ರೆ ಮನ್ಸಿಗೆ ಸಮಾಧಾನ ಇರೋದಿಲ್ಲ...'' ಅನ್ನುತ್ತಾನೆ.

ಈ ನಗರದ ಜನರ ನಡುವೆ ಶಾಂತಿ, ಧರ್ಮ, ಪದ್ಧತಿ, ಆಚರಣೆ ಒಂದು ಅಡ್ಡಿಯಾಗಿ ಬೆಳೆದೇ ಇಲ್ಲ.

ಮಸೀದಿ ಇಮಾಮರು ದೇವಸ್ಥಾನದ ಪೂಜಾರಿಗಳನ್ನು ನಿಲ್ಲಿಸಿಕೊಂಡು ದಿನನಿತ್ಯ ಹತ್ತು ಹದಿನೈದು ನಿಮಿಷ ಮಾತನಾಡುತ್ತಾರೆ. ಆಗೆಲ್ಲ ಅವರು ಹೇಳುವ ಒಂದು ಮಾತಿದೆ –

''..ನಮ್ಮ ಮನೆಯಾಗೆ ಹುಡುಗ್ರು, ಊಟ ಮಾಡಾಕೆ ಒಂದೊಂದು ಪ್ಲೇಟು ಇಟ ಕೊಂಡಿದಾರೆ.. ಅದರಾಗೇನೇ ಊಟ ಮಾಡಬೇಕು ಅವ್ರು.. ಅಂದ್ರೆ ಅವಕ್ಕೆ ಸಂತೋಷ...''

ಇಮಾಮರ ಮಾತಿಗೆ ಪೂಜಾರಿಗಳು ದನಿ ಸೇರಿಸುತ್ತಾರೆ –

''ಹಂಗೇ ಅಲ್ವ... ಈ ಧರ್ಮ ಸಂಪ್ರದಾಯ... ಅವರವರದ್ದು ಅವರವರಿಗೆ....''

ಈ ಮಾತನ್ನು ಊರಿನ ಎಲ್ಲ ಜನ ಒಪ್ಪಿಕೊಂಡಿದ್ದಾರೆ....

ಒಂದು ಅರ್ಧಗಂಟೆ ಊರಿನಲ್ಲಿ ಸುತ್ತಾಡುತ್ತಿದ್ದಂತೆಯೇ ನನಗೆ ಆ ಊರಿನ ಏಕತೆಯ ಗುಟ್ಟು ತಿಳಿದುಹೋಯಿತು. ಅವರನ್ನು ಇವರು ಗೌರವಿಸುತ್ತ, ಇವರ ಕಷ್ಟ ತಾಪತ್ರಯ ಗಳಿಗೆ ಅವರು ನೆರವಾಗುತ್ತ, ಪರಸ್ಪರ ಅನುಮಾನ ಪಡದೆ ಅಸೂಯೆ ಪಡದೆ ಏನೇ ಮನ ಸ್ತಾಪ ಬಂದರೂ ಕೂತು ಮಾತನಾಡಿ ಪರಿಹರಿಸಿಕೊಂಡು ಆ ಊರಿನ ಜನ ಬದುಕಿದ್ದರು.

''ಅಲ್ಲ ನಿಮ್ಮ ನಡುವೆ ಮನಸ್ತಾಪ ಉಂಟುಮಾಡಲು ವಿಷ ಬೀಜ ಬಿತ್ತಲು ಯಾರೂ ಬರಲಿಲ್ಲವೇ ? ಪ್ರಯತ್ನ ಪಡಲಿಲ್ಲವೇ ?'' ಎಂದು ನಾನು ಹೋಟೆಲಿನಲ್ಲಿ ಕಾಫಿ ಕುಡಿಯುತ್ತ ಕುಳಿತ ಇದ್ರೂಸ ಸಾಹೇಬರನ್ನು ಶ್ಯಾಮರಾಯರನ್ನು ಒಟ್ಟಿಗೇನೇ ಕೇಳಿದೆ. ಹೋಟೆಲು ಹೊಕ್ಕ ನಾನು ಬೇಕೆಂದೇ ಇವರಿಬ್ಬರೂ ಕುಳಿತ ಮೇಜನ್ನು ಆರಿಸಿಕೊಂಡಿದ್ದೆ.

''ಸ್ವಾಮಿ... ಬರಲಿಲ್ವೇ ಅಂತ ಕೇಳಬೇಡಿ... ಬಂದ್ರು.... ಎರಡೂ ಕೋಮಿನವರು ಬಂದ್ರು... ಅದು ಹಾಗೆ ಇದು ಹೀಗೆ ಅಂತ ಊರಿನಲ್ಲಿ ಬೆಂಕಿ ಹಚ್ಚಲಿಕ್ಕೆ ನೋಡಿದ್ರು....''

ಶ್ಯಾಮರಾಯರು ಮಾತನ್ನು ಮುಂದುವರಿಸಿದರು. ''ಊರವರು ಸರಿಯಾಗಿದ್ರೆ ಯಾರೇನು ಮಾಡುತಾರೆ ಹೇಳಿ... ಹೀಗೆ ಬಂದ ಒಂದಿಬ್ಬರು... ಊರ ನಡುವೆ ಕಲ್ಲಾಗಿ ನಿಂತಿದಾರೆ ಈಗಲೂ'' ಎಂದರು.

''ಏನು ಕಲ್ಲಾಗಿ ನಿಂತಿದಾರೆಯೇ ?''

ನನಗೇಕೋ ಈ ಮಾತು ಅಚ್ಚರಿ ತರಿಸಿತು. ಮನುಷ್ಯ ಕಲ್ಲಾಗಿ ಪರಿವರ್ತನೆ ಹೊಂದು ವುದೇ ? ಅದೂ ಈ ಕಾಲದಲ್ಲಿ ? ನಾನು ಕತೆಯಲ್ಲೋ ಪುರಾಣದಲ್ಲೋ ಕೇಳಿದ ಮಾತು.

''ಹೌದು... ನೀವು ನೋಡಲಿಲ್ಲವೇ ?'' ಎಂದು ಕೇಳಿದರು ಇದ್ರೂಸ ಸಾಹೇಬರು.

''ನೀವು.... ಊರ ಮಧ್ಯೆ ಇರೋ ಚೌಕಕ್ಕೆ ಹೋಗಿಲ್ಲವೇನು ?'' ಶ್ಯಾಮರಾಯರು ಪ್ರಶ್ನಿಸಿದರು.

''ಹೋಗಿದ್ದೆ... ಅಲ್ಲಿ ಅಂತಹದೇನೂ ನನಗೆ ಕಾಣಲಿಲ್ಲ.''

''ಇಲ್ಲ ಅದು ಕಾಣೋದಿಲ್ಲ... ನಡೀರಿ ನಾನು ತೋರ್ಸತೀನಿ'' ಎಂದು ಇದ್ರೂಸ ಸಾಹೇಬರು ಎದ್ದರು.

''ನಾನು ಬರತೇನೆ... ಸ್ವಲ್ಪ ಕೆಲಸ ಇದೆ'' ಎಂದು ಶಾಮರಾಯರು ಕೈ ಮುಗಿದರು.

* * *

ನಾನು ಇದ್ರೂಸ ಸಾಹೇಬರ ಜೊತೆ ಹೊರಟೆ.

''ಸಲಾಂ ಇದ್ರೂಸಾ ಬಾಯ್.''

''ನಮಸ್ಕಾರ ಇದ್ರೂಸಣ್ಣ.''

''ಕೈ ಮುಗ್ದೆ ಸಾಹುಕಾರ್ರೆ.''

''ಅಲೇಕುಂ ಸಲಾಂ.''

''ಚೆನ್ನಾಗಿದೀರಾ ಅಣ್ಣ....''

''ಈ ಕಡೆ ಹೊಂಟ್ರಲ್ಲ ಅಣ್ಣಾ''

ಇದ್ರೂಸ ಸಾಹೇಬರಿಗೆ ಉದ್ದಕ್ಕೂ ಜನ ಕೈಮುಗಿದರು. ಇವರೂ ಸಲಾಂ ಮಾಡಿದರು.

ಇವರ ನಡುವೆ ಸಾಹೇಬರು ಕಲ್ಲಾಗಿ ನಿಂತವರ ಬಗ್ಗೆಯೂ ಹೇಳಿದರು.

ಈ ಕಲ್ಲಾದ ಜನ ಹೊರಗಿನಿಂದ ಬಂದವರೆ. ಈ ಊರಿನಲ್ಲಿ ಏನಾದರೂ ವ್ಯವಹಾರ ವ್ಯಾಪಾರ ಮಾಡಲು ಬಂದವರು.

ಒಬ್ಬರು ಹೊರಗಿನಿಂದ ಹಪ್ಪಳ, ಸಂಡಿಗೆ, ಉಪ್ಪಿನಕಾಯಿ, ಚಟ್ನಿ ಪುಡಿ, ಸಾಂಬಾರಪುಡಿ ತಂದು ಮಾರುತ್ತಿದ್ದವರು.

ಮತ್ತೊಬ್ಬರು ಮೀನು ತರುತ್ತಿದ್ದವರು.

ಇಬ್ಬರೂ ಸೈಕಲ ಇರಿಸಿಕೊಂಡಿದ್ದರು.

ಸೈಕಲ್ಲಿನ ಮೇಲೆಯೇ ಉಪ್ಪಿನಕಾಯಿ, ಮೀನು ತುಂಬಿದ ಚೀಲಗಳನ್ನು ಡಬ್ಬವನ್ನು ಇರಿಸಿಕೊಳ್ಳುತ್ತಿದ್ದರು.

ಇವರ ಸೈಕಲ್ಲುಗಳಿಗೆ ಎರಡು ಹಾರ್ನ್‌ಗಳಿದ್ದವು. ವಿಚಿತ್ರವಾದ ಸದ್ದು ಮಾಡುತ್ತಿದ್ದ ಹಾರ್ನ್‌ಗಳು. ಕೇರಿಗೆಲ್ಲ ಆ ಸದ್ದು ಕೇಳಿಸಬೇಕು. ಬಂದವರು ಉಪ್ಪಿನಕಾಯಿಯವರೋ ಮೀನಿನವರೋ ಎಂಬುದು ತಟ್ಟನೆ ಗೊತ್ತಾಗಬೇಕು. ಈ ಸದ್ದು ಕೇಳಿಯೇ ಜನ ಹೊರಗೆ ಬರಬೇಕು. ತಮಗೆ ಬೇಕಾದುದನ್ನು ಕೊಳ್ಳಬೇಕು.

ಅಂತೂ ಈ ಇಬ್ಬರೂ ಊರಿನಲ್ಲಿ ಜನಪ್ರಿಯರಾದರು. ಮನೆ ಮನೆ ಎದುರು ಸೈಕಲ್ ನಿಲ್ಲಿಸಿಕೊಂಡು ಮಾತನಾಡುತ್ತಿದ್ದರು. ಇಬ್ಬರೂ ಒಳ್ಳೆಯ ಮಾತುಗಾರರು, ಮಾತಿನಲ್ಲಿ ಮೆದು, ಮಾತು ಸಿಹಿ, ನಗುನಗುತ್ತ ಮಾತು. ಅಣ್ಣ, ತಾಯಿ, ತಂಗಿ ಎಂದೇ ಮಾತು ಆರಂಭ.

ಇವರ ಉಪ್ಪಿನಕಾಯಿ ಹಪ್ಪಳ, ಮೀನು ಜನರಿಗೆ ರುಚಿಕರವೆನಿಸಿತು. ಜನ ಇವರ ದಾರಿ ಕಾಯುವುದೂ ಖಾಯಂ ಆಯಿತು. ಜನ ಇವರಿಗೆ ಪರಿಚಿತರೂ ಆದರು. ಒಂದೊಂದು ಮನೆಯ ಮುಂದೆ ಇಪ್ಪತ್ತು ಮೂವತ್ತು ನಿಮಿಷ ಇವರು ನಿಂತು ವ್ಯಾಪಾರ ಮಾಡತೊಡಗಿದರು. ಅಕ್ಕಪಕ್ಕದ ಮನೆಗಳವರೂ ಅಲ್ಲಿ ಸೇರತೊಡಗಿದರು.

ಇವರಿಬ್ಬರೂ ತಮ್ಮ ತಮ್ಮ ವ್ಯಾಪಾರದ ಜೊತೆಜೊತೆಗೇನೇ ಬೇರೊಂದು ಕೆಲಸವನ್ನೂ ಆರಂಭಿಸಿದರು. ಅದು ಆ ನಗರದ ಜನರ ಮನಸ್ಸಿನಲ್ಲಿ ವಿಷದ ಬೀಜ ಬಿತ್ತುವ ಕೆಲಸ.

''ಉಪ್ಪಿನಕಾಯಿ, ಹಪ್ಪಳ ತಿನ್ನುವ ಜನ ಒಳಗೇ ಕುತಂತ್ರ ಮಾಡುತ್ತಾರೆ. ನಿಮ್ಮ ಬೆಳವಣಿಗೆ ಕಂಡರೆ ಅವರಿಗೆ ಆಗೋದಿಲ್ಲ.. ಅವರ ದೇವರುಗಳು ಅಸಂಖ್ಯಾತ. ಅವರ ಧರ್ಮ ಧರ್ಮವೇ ಅಲ್ಲ. ಅವರ ಜೊತೆಯಲ್ಲಿ ನೀವು ಬದುಕುವುದೆಂದರೆ ಅವಿಶ್ವಾಸಿಗಳ ಜೊತೆ ಬದುಕಿದ ಹಾಗೆ. ಅವರಲ್ಲಿ ನೂರಾರು ಜಾತಿಗಳಿವೆ. ಮೇಲು ಕೀಳೂ ಅಧಿಕ....''

ಹೀಗೆ ಮೀನು ತೂಗುತ್ತ ಮಾರುತ್ತ ಮೀನಿನವ ಹೇಳತೊಡಗಿದರೆ ಹಪ್ಪಳ ಸಂಡಿಗೆಯವನೂ ಇದೇ ಕೆಲಸ ಮಾಡಿದ.

## ಉತ್ತರ

ಕೆಲವೊಮ್ಮೆ
ಪ್ರಶ್ನೆಗಳನ್ನು
ಪ್ರಶ್ನೆಗಳಿಂದಲೆ
ಉತ್ತರಿಸಬೇಕು,
ಮುಳ್ಳನ್ನು ಮುಳ್ಳಿನಿಂದಲೆ
ತೆಗೆಯುವಂತೆ !

ಸಿ.ಪಿ.ಕೆ.
ಮೈಸೂರು

''...ಮೀನು ತಿನ್ನುವವರನ್ನು ನಂಬಬೇಡಿ... ಅವರು ಇಲ್ಲಿ ಬದುಕಿದ್ದಾರೆ. ಅವರಿಗೆ ಇಲ್ಲಿಯ ನೆಲ, ಗಾಳಿ, ನೀರು ಬೇಕು. ಆದರೆ ಅವರ ಮನಸ್ಸೆಲ್ಲ ಹೊರಗೆ. ಅವರು ಒಳ್ಳೆಯದಾಗಲಿ ಎಂದು ಬಯಸುವುದು ಹೊರಗಡೆಯವರನ್ನ. ಅವರು ಜಯಕಾರ ಹಾಕುವುದು ಹೊರಗಿನವರಿಗೆ. ನಿಮ್ಮ ದೇವರುಗಳೆಂದರೆ ಅವರಿಗೆ ತಮಾಷೆ. ಯಾವುದು ನಿಮಗೆ ಪವಿತ್ರವೋ ಅದು ಅವರಿಗೆ ತಾತ್ಸಾರ... ನೀವು ಅವರನ್ನು ಇಷ್ಟು ಹಚ್ಚಿಕೊಳ್ಳಬಾರದು.''

ಉಪ್ಪಿನಕಾಯಿ, ಹಪ್ಪಳ, ಸಾರು, ಸಾಂಬಾರುಪುಡಿ ಮಾರುತ್ತ ಈ ಮನುಷ್ಯ ಹೀಗೆ ಹೇಳಿದ.

ನಗರದ ಎರಡೂ ಕಡೆಯ ಜನರಿಗೆ ಈ ಇಬ್ಬರ ಮಾತೂ ನಿಜವೆನಿಸಿತು. ಸರಿ ಎನಿಸಿತು.

ಈವರೆಗೆ ಈ ವಿಷಯ ನಮಗೇಕೆ ಹೊಳೆಯಲಿಲ್ಲ ಎಂದವರಿಗೆ ಅಚ್ಚರಿಯಾಯಿತು.

ಮೀನು ಮಾರುವವ ಹೇಳುವುದು ನಿಜವೇ.

ಹಪ್ಪಳದವನ ಮಾತು ಖಂಡಿತವೆ.

ಅವರು ವಿಚಾರ ಮಾಡಿದರು. ತಮ್ಮ ತಮ್ಮಲ್ಲಿಯೇ ಮಾತನಾಡಿಕೊಂಡರು ಕೂಡ.

ಹೀಗೆ ಊರಿನಲ್ಲೆಲ್ಲ ಗುಸುಗುಸು ಪಿಸಪಿಸ ಎಂದು ಹಬ್ಬಿದ ಮಾತು ದೇವಾಲಯದ ಪೂಜಾರಿಗಳಿಗೆ ಪ್ರಾರ್ಥನಾ ಮಂದಿರದ ಇಮಾಮರ ಕಿವಿಗೆ ಬೀಳದೇ ಇರಲಿಲ್ಲ. ಅವರಿಬ್ಬರೂ ಹೌಹಾರಿದರು. ಇಬ್ಬರೂ ಕೂಡಲೇ ಕಾರ್ಯಪ್ರವೃತ್ತರಾದರು. ಊರ ಜನರನ್ನೆಲ್ಲ ನಿಲ್ಲಿಸಿಕೊಂಡು –

''ಮೀನಿನವನ ಮಾತನ್ನು ತಲೆಗೆ ಹಾಕಿಕೊಳ್ಳಬೇಡಿ'' ಎಂದರು.

''ಉಪ್ಪಿನಕಾಯಿಯವನ ಮಾತನ್ನು ನಂಬಬೇಡಿ'' ಎಂದರು.

ಜನರ ಮನಸ್ಸಿನಲ್ಲಿ ಹೊಕ್ಕ ಭೂತವನ್ನು ಓಡಿಸುವ ಯತ್ನ ಮಾಡಿದರು. ಊರಿನ ಪರಂಪರೆಗೆ ಧಕ್ಕೆ ತರಬೇಡಿ. ಧರ್ಮ ಮನುಷ್ಯನನ್ನ ಮನುಷ್ಯನನ್ನಾಗಿ ಮಾಡಲಿಕ್ಕೆ ಇದೆ. ಧರ್ಮ ಮನುಷ್ಯನನ್ನ ಮೃಗವನ್ನಾಗಿ, ಕುರುಡನನ್ನಾಗಿ, ಕುಡುಕನನ್ನಾಗಿ, ತಲೆಕೆಟ್ಟವನನ್ನಾಗಿ ಮಾಡಬಾರದು. ಅವರಿಬ್ಬರ ಮಾತುಗಳನ್ನು ಮರೆತುಬಿಡಿ. ಅವರ ಮಾತಿಗೆ ಮತ್ತೆ ಕಿವಿಗೊಡಬೇಡಿ ಎಂದರು. ಜನ ತಲೆದೂಗಿದರು.

ಆದರೆ ಇಷ್ಟೇ ಸಾಲದೆನಿಸಿತು ಇವರಿಗೆ

ಮೂಲವನ್ನೇ ಸರಿಪಡಿಸದಿದ್ದರೆ ಈ ವಿಷದ ಗಾಳಿ ಕಾಣೆಯಾಗುವುದಿಲ್ಲ ಎನಿಸಿ ಪೂಜಾರಿಗಳು, ಇಮಾಮರು ಮೀನು ಉಪ್ಪಿನಕಾಯಿಯವನನ್ನು ತಮ್ಮಲ್ಲಿಗೆ ಕರೆಸಿಕೊಂಡರು.

''ನಿಮ್ಮನ್ನು ಊರಿನೊಳಗೆ ಬಿಟ್ಟುಕೊಂಡದ್ದು ತಪ್ಪಾಯಿತು'' ಎಂದರು ಇಮಾಮರು.

''ಹೂ ಮಾರಲು ಬಂದವರು ಊರ ತುಂಬ ಪರಿಮಳವನ್ನು ಹರಡಬೇಕಲ್ಲದೆ ದುರ್ಗಂಧವನ್ನಲ್ಲ... ನೀವು ಏನು ಮಾಡುತ್ತಿದ್ದೀರ ಗೊತ್ತೆ?'' ಎಂದು ಇಬ್ಬರನ್ನೂ ಕೇಳಿದರು.

ಅವರಿಗೆ ಮಾತನಾಡಲು ಅವಕಾಶ ಕೊಡದೆ ''ಇನ್ನು ನೀವು ನಿಮ್ಮ ವ್ಯಾಪಾರಕ್ಕೆ ಸಂಬಂಧಪಟ್ಟ ಮಾತುಗಳನ್ನಷ್ಟೇ ಆಡಬೇಕು. ಈ ಊರಿನ ಶಾಂತಿ ಸಮಾಧಾನ ನಾಶಮಾಡುವ ಮಾತುಗಳನ್ನು ಆಡುವುದಲ್ಲ....'' ಎಂದು ಎಚ್ಚರಿಸಿದರು.

''ನಾನು ಹಾಗೆ ಏನೂ ಮಾತನಾಡಿಲ್ಲವೇ...''




''ನಾನು ಹಪ್ಪಳ ಸಂಡಿಗೆ ಮಾರುವುದನ್ನು ಬಿಟ್ಟು ಬೇರೆ ಏನೂ ಮಾಡಿಲ್ಲವೇ...'' ಎಂದು ಇಬ್ಬರೂ ತುಟಿ ತೆರೆದಾಗ,

ಪೂಜಾರಿಗಳು ಅಬ್ಬರಿಸಿದರು.

''ಅಂಗೈ ಹುಣ್ಣಿಗೆ ಕನ್ನಡಿ ಬೇಡ... ನಾವು ಹೇಳಿದ ಹಾಗೆ ಮಾಡುವುದಾದರೆ ನಾಳೆಯಿಂದ ಬನ್ನಿ.. ಇಲ್ಲವೆಂದರೆ ನಿಮ್ಮ ಹಪ್ಪಳ ಮೀನು ಎರಡೂ ಈ ಊರಿಗೆ ಬೇಡ...''

* * *

ಎರಡೂ ಸೈಕಲ್‌ಗಳು ಬೇರೆ ಬೇರೆ ದಾರಿ ಹಿಡಿದು ಸಾಗಿದವು. ಮನೆ ಮನೆಗಳ ಮುಂದೆ ನಿಂತು ಅವರು ತಮ್ಮ ತಮ್ಮ ವ್ಯಾಪಾರ ಮಾಡಿದರು. ಏಕೋ ಅವತ್ತು ಅವರು ಹೆಚ್ಚು ಮಾತನಾಡಲಿಲ್ಲ. ಮೀನು, ಸಂಡಿಗೆ, ಆಚೆಗೆ ಅವರ ಮಾತು ಹೋಗಲಿಲ್ಲ. ಜನರಿಗೂ ಅಷ್ಟೇ ಬೇಕಿತ್ತು. ಜನ ಕೂಡ ಅವರನ್ನು ಬೇರೆ ಮಾತಿಗೆ ಎಳೆಯಲಿಲ್ಲ.

ಹೊತ್ತು ನೆತ್ತಿಗೆ ಏರಿದಾಗ ಎರಡೂ ಸೈಕಲ್‌ಗಳು ಊರ ನಡುವಣ ಚೌಕದ ಬಳಿ ಎದುರು ಬದುರಾದವು.

''ಏನು ಈ ನಗರದಲ್ಲಿ ನೀನೊಬ್ಬನೇ ಧಂದೆ ಮಾಡಿಕೊಂಡಿರಬೇಕೆಂದು ಇದ್ದೀಯೋ ?''

''ನೀನೂ ಅಷ್ಟೇ.. ಬೇರೆ ಯಾರೂ ಇಲ್ಲಿ ವ್ಯಾಪಾರ ಮಾಡಬಾರದು ಅನ್ನೋದು ನಿನ್ನ ಆಸೆಯೋ ?''

ಚೌಕದ ಮೂಲೆಯಲ್ಲಿ ಅವರು ಸೈಕಲ್ ಹಿಡಿದು ನಿಂತರು.

''ಮೀನು ತಿನ್ನುವವರೆಲ್ಲ ಸಂಡಿಗೆ ತಿನ್ನುವವರ ವಿರುದ್ಧ ದಂಗೆ ಏಳಬೇಕು... ಅವರ ಮನೆಗಳನ್ನು ಸುಡಬೇಕು... ಅವರೆಲ್ಲ ಊರುಬಿಟ್ಟು ಹೋಗಬೇಕು... ಅಂದರೆ ನಾನು ಈ ಕಡೆ ಸಂಡಿಗೆ ಉಪ್ಪಿನ ಕಾಯಿ ಮಾರಲು ಬರಬಾರದು ಇದೇ ಅಲ್ಲವೇ ನಿನ್ನ ಉಪಾಯ ?''

''ನಿನ್ನದೂ ಅಷ್ಟೇ ಅಲ್ಲವೇ... ಮೀನು ತಿನ್ನುವವರೆಲ್ಲ ಮನೆಮಠ ಕಳೆದುಕೊಂಡು ಪ್ರಾಣ ಕಳೆದುಕೊಂಡು ಊರು ಬಿಡಬೇಕು.. ಹಪ್ಪಳ ತಿನ್ನುವವರೆಲ್ಲ ಇಲ್ಲಿರಬೇಕು.. ನಾನು ನನ್ನ ವ್ಯಾಪಾರಕ್ಕೆ ಈ ಕಡೆ ಬರಬಾರದು ಅಂದಲ್ಲವೆ ನೀನು ಬಯಸಿದ್ದು...''

ಹೀಗೆ ಸಣ್ಣದಾಗಿ ಮೀನು ಮಾರುವವನ ನಡುವೆ, ಹಪ್ಪಳದವನ ನಡುವೆ ಜಗಳ ಆರಂಭವಾಯಿತು.

ಮೊದಲು ಮಾತು.

ನಂತರ ಕೈ ಕೈ ಹಚ್ಚಿದರು.

ಅವನು ತಕ್ಕಡಿ ತೂಕದ ಬೊಟ್ಟು ಹಿಡಿದ.

ಈತ ಬಾಟಲಿ ಜಾಡಿಗಳನ್ನು ಹಿಡಿದ.

ವೃತ್ತದಲ್ಲಿ ತಿರುಗಾಡುತ್ತಿದ್ದ ಜನ ನಿಂತು ನೋಡತೊಡಗಿದರು.

ಜಗಳಕ್ಕೆ ನಿಂತವರು ದೇವರನ್ನು ನಡುವೆ ತಂದರು.

ಧರ್ಮವನ್ನು ತಂದರು.

ಪದ್ಧತಿ, ಆಚರಣೆ, ಸಂಪ್ರದಾಯ ಎಲ್ಲವೂ ಬಂದಿತು.

ಊರ ಜನ ಬೆರಗಾಗಿ ನಿಂತರು.

ದೇವರು ಧರ್ಮವನ್ನು ಹಿಡಿದು, ಮುಂದೆ ಮಾಡಿಕೊಂಡು ಈರ್ವರು ಜಗಳವಾಡುತ್ತಿರುವುದನ್ನು ಅವರು ಅದೇ ಮೊದಲು ನೋಡುತ್ತಲಿದ್ದರು.

ಅಚ್ಚರಿ ಎಂದರೆ ಜಗಳ ಆರಂಭವಾಗುವಾಗ ಅವರೀರ್ವರೂ ಮನುಷ್ಯರಾಗಿದ್ದರು. ಅವರ ಕಣ್ಣು, ಕಿವಿ, ಬಾಯಿ, ಕೈಕಾಲುಗಳೆಲ್ಲ ಎಲ್ಲರಂತಿದ್ದವು. ಕ್ರಮೇಣ ಅವರು ಮನುಷ್ಯನ ಲಕ್ಷಣ ಕಳೆದುಕೊಂಡರು. ಅವರಿಗೆ ಕೋರೆ ದಾಡೆಗಳು ಬೆಳೆದವು, ನೆತ್ತಿಯ ಮೇಲೆ ಕೋಡು ಮೂಡಿತು. ಉಗುರುಗಳು ಮೊನಚಾದವು. ಧ್ವನಿ ಬೇರೆಯಾಯಿತು.

''ಅಯ್ಯೋ ರಕ್ಕಸರು, ರಕ್ಕಸರು'' ಎಂದು ಜನ ಬೆದರಿದರು.

ಮುಂದಿನ ಕ್ಷಣದಲ್ಲಿ ಅಲ್ಲಿ ರಕ್ತ ಹರಿಯಿತು. ಮಾಂಸ ಕಿತ್ತಾಡಿ ಬಿಸುಡಲಾಯಿತು.

ಜನ ಭಯಭೀತರಾಗಿ ನೋಡುತ್ತಿರಲು ಅಲ್ಲಿ ಎರಡು ವಿಕಾರ ಕಲ್ಲುಗಳು ಕಾಣಿಸಿಕೊಂಡವು. ಆಕಾರವಿಲ್ಲದ ಆದರೆ, ವಕ್ರವಕ್ರವಾಗಿದ್ದ ಮನುಷ್ಯರೆಂದೇ ಗುರುತಿಸಲಾಗದ ಎರಡು ಕಲ್ಲುಗಳು. ಬಹಳ ದಿನಗಳವರೆಗೆ ಎರಡು ಸೈಕಲ್ಲುಗಳು ಅಲ್ಲಿದ್ದವು. ಮೀನುಗಳನ್ನು ಕಾಗೆಗಳೋ, ನಾಯಿಗಳೋ ಬಂದು ತಿಂದು ಎಳೆದಾಡಿಹೋದವು. ಉಪ್ಪಿನಕಾಯಿ ಭರಣಗಳು, ಬಾಟಲಿಗಳು ಒಣಗಿ ನಾಲ್ಕು ದಿನ ಅಲ್ಲೆಲ್ಲ ಕೆಟ್ಟ ವಾಸನೆಯೂ ಇತ್ತು. ಪುರಸಭೆಯ ಲಾರಿ ಒಂದು ದಿನ ಬಂದು ಸೈಕಲ್ಲುಗಳನ್ನು ಉಳಿದ ಪೆಟ್ಟಿಗೆ ಬಾಟಲಿಗಳನ್ನು ತುಂಬಿಕೊಂಡು ಹೋಯಿತು. ಆ ಕಲ್ಲುಗಳು ಅಲ್ಲಿಯೇ ಉಳಿದವು.

''ಇವೇ ನೋಡಿ ಕಲ್ಲುಗಳು'' ಎಂದರು ಇದ್ರೂಸ ಸಾಹೇಬರು ನನ್ನನ್ನು ಆ ವೃತ್ತದ ಮೂಲೆಗೆ ಕರೆತಂದು ತೋರಿಸಿ.

ನಾನು ನೋಡಿದೆ.

ಒರಟೊರಟಾದ ಕರಿಕಲ್ಲಿನ ಎರಡು ಆಕೃತಿಗಳು. ತಲೆ ಕಣ್ಣು, ಕಿವಿ, ಬಾಯಿ, ಕುತ್ತಿಗೆ, ತೋಳು, ಸೊಂಟ ಏನೊಂದೂ ಸ್ಪಷ್ಟವಾಗಿರಲಿಲ್ಲ. ಬಹಳ ಕಷ್ಟಪಟ್ಟರೆ ಅವುಗಳಲ್ಲಿ ಒಂದು ಮನುಷ್ಯಾಕೃತಿಯನ್ನು ಕಾಣ ಬಹುದಿತ್ತೇನೋ. ಆದರೆ ಆ ಊರಿನವರಿಗೆ ಇದೂ ಕೂಡ ಬೇಕಿರಲಿಲ್ಲವೇನೋ. ಇದ್ರೂಸ ಸಾಹೇಬರು ಹೇಳಿದ್ದು ಕಿವಿಯಲ್ಲಿ ಪ್ರತಿಧ್ವನಿಸಿತು –

''ಇವೇ ನೋಡಿ ಕಲ್ಲುಗಳು....''

ನಾನು ನೋಡುತ್ತ ನಿಂತೆ.

ಕಾಗೆಗಳು ಈ ಕಲ್ಲುಗಳನ್ನು ಸಾರ್ಥಕವಾಗಿ ಬಳಸಿಕೊಂಡಿದ್ದವು.

ನಾ. ಡಿಸೋಜ
೧೫/೧೫, ಪಿನೇ ಕ್ರಾಸ್, ನೆಹರೂನಗರ, ಸಾಗರ-೫೭೭ ೪೦೧

ಇಂಗ್ಲಿಷ್ ಮೂಲ : **ಪರ್ಲ್ ಎಸ್. ಬಕ್**



ಅವರೆಲ್ಲ ಗಂಟುಗದಡಿ ಕಟ್ಟಿಕೊಂಡು ಗುಳೇ ಹೊರಟಿದ್ದರು. ಅವರು ನಗರಕ್ಕೆ ಹೊಸಬರು. ಆ ನಗರ ಅವರ ಹಳ್ಳಿಗಾಡಿನಿಂದ ಬಹಳ ದೂರದಲ್ಲೇನಿರಲಿಲ್ಲ – ಕೇವಲ ಕೆಲವು ನೂರು ಮೈಲಿಗಳು ಅಷ್ಟೆ. ಅವರು ಹಳ್ಳಿಗಾಡಿನ ರಸ್ತೆ, ಹೊಲ, ಗದ್ದೆ, ಕೆರೆಕುಂಟೆಗಳಿಗೆ ಹೊಂದಿಕೊಂಡವರಾಗಿದ್ದರೇ ಹೊರತು ನಗರ ಪರಿಸರಕ್ಕಲ್ಲ. ನಗರದ ರಸ್ತೆ, ಅಂಗಡಿ ಮುಂಗಟ್ಟು ಅಲ್ಲಿನ ರೀತಿನೀತಿಗಳೆಲ್ಲ ಅವರಿಗೆ ತೀರ ಹೊಸದು. ಅಲ್ಲಿನ ರಸ್ತೆಗಳು ಜನವಾಹನಗಳಿಂದ ತುಂಬಿ ಗಿಜಿಗುಡುತ್ತಿದ್ದವು. ಅವರು ಎಂದೂ ಅಂಥ ವಾಹನ ಶಕಟಗಳನ್ನು ಕಂಡವರೂ ಅಲ್ಲ – ಕೇಳಿದವರೂ ಅಲ್ಲ. ಕನಸಿನಲ್ಲಿಯೊ ಎಂಬಂತೆ ನಡೆಯುತ್ತಿದ್ದ ಅವರು ಯಾವುದರತ್ತಲೂ ಲಕ್ಷ್ಯವಿಟ್ಟು ನೋಡುವ ಸ್ಥಿತಿಯಲ್ಲಿರಲಿಲ್ಲ. ಯಾರನ್ನೂ ಯಾವುದನ್ನೂ ಅವರು ಗಮನವಿಟ್ಟು ನೋಡದೇ ಹೋದುದರಿಂದ ಅಲ್ಲಿರುವವರು ಯಾರೂ ಸಹ ಅವರತ್ತ ನೋಡುತ್ತಿರಲಿಲ್ಲ.

ಇರುವೆಗಳಂತೆ ಸಾಗಿದ್ದ ಈ ಮೌನ ಜನರ ಸಾಲಿನ ಕೊನೆಯಲ್ಲಿ ಒಬ್ಬ ಗಿಡ್ಡ ಮುದುಕ ನಡೆದಿದ್ದ. ಅವನು ತುಂಬ ಬಲಹೀನನಾಗಿದ್ದು ತಲೆಯ ಮೇಲೆ ಎರಡು ಬುಟ್ಟಿಗಳಲ್ಲಿ ತನ್ನ ಸಾಮಾನುಗಳನ್ನು ಹೊತ್ತಿದ್ದ. ಒಂದರಲ್ಲಿ ಒಂದು ಕಬ್ಬಿಣದ ಕಡಾಯಿ, ಮತ್ತೊಂದರಲ್ಲಿ ಅಷ್ಟೇನೂ ಹೊಲಸಾಗಿಲ್ಲದ ತುಂಡು ಬಟ್ಟೆಗಳಿಂದ ಹೊಲೆಯಲ್ಪಟ್ಟ ಒಂದು ಕೌದಿ ಇದ್ದವು. ಹೊರೆ ಅಷ್ಟೇನೂ ಭಾರದ್ದಾಗಿಲ್ಲದಿದ್ದರೂ ಆ ಮುದುಕನ ಯೋಗ್ಯತೆಗೆ ಹೆಚ್ಚೇ ಎನಿಸಿತ್ತು. ಸಾಮಾನ್ಯವಾಗಿ ಅವನು ತನ್ನ ವಯಸ್ಸಿಗೆ ಮೀರಿ ದುಡಿಯುತ್ತಿದ್ದರೂ ಇತ್ತೀಚಿನ ವರ್ಷಗಳಲ್ಲಿ ಅವನು ಅಂಥ ಕಠಿಣ ಪರಿಶ್ರಮಕ್ಕೆ ಬಹುಶಃ ಒಗ್ಗಿಕೊಳ್ಳಲಾಗುತ್ತಿರಲಿಲ್ಲ ಎಂಬುದು ಅವನ ನಡಿಗೆಯಿಂದ ಸ್ಪಷ್ಟವಾಗಿತ್ತು. ಅವನು ಜೋಲಿ ಹೊಡೆಯುತ್ತ ನಡೆಯುವಾಗ ಅವನ ಮೂಗಿನ ಹೊಳ್ಳೆಗಳಿಂದ ತಿದಿಯೊತ್ತಿದಂತೆ ಬರುತ್ತಿದ್ದ ಉಸಿರು ಸಿಳ್ಳೆ ಹಾಕಿದಂತೆ ಕೇಳಿ ಬರುತ್ತಿತ್ತು. ಮುಂದೆ ಸಾಗಿದ್ದ ತನ್ನ ಜನರನ್ನೇ ಕಣ್ಣು ಕೀಲಿಸಿ ನೋಡುತ್ತಿದ್ದುದರಿಂದ ಅವನ ಕಣ್ಣುಗಳು ತುಂಬ ನೋಯುತ್ತಿದ್ದವು. ಹಾಗೆ ನೋಡುತ್ತ ನಡೆಯದಿದ್ದರೆ ತಾನು ಗುಂಪಿನಿಂದ ಹಿಂದೆ ಉಳಿದೇನು ಎಂಬ ಭೀತಿ ಅವನನ್ನು ಕಾಡುತ್ತಿತ್ತು. ಹಾಗೊಮ್ಮೆ ತಾನು ಪ್ರತ್ಯೇಕವಾದರೆ ಅಲ್ಲಿ ತನ್ನನ್ನು ಕೇಳುವವರಾರು ಎಂಬ ಯೋಚನೆ ಅವನನ್ನು ನೇರ ನಡೆಸಿತು.

ಇದ್ದಕ್ಕಿದ್ದಂತೆ ಮುದುಕನಿಗೆ ಮುಂದೆ ಚಲಿಸಲಾಗಲಿಲ್ಲ. ತನ್ನ ತಲೆಯ ಮೇಲಿನ ಹೊರೆಯನ್ನು ಮೆಲ್ಲನೆ ಕೆಳಗಿಳಿಸಿ ತನ್ನೆರಡು ಮೊಳಕಾಲುಗಳ ನಡುವೆ ತನ್ನ ತಲೆಯಿರಿಸಿ, ಕಣ್ಮುಚ್ಚಿ ಏದುಸಿರುಬಿಡುತ್ತ ಹಾಗೆಯೇ ನೆಲ ಹಿಡಿದು ಕುಳಿತುಬಿಟ್ಟ. ತಿನ್ನಲೇನೂ ಇಲ್ಲದೆ ಉಪವಾಸವಿದ್ದುದರಿಂದ ರಕ್ತ ನುಗ್ಗಿ ಬಂದು ಕೆನ್ನೆಗಳಲ್ಲಿ ಕಂದಿದ ಕಪ್ಪು ಕಲೆಗಳು ಕಾಣಿಸಿ ಕೊಂಡವು. ಆಗ ಅಲ್ಲಿಗೆ ಶ್ಯಾವಿಗೆ ಗಂಜಿ ಮಾರುವವನೊಬ್ಬ ಬಂದ. ಅವನು ತನ್ನ ಮಡಕೆ ತಂದಿರಿಸಿಕೊಂಡು, ''ಯಾರಿಗೆ ಗಂಜಿ, ಬಿಸಿ ಬಿಸಿ ಶ್ಯಾವಿಗೆ ಗಂಜಿ...'' ಅಂತ ಕೂಗ ತೊಡಗಿದ. ಆಗ ದಾರಿಹೋಕನೊಬ್ಬ ಅಲ್ಲಿ ಬಂದು ನಿಂತು ವ್ಯಾಪಾರಿಯನ್ನೇ ನೋಡುತ್ತ ಕೆಳದನಿಯಲ್ಲಿ ಇಂತೆಂದ – ''ನಾನು ನನ್ನ ಜನಕ್ಕೆ ಬರೀ ಶ್ಯಾವಿಗೆ ಗಂಜಿಯನ್ನು ಉಣಬಡಿಸು ವುದಾದರೆ ಈ ದಿನ ಅದಕ್ಕಿಂತ ಹೆಚ್ಚಿಗೆ ಏನನ್ನೂ ಕೊಡಲಾರೆ, ಆದರೆ ಇಲ್ಲಿ ಈ ಮುದುಕನಿದ್ದಾನೆ. ಸರಿ, ನಾನು ಈ ದಿನ ದುಡಿದು ಗಳಿಸಿದ ಈ ಬೆಳ್ಳಿ ಕಾಸನ್ನು ಅವನಿಗೆ ಕೊಡುತ್ತೇನೆ. ಇಂದು ಅದೇ ನನ್ನ ತಂದೆ ಬದುಕಿದ್ದಿದ್ದರೆ ಇದೇ ಗಳಿಕೆಯನ್ನು ನಾನು ಅವನಿಗೆ ಕೊಟ್ಟುಬಿಡುತ್ತಿದ್ದೆ...''

ಅವನು ತನ್ನ ಜೇಬಿನಲ್ಲೆಲ್ಲ ತಡಕಾಡಿ ಒಂದು ಬೆಳ್ಳಿ ನಾಣ್ಯವನ್ನು ಹೊರತೆಗೆದ. ನಂತರ ಒಂದು ಕ್ಷಣ ಹಿಂದೆಮುಂದೆ ಯೋಚಿಸಿ ಅದಕ್ಕೆ ಒಂದು ತಾಮ್ರದ ಪೆನ್ನಿಯನ್ನು ಸೇರಿಸಿ ದುಃಖ - ಸಂತಸ ಮಿಶ್ರಿತ ದನಿಯಲ್ಲಿ ಇಂತೆಂದ : ''ನೀನು ಈ ದಿನ ಬಿಸಿಯಾದ ಶ್ಯಾವಿಗೆ ಗಂಜಿ ಉಣ್ಣುವುದನ್ನು ನಾನು ನೋಡಬೇಕು !''

ಮುದುಕ ಮೆಲ್ಲನೆ ತನ್ನ ಕಣ್ಣುಗಳನ್ನು ಮೇಲೆತ್ತಿ ನೋಡಿದ, ಬೆಳ್ಳಿ ನಾಣ್ಯವನ್ನು ಕಂಡೊಡನೆ ಅವನು ಕೈ ಚಾಚಲಿಲ್ಲ. ಅವನು ನುಡಿದ, ''ಸ್ವಾಮಿ ನಾನೇನು ನಿಮ್ಮನ್ನು ಬೇಡಲಿಲ್ಲವಲ್ಲ! ನಮಗೂ ನಮ್ಮೂರಾಗೆ ಒಳ್ಳೆ ಭೂಮಿ ಕಾಣಿ ಐತೆ. ಅಷ್ಟು ಒಳ್ಳೆ ಜಮೀನು ಇಟ್ಕೊಂಡು ನಾವು ಈ ಪಾಟಿ ಹಿಂದೆಂದೂ ಉಪವಾಸ ಬಿದ್ದಿದ್ದಿಲ್ಲ. ಆದ್ರೆ ಈ ವರ್ಸ ನದಿಯಾಗೆ ನೆರೆ ಬಂತು. ಒಳ್ಳೇ ಜಮೀನಿದ್ದೋರೂ ಅಂತಾ ಸಮಯದಾಗೆ ಉಪವಾಸ ಬೀಳೋ ಅಂಗಾಯ್ತದೆ. ನೋಡಿ ಸ್ವಾಮಿ ನಮ್ಮಲ್ಲಿ ಬೀಜ ಸಹ ಉಳಿದಿಲ್ಲ. ಬಿತ್ತನೇಗೆಂತ ಇಟ್ಕೊಂಡ ಬೀಜಾನೂ ತಿಂದ್ಬಿಟ್ಟದ್ದೀವಿ. ನಾನು ಅವರಿಗೆ ಹೇಳಿದೆ ಬೀಜಾನ ತಿನ್ನೊಹಾಗಿಲ್ಲಾಂತ. ಆದರೆ ಅವರು ಯುವಕರೂ, ತುಂಬ ಹಸಿದಿದ್ದೋರೂ ಆಗಿದ್ದರು. ಹಾಗಾಗಿ ಬೀಜಾನೂ ಬಿಡದೆ ತಿಂದುಬಿಟ್ಟರು.''

''ಇರ್ಲಿ ತಗೊ'' ಅಂತ ನುಡಿದು ಆ ಮನುಷ್ಯ ತನ್ನ ಕೈಲಿದ್ದ ಹಣವನ್ನು ಮುದುಕನ ಅಂಗಿಯ ಮೇಲೆ ಎಸೆದು ಅವನ ಕತೆಗೆ ಮರುಗುತ್ತ ನಿಟ್ಟುಸಿರುಗರೆದು ತನ್ನ ದಾರಿ ಹಿಡಿದು ಹೊರಟುಹೋದ.

ಈಗ ಊರಿನಲ್ಲಿ ಎಲ್ಲಿ ನೋಡಿದರೂ ನಿರಾಶ್ರಿತರೇ. ಅವರಿಗೆ ಹೇಗೊ ಊಟ-ಬಟ್ಟೆ ಒದಗಿಸಿ ಊರ ಹೊರಗೆ ದೊಡ್ಡ ಕ್ಯಾಂಪುಗಳಲ್ಲಿ ಆಶ್ರಯವನ್ನು ಕೊಡಲಾಗಿತ್ತು. ದಿನದ ಯಾವುದೇ ಗಳಿಗೆಯಲ್ಲಿ ನೋಡಿದರೂ ಹರಕಲು ಬಟ್ಟೆಯ ಗಂಡಸರೂ ಹೆಂಗಸರೂ ಮಕ್ಕಳೂ ಸಾಲುಸಾಲಾಗಿ ಕ್ಯಾಂಪುಗಳತ್ತ ಸಾಗುತ್ತಿರುವುದು ಕಂಡುಬರುತ್ತಿತ್ತು. ''ಓ ದೇವರೇ ! ಇದಕ್ಕೆ ಕೊನೆ ಮೊದಲೆಂಬುದೇ ಇಲ್ಲವೇ ! ಇವರು ಹೀಗೇ ಬರುತ್ತಿದ್ದರೆ ಇವರಿಗೆ ಅಲ್ಪಸ್ವಲ್ಪ ಅಂತ ತಿನ್ನಲಿಕ್ಕಿದ್ದರೂ ಸಾಕು ನಾವು ಉಪವಾಸ ಬಿದ್ದು ಸಾಯಬೇಕಾಗುತ್ತೆ..'' ಎಂದು ನಾನಾ ರೀತಿಯಲ್ಲಿ ನಗರವಾಸಿಗಳು ಗೊಣಗಾಡತೊಡಗಿದರು.

ಭಿಕ್ಷುಕರು ಒಂದೇ ಸಮನೆ ಅಂಗಡಿಯ ಮುಂದೆ ಬಂದು ಬೇಡುತ್ತಿದ್ದುದನ್ನು ಕಂಡ ಸಣ್ಣಪುಟ್ಟ ಅಂಗಡಿಕಾರರು ಒರಟಾಗಿ ರೇಗಾಡತೊಡಗಿದರು. ಚೆನ್ನಾಗಿ ಬೈದು ಆಚೆಗಟ್ಟಿದರು. ಆದರೂ ಅವರು ಬರುತ್ತಲೇ ಇದ್ದರು. ಕೆಲವರಂತೂ ರಿಕ್ಷಾ ತುಳಿದು ಹೊಟ್ಟೆ ಹೊರೆಯತೊಡಗಿದರು. ನಗರವಾಸಿಗಳು ಈ ರಿಕ್ಷಾ ಚಾಲಕರಿಗೆ ಸಣ್ಣಪುಟ್ಟ ಬಾಡಿಗೆ ಕೊಡುವಲ್ಲೂ ಕರುಣೆ ತೋರುತ್ತಿರಲಿಲ್ಲ. ಮಾಮೂಲಿ ರಿಕ್ಷಾ ಚಾಲಕರೂ ಈ ನಿರಾಶ್ರಿತರನ್ನು ಶಪಿಸತೊಡಗಿದರು. ಕಾಸೆರಡು ಕಾಸು ಇದ್ದವರೂ ರಿಕ್ಷಾದಲ್ಲಿ ಸುಖವಾಗಿ

ಪ್ರಯಾಣಿಸಬಹುದಾಗಿತ್ತು, ಏಕೆಂದರೆ ಕೊಟ್ಟಷ್ಟಕ್ಕೇ ಅವರನ್ನು ಕರೆದೊಯ್ಯುತ್ತಿದ್ದರು ಈ ನಿರಾಶ್ರಿತ ರಿಕ್ಷಾ ಚಾಲಕರು ! ಅಂತೂ ಇಂತೂ ಮೊದಲಿನಿಂದಲೂ ಕೂಲಿ ಮಾಡಿ ಬದುಕುತ್ತಿದ್ದ ಸ್ಥಳೀಯರಿಗೆ ಕಷ್ಟವಾಯಿತು. ಜನರು ಇವರನ್ನು ಬೈದಾಡಿಕೊಳ್ಳತೊಡಗಿದರು. ನಗರದ ತುಂಬೆಲ್ಲ ನಿರಾಶ್ರಿತರೇ – ಪ್ರತಿ ಮನೆಯ ಬಾಗಿಲಲ್ಲಿ ಭಿಕ್ಷೆ ಬೇಡುವವರು, ಯಾವುದೇ ಬಗೆಯ ಕೂಲಿನಾಲಿ ಮಾಡುವವರು, ನುರಿತ ನುರಿಯದ ಕೆಲಸ ಕಾರ್ಯಗಳಲ್ಲಿ ಕೈಹಾಕುವವರು.... ಹೀಗೆ ಹೊಟ್ಟೆಪಾಡಿಗೆ ಏನೇನೊ ಮಾಡುವವರು. ಈ ದಿನಗಳಲ್ಲಿ ಎಷ್ಟೋ ಜನ ಉಣ್ಣಲು ಅನ್ನವಿಲ್ಲದೆ, ತೊಡಲು ಬಟ್ಟೆ ಇಲ್ಲದೆ ರಸ್ತೆಗಳಲ್ಲಿ ಕಡುಚಳಿಗೆ ಸೆಟೆದು ಸತ್ತರು. ಆದರೇನು ನಿರಾಶ್ರಿತರು ನುಸುಳಿ ಬರುತ್ತಲೇ ಇದ್ದರು ತಂಡತಂಡವಾಗಿ ಗುಂಪು ಗುಂಪುಗಳಾಗಿ. ಹುತ್ತೊಡೆದ ಇರುವೆಗಳಂತೆ ಅದೆಲ್ಲಿಂದ ಅಷ್ಟೊಂದು ಜನ ಬರುತ್ತಿದ್ದರೋ ನಗರವಾಸಿಗಳಿಗಂತು ಅಚ್ಚರಿಯೋ ಅಚ್ಚರಿ !

ಆದರೆ ಅವರು ಸಾಮಾನ್ಯ ಜನರಲ್ಲ. ಈ ಗಂಡಸರು, ಹೆಂಗಸರು ಯಾವುದೇ ದೇಶ ಅಭಿಮಾನಪಡುವಂಥವರು. ಇವರೆಲ್ಲ ಒಂದೇ ಪ್ರಾಂತ್ಯದಿಂದ ಬಂದವರಂತೆ ತೋರುತ್ತಿದ್ದರು. ಅವರುಟ್ಟ ದಿರಿಸು ಅದನ್ನು ಹೇಳುತ್ತಿತ್ತು. ಗಂಡಸರೂ ಹೆಂಗಸರೂ ಎತ್ತರದ ನಿಲುವುಳ್ಳವರೂ ದೃಢಕಾಯರೂ ಆಗಿದ್ದರು. ಆ ಗುಂಪಿನಲ್ಲಿ ಕೆಲವು ಬಾಲಕರಿದ್ದರು. ಕೆಲವು ಪುಟ್ಟ ಮಕ್ಕಳು ತಮ್ಮ ತಂದೆಯರು ಭುಜಗಳ ಮೇಲೆ ಹೊತ್ತ ಬಡಿಗೆಯಿಂದ ನೇತಾಡುತ್ತಿದ್ದ ಬಿದಿರು ಬುಟ್ಟಿಗಳಲ್ಲಿ ಕುಳಿತು ಸಾಗಿದ್ದರು. ಆದರೆ ಅಲ್ಲಿ ಎಳೆಯ ಹುಡುಗಿಯರಿರಲಿಲ್ಲ. ಅವರು ಹೊರುತ್ತಿದ್ದ ಹೊರೆಯಲ್ಲಿ ಸಾಮಾನ್ಯವಾಗಿ ಹಾಸಿಗೆ ಸುರುಳಿ, ದಪ್ಪನೆ ಕೌದಿ ಹಾಗೂ ಆಹಾರ ಬೇಯಿಸುವ ಕಬ್ಬಿಣದ ಕಡಾಯಿ ಇರುತ್ತಿದ್ದವು. ಈ ಕಡಾಯಿಗಳು ಹಳ್ಳಿಯ ತಮ್ಮ ಮನೆಗಳ ಮಣ್ಣಿನ ಒಲೆಗಳಿಂದ ತಂದವುಗಳಾಗಿದ್ದವು ಎಂದು ಯಾವುದೇ ಅನುಮಾನವಿಲ್ಲದೆ ಹೇಳಬಹುದಾಗಿತ್ತು. ಇವು ಇನ್ನು ತಡಮಾಡದೇ ಹಳ್ಳಿಯ ತಮ್ಮ ನೆಲೆಗಳನ್ನು ಖಾಲಿ ಮಾಡಿ ಹೊರಡಲೇಬೇಕು ಎಂಬ ಸಮಯದಲ್ಲಿ ತಂದವುಗಳು. ಆದರೆ ಯಾವುದೇ ಬುಟ್ಟಿಯಲ್ಲಿ ಅನ್ನಾಹಾರಗಳಿರಲಿಲ್ಲ, ಕಡಾಯಿಯಲ್ಲಿ ಯಾವುದೇ ಆಹಾರ ಬೇಯಿಸಿದ ಗುರುತೂ ಇರಲಿಲ್ಲ.

ಈ ಅನ್ನದ ಕೊರತೆ ಅವರ ಮುಖಗಳನ್ನು ಬಹಳ ಹತ್ತಿರದಿಂದ ನೋಡಿದವರಿಗೆ ಮಾತ್ರ ಗೊತ್ತಾಗುತ್ತಿತ್ತು. ದೂರದಿಂದ ಅವರ ಮುಖಗಳು ಸಾಕಷ್ಟು ಸರಿಯಾಗಿ ಕಂಡರೂ ಹತ್ತಿರ ಹೋಗಿ ನೋಡಿದಾಗ ಅನ್ನ ಕಾಣದವರ ಮುಖಗಳೆಂಬುದು ಸ್ಪಷ್ಟವಾಗುತ್ತಿತ್ತು. ಅವರು ತಾವು ಅಲೆದಾಡುತ್ತಿದ್ದ ಹೊಸ ನಗರದ ಬೀದಿಗಳಲ್ಲಿ ಅಪೂರ್ವವಾದುದೇನನ್ನೂ ಕಂಡಿರಲಿಲ್ಲ. ಏಕೆಂದರೆ ಅವರು ಸಾವಿಗೆ ಸನಿಹದವರಾಗಿದ್ದು ಏನನ್ನೂ ಕಾಣದವರಾಗಿದ್ದರು. ಯಾವುದೇ ಹೊಸನೋಟ ಅವರಲ್ಲಿ ಕುತೂಹಲವನ್ನು ಕೆರಳಿಸಿರಲಿಲ್ಲ. ಈ ಗಂಡಸರು, ಹೆಂಗಸರು ಹಸಿವು ತಮ್ಮನ್ನು ಈ ಎಡೆಗೆ ದಬ್ಬಿ ತರುವವರೆಗೆ ತಮ್ಮ ಹುಟ್ಟೂರಿನ ಜಮೀನುಗಳನ್ನು ಬಿಟ್ಟು ಕದಲಿದವರಲ್ಲ. ಹೀಗೆ ಅವರು ಏನನ್ನೂ ನೋಡದೆ ಮಾತು ಸತ್ತ ಪರಕೀಯರಾಗಿ ಪರದೇಶಿಗಳಾಗಿ ಅಲೆಯುತ್ತಿದ್ದರು.

**ಪರ್ಲ್ ಎಸ್. ಬಕ್ – ಒಂದು ಪರಿಚಯ**

*''ಚೀನಾ ದೇಶದ ರೈತರ ಬದುಕಿನ ಮನಕಲಕುವ ಜೀವನ ಚಿತ್ರಣಕ್ಕಾಗಿ ಹಾಗೂ ಇನ್ನಿತರ ಜೀವನ ಕತೆಗಳ ಶ್ರೇಷ್ಠ ಕೃತಿಗಳಿಗಾಗಿ'' ಎಂದು ಪರಿಗಣಿಸಿ ಇವರ ಜಗತ್ಪ್ರಸಿದ್ಧ ಕಾದಂಬರಿ 'ಗುಡ್ ಅರ್ತ್'ಗೆ ಸಾಹಿತ್ಯಕ್ಕೆ ನೀಡುವ ನೊಬೆಲ್ ಪ್ರಶಸ್ತಿಯನ್ನು ೧೯೩೮ರಲ್ಲಿ ಪ್ರಕಟಿಸಿತು. ಹೀಗೆ ರೈತರ ಬದುಕಿಗೆ ಕನ್ನಡಿಯಾದ ಪರ್ಲ್ ಎಸ್. ಬಕ್ ಪೂರ್ವ ಕಂಡ ಅಪೂರ್ವ ಕತೆಗಾರ್ತಿ ಹಾಗೂ ಕಾದಂಬರಿಗಾರ್ತಿ. ಆಕೆಯ ಪ್ರಸಿದ್ಧ ಕತೆಗಳೆಂದರೆ – 'ದಿ ಎನಿಮಿ', 'ಹಾರ್ಟ್ಸ್ ಕಮ್ ಹೋಮ್' ಹಾಗೂ 'ಮದರ್ ಅಂಡ್ ಸನ್ಸ್.'*

*ಪರ್ಲ್ ಎಸ್. ಬಕ್ ಹುಟ್ಟಿದ್ದು ಜೂನ್ ೨೬, ೧೮೯೨ರಂದು ಅಮೆರಿಕಾದ ಹಿಲ್ಸ್ ಬರೋದಲ್ಲಿ. ಚೀನಾದಲ್ಲಿ ಬಾಲ್ಯ ಜೀವನ. ಅಲ್ಲಿ ಆಕೆಯ ತಂದೆ ತಾಯಿಗಳು ಕ್ರೈಸ್ತ ಮಿಶನರಿಗಳಾಗಿದ್ದರು. ಪ್ರಾಥಮಿಕ ಶಿಕ್ಷಣ ಷಾಂಘೈನಲ್ಲಿ ಜರುಗಿತು. ಮುಂದೆ ಪದವಿ ಗಳಿಸಿದ್ದು ೧೯೧೪ರಲ್ಲಿ ವರ್ಜೀನಿಯಾದ ಲಿನ್ಚ್‌ಬರ್ಗ್‌ನ ರ್‍ಯಾಂಡಾಲ್ಫ್ ಮೆಕಾನ್ ವುಮನ್ಸ್ ಕಾಲೇಜಿನಿಂದ. ನಂತರ ಚೀನಾಕ್ಕೆ ಮರಳಿ ಬಂದು ನ್ಯಾನ್‌ಕಿಂಗ್ ವಿಶ್ವವಿದ್ಯಾನಿಲಯದಲ್ಲಿ ಅಧ್ಯಾಪಕಿ ಯಾದಳು. ಚೀನೀಯರ ಬದುಕನ್ನು ಕುರಿತ ಕತೆ ಲೇಖನಗಳು ಮೊದಲು ಅಮೆರಿಕನ್ ಪತ್ರಿಕೆಗಳಲ್ಲಿ ೧೯೨೩ರಲ್ಲಿ ಪ್ರಕಟವಾದವು. ೧೯೩೧ರಲ್ಲಿ 'ಗುಡ್ ಅರ್ತ್' ಕಾದಂಬರಿ ಪ್ರಕಟನೆಯೊಂದಿಗೆ ಕೀರ್ತಿ ಬಂತು.*

ಈಗ ಬೀದಿ ಪಕ್ಕದ ಶಾವಿಗೆ ಗಂಜಿ ಮಾರುವವನು ಗಂಜಿ ತಯಾರಿಸಿ ಮುದುಕನನ್ನು ಕರೆದ, ''ತಾತಾ ಎಷ್ಟು ಬಟ್ಲು ಗಂಜಿ ಕೊಡ್ಲಿ.....''

ಬಿಸಿಲಿನ ಝಳಕ್ಕೆ ಕಣ್ಮುಚ್ಚಿ ತೂಕಡಿಸುತ್ತಿದ್ದ ಅಜ್ಜ ಅಲುಗಾಡಿದ. ನಂತರ ಲಗುಬಗೆಯಿಂದ ತನ್ನ ಮೇಲಂಗಿಯ ಪದರುಗಳಲ್ಲಿ ತಡಕಾಡಿ ನೋಡಿದ. ಅಲ್ಲಿ ಎರಡು ನಾಣ್ಯಗಳು – ಒಂದು ತಾಮ್ರದ ಮತ್ತೊಂದು ಬೆಳ್ಳಿಯ ನಾಣ್ಯ ಕಂಡಾಗ, ''ಗಂಜಿ ಒಂದು ಸಣ್ಣ ಬಟ್ಲು ಸಾಕು'' ಎಂದ.

''ನಿನಗೆ ಒಂದು ಸಣ್ಣ ಬಟ್ಟಲು ಗಂಜಿ ಸಾಕೆ ?'' ಅಚ್ಚರಿಯಿಂದ ಕೇಳಿದ ವ್ಯಾಪಾರಿ, ''ಅದು ನನಗಲ್ಲ'' ಅಜ್ಜ ತಡವರಿಸಿದ. ವ್ಯಾಪಾರಿ ಸರಳ ವ್ಯಕ್ತಿಯಾದುದರಿಂದ ಏನನ್ನೂ ನುಡಿಯದೆ ಅಜ್ಜನನ್ನೇ ಅಚ್ಚರಿಯಿಂದ ಬಿಟ್ಟ ಕಣ್ಣು ಬಿಟ್ಟಂತೆ ನೋಡತೊಡಗಿದ. ಒಂದು ಬಟ್ಟಲು ಗಂಜಿ ಯನ್ನು ತಯಾರಿಸಿ ಅದನ್ನು ಯಾರು ಕುಡಿಯುತ್ತಾರೋ ನೋಡೋಣ ಎಂದು, ''ಹ್ಞೂ ಗಂಜಿ ತಗೊ'' ಎಂದು ಹೇಳಿದ.

ಆಗ ಮುದುಕ ಬಹಳ ಪ್ರಯತ್ನಪಟ್ಟು ಮೇಲೇಳುತ್ತ ತನ್ನ ನಡುಗುವ ಕೈಗಳಲ್ಲಿ ಬಟ್ಟಲನ್ನು ತೆಗೆದುಕೊಂಡು ಅಲ್ಲೇ ಬುಟ್ಟಿಯಲ್ಲಿ ಕಣ್ಮುಚ್ಚಿ ಮಲಗಿದ್ದ ಪುಟ್ಟ ಹುಡುಗನೊಬ್ಬನ ತುಟಿಗಳಿಗೆ ತಾಗಿಸಿದ. ಸತ್ತೇ ಹೋದಂತೆ ತೋರುತ್ತಿದ್ದ ಮಗು ಗಂಜಿಯ ಬಟ್ಟಲು ತುಟಿಗೆ ತಾಕಿದೊಡನೆ ಇನಿತೇ ಚಲಿಸಿತು. ಮುದುಕ ಹುಡುಗನ ತಲೆಯನ್ನು ಬಟ್ಟಲಿನ ತುದಿಗೆ ತಾಕುವಂತೆ ಎತ್ತಿದಾಗ ಅದು ಗುಟುಕುಗುಟುಕಾಗಿ ಆ ಗಂಜಿಯ ಬಿಸಿ ಮಿಶ್ರಣವನ್ನು ಪೂರ್ಣವಾಗಿ ಮುಗಿಯುವವರೆಗೂ ಕುಡಿಯತೊಡಗಿತು. ಅದನ್ನು ನೋಡುತ್ತಿದ್ದ ಮುದುಕನಿಗೆ ಹೊಟ್ಟೆ ತುಂಬಿದಂತಾಗುತ್ತಿತ್ತು. ಅವನ ಕಣ್ಣುಗಳಲ್ಲಿ ಮೆಲ್ಲಮೆಲ್ಲನೆ ಭವಿಷ್ಯದ ಆಶೆಯ ಮುಂಬೆಳಕು ಮೂಡುತ್ತಿತ್ತು, ಆ ಮುದುಕ ಗೊಣಗಿಕೊಳ್ಳುತ್ತಿದ್ದ– ''ನನ್ನ ಹೃದಯ, ನನ್ನ ಮಗು, ನನ್ನ ಕಂದ....'' ಇನ್ನು ಏನೇನೋ.

''ನಿನ್ನ ಮೊಮ್ಮಗನೇನು ?'' ಕೇಳಿದ ವ್ಯಾಪಾರಿ.

''ಹೌದು'' ಮುದುಕ ಮಾರ್ನುಡಿದ. ''ನನ್ನ ಒಬ್ಬನೇ ಮಗನ ಮಗ. ನನ್ನ ಮಗನೂ ಅವನ ಹೆಂಡತಿಯೂ ನಮ್ಮ ಜಮೀನಿನಲ್ಲಿ ಗೇಯುತ್ತಿರುವಾಗ ನೀರಿನ ತಡೆಗೋಡೆ ಕುಸಿದು ನುಗ್ಗಿದ ನೀರಿನಲ್ಲಿ ಮುಳುಗಿ ಸತ್ತರು'' ಎಂದ. ಅವನ ಕಣ್ಣಂಚಿನಲ್ಲಿ ನೀರು ತುಳುಕಾಡಿದುದು ವ್ಯಾಪಾರಿಗೆ ಕಾಣಲಿಲ್ಲ.

ಅವನು ಮಗುವಿನ ಮೈಮೇಲೆ ಮೃದುವಾಗಿ ಬಟ್ಟೆಯನ್ನು ಹೊದಿಸಿ ನಂತರ ನೆಲದ ಮೇಲೆ ಕೂರುತ್ತ ಬಟ್ಟಲಿನ ಒಳಭಾಗವನ್ನು ಸ್ವಲ್ಪವೂ ಬಿಡದಂತೆ ನಾಲಿಗೆಯಿಂದ ನೆಕ್ಕಿ ತನ್ನ ಊಟವಾಯಿತೊ ಎಂಬಂತೆ ಬಟ್ಟಲನ್ನು ವ್ಯಾಪಾರಿಗೆ ಹಿಂತಿರುಗಿಸಿದ.

ಮುದುಕ ಮತ್ತೊಂದು ಬಟ್ಟಲು ಗಂಜಿ ಕೊಳ್ಳದಿದ್ದಾಗ ಇನ್ನೂ ಅಚ್ಚರಿಯಾಗಿ ವ್ಯಾಪಾರಿ ಅವನನ್ನು ಕೂಗಿ ಕೇಳಿದ, ''ಅರೆ ನಿನ್ನಲ್ಲಿ ಒಂದು ಬೆಳ್ಳಿ ನಾಣ್ಯ ಇರಬೇಕಲ್ಲ!'' ಮುದುಕ ತನ್ನ ತಲೆ ಅಲ್ಲಾಡಿಸಿದ.

''ಅದು ಬೀಜಕ್ಕೆ'' ಅವನು ಉತ್ತರಿಸಿದ. ''ನಾನು ಬೆಳ್ಳಿ ನಾಣ್ಯ ನೋಡಿದೊಡನೆ ಅದರಿಂದ ಬೀಜ ಕೊಳ್ಳುವುದು ಅಂತ ನಿರ್ಧರಿಸಿಬಿಟ್ಟಿದ್ದೆ. ನಮ್ಮವರು ಎಲ್ಲ ಬೀಜವನ್ನೂ ತಿಂದುಬಿಟ್ಟರು. ಇನ್ನು ಯಾವುದರಿಂದ ಭೂಮಿಯನ್ನು ಬಿತ್ತೋಣ. ಇವೆಲ್ಲ ನಿಮಗೆ ಅರ್ಥವಾಗಲ್ಲ. ನಿಮಗೆ ಭೂಮಿ ಇದ್ದಿದ್ದರೆ ಮತ್ತೆ ಬೀಜ ಬಿತ್ತಲೇಬೇಕು ಇಲ್ಲದಿದ್ದಲ್ಲಿ ಮತ್ತೊಂದು ವರ್ಷ ಉಪವಾಸ ಬಿದ್ದು ಸಾಯಬೇಕಾಗುತ್ತದೆ ಅಂತ ಅರ್ಥವಾಗುತ್ತಿತ್ತು. ನನ್ನ ಈ ಮೊಮ್ಮಗನ ಮೇಲ್ಮೆಗಾಗಿ ನಾನು ಮಾಡಬಯಸುವ ಅತ್ಯಂತ ಶ್ರೇಷ್ಠ ಕಾರ್ಯವೆಂದರೆ ಮೊದಲು ಭೂಮಿಗಾಗಿ ಸ್ವಲ್ಪ ಬೀಜವನ್ನು ಕೊಳ್ಳುವುದು – ಹೌದು ನಾನು ಸತ್ತಾಗ್ಯೂ ಬೇರೆಯವರಾದರೂ ಭೂಮಿಗೆ ಬೀಜ ಹಾಕಲೇಬೇಕು, ಬಿತ್ತನೆ ಕೈಗೊಳ್ಳಲೇಬೇಕಲ್ಲ....''

ಮತ್ತೆ ಮುದುಕ ತನ್ನ ಹೊರೆಯನ್ನು ಹೊತ್ತುಕೊಂಡ. ಅವನ ಮುದಿ ಕಾಲುಗಳು ನಡುಗುತ್ತಿದ್ದವು. ಮುಂದೆ ಮೈಚಾಚಿ ಮಲಗಿದ್ದ ನಗರದ ದೀರ್ಘ ಬೀದಿಯತ್ತಲೇ ಕಣ್ಣಾಗಿ ತನ್ನ ಅಸ್ಥಿರ ಹೆಜ್ಜೆಗಳನ್ನಿಕ್ಕುತ್ತ ಮುಂದೆ ಮುಂದೆ ನಡೆಯತೊಡಗಿದ......

**ಅನುವಾದ : ಪಿ. ಪ್ರಾಣೇಶ ರಾವ್**
ಮುಖ್ಯೋಪಾಧ್ಯಾಯರು, ಪಿ.ಪಿ.ಎಸ್.ಬಿ.ಸಿ. ಪ್ರೌಢಶಾಲೆ
ಹಂಪಿ ರಸ್ತೆ, ಹೊಸಪೇಟೆ - ೫೮೩ ೨೦೧, ಬಳ್ಳಾರಿ ಜಿಲ್ಲೆ



ಈರಪ್ಪ ಎಂ. ಕಂಬಳಿ

# ಒಂದು ಕೆರೆಯ ವೃತ್ತಾಂತ

**ಮ**ನುಷ್ಯ ಎಷ್ಟೇ ಅತ್ಯಾಧುನಿಕ ನಾಗರಿಕನಾಗಿ ಮುಂದುವರಿದರೂ ನಿಸರ್ಗವನ್ನು ತೊರೆದು ಜೀವಿಸಲಾರ. ಈ ಮಾತಿನ ತಥ್ಯ ಮನವರಿಕೆಯಾಗಬೇಕಾದರೆ ನಮ್ಮ ಸುತ್ತಮುತ್ತಲಿನ ಇತ್ತೀಚಿನ ಬೆಳವಣಿಗೆಗಳತ್ತ ತುಸು ದೃಷ್ಟಿ ಹಾಯಿಸಿದರೆ ಸಾಕು.

'ಸಾವಿನ ನಂತರ ಏನು?' ಎಂಬ ಜಿಜ್ಞಾಸೆಗೆ ಭಾರತೀಯ ತತ್ವಜ್ಞಾನಿಗಳು ಕೊಡುವ ಉತ್ತರ: 'ಪಂಚಭೂತ (ಗಾಳಿ, ನೀರು, ಬೆಂಕಿ, ಆಕಾಶ, ಭೂಮಿ) ಗಳಿಂದಾದ ದೇಹ ಮತ್ತೆ ಆ ಪಂಚಭೂತಗಳಲ್ಲಿ ಲೀನವಾಗುವುದು' ಎಂದು. ಆತ್ಮದ ಪರಿಕಲ್ಪನೆಯನ್ನು ಬದಿಗಿಟ್ಟು ನೋಡಿದಾಗಲೂ ಆ ಮಾತಿಗೆ ಅರ್ಥವಿದೆ. ಸತ್ತ ನಂತರ ದೇಹ ಮಣ್ಣಿನಲ್ಲಿ ಕೊಳೆಯುತ್ತಲೋ ಇಲ್ಲ ಗಾಳಿಯಲ್ಲಿ ಸುಡುತ್ತಲೋ, ಸಂಯುಕ್ತಗಳು ವಿಭಜನೆಗೊಳ್ಳುತ್ತಾ ಅದರಲ್ಲಿದ್ದ ಸಾರಜನಕ, ಆಮ್ಲಜನಕ, ಜಲಜನಕ, ಇಂಗಾಲಗಳು ಬಿಡುಗಡೆಗೊಂಡು ಮತ್ತೆ ತಂತಮ್ಮ ವಲಯ ಸೇರುತ್ತವೆ. ಹುಟ್ಟು - ಸಾವುಗಳೆಂದರೆ ಆ ಮೂಲವಸ್ತುಗಳ ಸಂಯೋಗ ಮತ್ತು ವಿಭಜನೆಗೊಳ್ಳುವ ರಾಸಾಯನಿಕ ಕ್ರಿಯೆಗಳಷ್ಟೆ. ಅವುಗಳಲ್ಲಿ ಜೀವ ಅಂಕುರವಾಗುವುದಿದೆಯಲ್ಲಾ ಅದು ಮಾತ್ರ ನಿಸರ್ಗದ ಅತ್ಯದ್ಭುತ ರಹಸ್ಯ. ಇದು ವೈಜ್ಞಾನಿಕ ವಿಶ್ಲೇಷಣೆ. ಅದನ್ನೇ ದಾಸರು, ಸಂತರು 'ಮಣ್ಣಿಂದ ಕಾಯ ಮಣ್ಣಿಂದ' ಎಂದರು. ಮನುಷ್ಯ ತನ್ನ ಬುದ್ಧಿಶಕ್ತಿಯಿಂದ ನಿಸರ್ಗದ ಒಂದೊಂದೇ ನಿಗೂಢತೆಯನ್ನು ಶೋಧಿಸುತ್ತ, ಭೇದಿಸುತ್ತ, ಅವುಗಳ ಮೇಲೆ ಜಯ ಸಾಧಿಸುತ್ತ ಎಷ್ಟೇ ಮೇಲೇರಿದರೂ ಹಸಿವು ಮತ್ತು ಸಾವಿನ ಮುಂದೆ ಶರಣಾಗಿ ಮತ್ತೆ ಮಣ್ಣಿನ ತೆಕ್ಕೆಗೆ ಬೀಳಲೇಬೇಕು. ಅಂದರೆ ಮನುಷ್ಯ ಮಣ್ಣನ್ನು ಬಿಟ್ಟು ಬದುಕಲಾರ.

ಸ್ವಾತಂತ್ರ್ಯ ಅಂದರೇನು ? ಹದ್ದು ಆಕಾಶದಲ್ಲಿ ಎಷ್ಟೇ ಸ್ವಚ್ಛಂದವಾಗಿ ಮೇಲಕ್ಕೆ ಮೇಲಕ್ಕೆ ಹಾರಿದರೂ ಆಹಾರ ಹುಡುಕಿಕೊಂಡು ಮತ್ತೆ ಭೂಮಿಗೆ ಇಳಿಯಲೇಬೇಕಲ್ಲವೆ ? ಅದನ್ನೇ ಮಣ್ಣಿಗೂ ಮನುಷ್ಯನಿಗೂ ಇರುವ ಅವಿನಾಭಾವ ಸಂಬಂಧ ಅನ್ನುವುದು. ಆ ಸಂಬಂಧ ತುಂಬ ದೊಡ್ಡದು. ಮಾತೃಭೂಮಿ ಅಂದರು, ಮಣ್ಣಿನ ಋಣ ತೀರಿಸಲಾಗದು ಅಂದರು. ಹುಡುಕಿದರೂ ಹಿಡಿ ಮಣ್ಣು ಸಿಗದಂಥ ಮನೆಗಳಲ್ಲಿ ವಾಸಿಸುವ ಅಮೆರಿಕಾದಂಥ ಅತ್ಯಾಧುನಿಕ ರಾಷ್ಟ್ರಗಳಲ್ಲಿ ತಂದೆ - ತಾಯಿಯರು ವಿವಿಧ ಬಣ್ಣಗಳಲ್ಲಿ ಪ್ಯಾಕು ಮಾಡಿದ್ದ ಮಣ್ಣನ್ನು ಕೊಂಡುತಂದು ತಮ್ಮ ಮಕ್ಕಳಿಗೆ ಮುದ್ದಾಂ ಕೊಟ್ಟು ಆಟವಾಡಲು ಹಚ್ಚುತ್ತಾರಂತೆ. ಅದು ನಿಜವಾಗಿಯೂ ಆರೋಗ್ಯಪೂರ್ಣ ಕ್ರಮ, ಮನುಷ್ಯ ಮಣ್ಣಿನೊಂದಿಗಿನ ಒಡನಾಟ ಕಳೆದುಕೊಳ್ಳಬಾರದೆಂಬ ದೂರದೃಷ್ಟಿ.

ಇಷ್ಟೆಲ್ಲ ಪೀಠಿಕೆ ಮಣ್ಣಿನೊಂದಿಗಿನ ಅನನ್ಯ ನಂಟನ್ನು ತಿಳಿಸಲು. ಬಾಲ್ಯದಲ್ಲಿ ನನ್ನೂರಿನ ಕೆರೆಯ ಕಪ್ಪು ಮಣ್ಣನ್ನು ಅದರ ಕೆಂಪು ನೀರಲ್ಲಿ ನೆನೆಸಿ – ಮಿದ್ದಿ ಹದಗೊಳಿಸಿದ್ದ ದೊಡ್ಡ ದೊಡ್ಡ ಮುದ್ದೆಗಳನ್ನು ಹೊನ್ನವರೆ ತಪ್ಪಲಿನಲ್ಲಿ ಹೊತ್ತು ತಂದು, ನಮನಮಗೆ ತೋಚಿದ ರೀತಿಯಲ್ಲಿ ಎತ್ತು, ಗಣಪ, ಮೂಷಿಕ, ನಾಗಗಳಂಥ ಆಕಾರಗಳನ್ನು ಮಾಡುತ್ತಿದ್ದ ನೆನಪು ನನ್ನೊಳಗಿನ್ನೂ ಹಸಿಯಾಗಿದೆ. ಮಣ್ಣೆತ್ತಿನ ಅಮಾವಾಸ್ಯೆಯೆಂದರೆ ಮಣ್ಣಿನ ಎತ್ತುಗಳನ್ನು ಮಾಡಿ ಪೂಜಿಸುವುದು. ಅದೇ ರೀತಿ ಭೂಮಿ ಹುಣ್ಣಿಮೆ, ಎಳ್ಳು ಅಮಾವಾಸ್ಯೆ(ಚರಗ ಚೆಲ್ಲುವ) ಮತ್ತು ಶ್ರಾವಣಕ್ಕೆ ಮೊದಲು ಊರ ಸೀಮೆಯಗುಂಟ ಹಾಲು ಎರೆಯುವ ಉತ್ಸವಗಳೆಲ್ಲ ಪರೋಕ್ಷವಾಗಿ ಭೂಮಿಗೆ ಗೌರವ ಅರ್ಪಿಸುವುದೇ ಆಗಿದೆ. ಅದು ಭೂಮಿನಿಷ್ಠವಾದ, ಭೂಮಿಯನ್ನು ಅನ್ನ ಕೊಡುವ ತಾಯಿಯೆಂದೇ ಬಗೆಯುವ, ಭೂಮಿಯನ್ನೇ ನೆಚ್ಚಿರುವ ಒಕ್ಕಲು ಮಕ್ಕಳ ಪರಿಪಾಠವಾಗಿದೆ.

ಕನ್ನಡದಲ್ಲಿ ಶಾಸನ ಪದ್ಯವೊಂದಿದೆ. ತಾಯಿಯೊಬ್ಬಳು ತನ್ನ ಶಿಶುವಿಗೆ 'ಕೆರೆಯನ್ನು ಕಟ್ಟಿಸು, ಬಾವಿಯನ್ನು ತೋಡಿಸು, ತೋಪನ್ನು ನೆಡಿಸು.........' ಎಂದು ಬಾರಿ ಬಾರಿಗೆ ಹೇಳಿ ಹಾಲೂಡಿಸುತ್ತಿದ್ದಳಂತೆ. ತಾಯಿಯ ಆ ಉಪದೇಶಾಮೃತ ಮೈಗೂಡಿಸಿಕೊಂಡು ಬೆಳೆದು ದೊಡ್ಡವನಾದವನು, ಮುಂದೆ ಸಮಾಜದ ಒಳಿತಿಗಾಗಿ ಅಗತ್ಯ ಕೆರೆ ಕಟ್ಟಿಸುವ, ಬಾವಿ ತೋಡಿಸುವ, ತೋಪು ನೆಡಿಸುವಂಥ ಪರಿಸರನಿಷ್ಠ ಕಾರ್ಯಗಳಲ್ಲಿ ತೊಡಗಿ ಸೈ ಅನ್ನಿಸಿಕೊಳ್ಳುತ್ತಿದ್ದನಂತೆ. ಎಂಥ ಉದಾತ್ತವಾದ ಆಶಯವಲ್ಲವೆ ? ಇದನ್ನೇ ಮಾನವೀಯ ಸಾಮಾಜಿಕ ಮೌಲ್ಯ ಅನ್ನುವುದು.

ಪ್ರಸ್ತುತ ದಿನಗಳಲ್ಲಿ ಅಂತಾರಾಷ್ಟ್ರೀಯ ಮಟ್ಟದ ಮಾಹಿತಿ ತಂತ್ರಜ್ಞಾನ ನಮ್ಮದಾಗಿಸಿಕೊಂಡು, ಅತ್ಯಂತ ವೇಗ ಬಂದಿರುವ ನಾಗರಿಕತೆಯ ಬೆನ್ನೇರಿ ಮುನ್ನುಗ್ಗುತ್ತಿರುವಾಗಲೂ ಮನುಷ್ಯನ ಮೂಲಭೂತ ಅಗತ್ಯಗಳಾದ ಕುಡಿಯುವ ನೀರು ಹಾಗೂ ಅನ್ನ ಬೆಳೆಯುವ ನೆಲದ ಕಡೆ ಮತ್ತೆ ಹೊರಳಿ ನೋಡಬೇಕಾದ ಪರಿಸ್ಥಿತಿ ತಲೆದೋರಿದೆ. ಭೂಮಿಯ ಅಂತರ್ಜಲ ಕುಸಿಯುತ್ತಿರುವ ಹಿನ್ನೆಲೆಯಲ್ಲಿ ತಡವಾದರೂ ನಮ್ಮ ಸರ್ಕಾರಗಳು ಕೆರೆಗಳ ಹೂಳೆತ್ತುವ ಕ್ರಮ ಕೈಗೊಂಡದ್ದನ್ನು ನೆನೆಯಬೇಕಾಗಿದೆ.

ನೀರು - ಜೀವಜಲವಾಗಿರುವುದರಿಂದಾಗಿಯೋ ಏನೋ ನದಿಗಳುದ್ದಕ್ಕೂ ನಾಗರಿಕತೆಗಳು ಬೆಳೆದದ್ದು ಚರಿತ್ರೆ. ಅದೇ ರೀತಿ, ಒಳನಾಡುಗಳಲ್ಲಿ ಕೆರೆ - ಬಾವಿಗಳೇ ನಾಗರಿಕತೆಯ ಜೀವ ಜೀವಾಳವಾಗಿದ್ದನ್ನು ತೆಗೆದುಹಾಕಲಾದೀತೆ ? ಅಂತೆಯೇ ಕೆರೆಗಳು ನಮ್ಮ ಗ್ರಾಮೀಣ ಬದುಕಿನ ಜೀವನಾಡಿಯಾಗಿ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿದ್ದವು. ಆದುದರಿಂದಲೇ 'ಕೆರೆಗೆ ಹಾರ'ದಂಥ ಪ್ರಕರಣಗಳು ಚರಿತ್ರೆಯಲ್ಲಿ ದಾಖಲಾಗಿವೆ. ಇಷ್ಟೆಲ್ಲ ಸುತ್ತಿ ಬಳಸಿ ಹೇಳಲು ಹೊರಟಿದ್ದು – ನನ್ನೂರಿನ 'ಕೆಂಪು ಕೆರೆ'ಯ ವೃತ್ತಾಂತ ಪ್ರತಿಯೊಂದು ಊರಿನ ಕೆರೆಯ ಕತೆಯೂ ಆದೀತೆಂಬ ಕಾರಣಕ್ಕೆ.

ಸುತ್ತ ಕಪ್ಪು ಒಡ್ಡಿನ, ಕರಿ ನೆಲದ ವಿಶಾಲ ಪಾತ್ರದ ಆ ಕೆರೆಗೆ ಮಸಾರಿ ನೆಲದ ಕಡೆಯಿಂದ ಹರಿದುಬರುವ ಕೆನ್ನೀರು ಸಂಗ್ರಹವಾಗುತ್ತಿದ್ದುದರಿಂದಲೇ ಜನಪದರು ಅದಕ್ಕೆ 'ಕೆಂಪುಕೆರೆ' ಎಂದು ಹೆಸರಿಟ್ಟರು. ಕರಿ ಒಡಲಲ್ಲಿ ಕೆಂಪು ನೀರು ತುಂಬಿಕೊಳ್ಳುತ್ತಿದ್ದ ವಿಚಿತ್ರ ಸಂಗಮ ಅದು. ಕೆರೆ ಅಂದ ಮೇಲೆ ಅದಕ್ಕೆ ಒಂದು ಆಯಕಟ್ಟಿನ ಕಡೆ ನೀರು ಬಿಡುವ ಮದಗವೂ, ಹೆಚ್ಚಿನ ನೀರು ಹರಿದುಹೋಗಲು ಕೋಡಿಯೂ ಇವೆ. ಬಾಲ್ಯದಲ್ಲಿ ಎರಡು ಮೂರು ವರ್ಷಕ್ಕೊಮ್ಮೆಯಾದರೂ ಸಮೃದ್ಧ ಮಳೆಯಾಗುತ್ತಿದ್ದುದರಿಂದಾಗಿ ತುಂಬಿದ ಆ ಕೆರೆಯನ್ನು ನೋಡುವುದೆಂದರೇನೇ ನಮಗೆಲ್ಲ ಹಬ್ಬ. ನನ್ನೂರಿನ ವಿದ್ವಾಂಸ ಚ. ಭೀ. ಮಾಸ್ತರರು ಆಗ ಸಭೆ ಸಮಾರಂಭಗಳಲ್ಲಿ ಹೇಳುತ್ತಿದ್ದ ಮಾತು. ಸುತ್ತ ಏಳು ಕೆರೆಗಳಿದ್ದ ಊರು 'ಏಳಂಬರಿಗೆ' ಕಾಲಕ್ರಮೇಣ

ಯಲಂಬರಿಗೆ ಆಗಿ ಈಗ 'ಯಲಬುರಿಗೆ'ಯಾಗಿ ರೂಪಾಂತರವಾಯಿತೆಂದು ಹೇಳುತ್ತಿದ್ದಾಗ ನಾವೆಲ್ಲ ನಮ್ಮೂರ ಸೀಮೆಯೊಳಗೆ ಇದ್ದ ಎಲ್ಲ ಕೆರೆಗಳನ್ನು ಲೆಕ್ಕ ಹಾಕಿ ಏಳು ಕೆರೆಗಳಿಗೆ ಸರಿ ಹೊಂದಿಸಲು ಯತ್ನಿಸುತ್ತಿದ್ದೆವು. ಹೀಗಾಗಿ, ನಾವೆಲ್ಲ ಹುಟ್ಟಿನಿಂದಲೇ ಬರಗಾಲ ಬಂಟರೆಂದು ಬಿರುದು ಸಂಪಾದಿಸಿದ್ದರೂ ಏಳು ಕೆರೆಯ ನೀರು ಕುಡಿದ ಸಾಹಸಿಗಳೂ, ಕಷ್ಟ ಸಹಿಷ್ಣುಗಳೂ ಎಂಬ ಹೆಮ್ಮೆ ನಮಗಿದೆ, ಇರಲಿ.

ಹಾಗೆ, ಕೆಂಪು ಕೆರೆಗೆ ಲೀಲಾಜಾಲವಾಗಿ ನೀರು ಹರಿದು ಬಂತೆಂದರೆ ಸುತ್ತಲಿನ ಬಾವಿಗಳೆಲ್ಲ ತುಂಬಿ ತುಳುಕುತ್ತಿದ್ದವು. ಕೆಳಗಿನ ಗದ್ದೆಗಳಲ್ಲಿ ಊಟೆ (ನೀರಿನ ಚಿಲುಮೆ) ಕಿತ್ತುಕೊಳ್ಳುತ್ತಿದ್ದವು. ಲಗತ್ತಾಗಿದ್ದ ತುಂಡುಗದ್ದೆಗಳಲ್ಲಿ ತಂಗಾಳಿಗೆ ತಲೆದೂಗುವ ದಪ್ಪಕ್ಕಿಯ ನೆಲ್ಲು ಮತ್ತು ಸದರಿ ಬಾವಿಗಳನ್ನೇ ನೆಚ್ಚಿರುವ ತೋಟ – ಪಟ್ಟೆಗಳಲ್ಲಿ ರಸದಾಳಿ ಕಬ್ಬು (ಜಗ್ಗಿಯುವುದಕ್ಕಾಗಿಯೇ ಇರುವಂಥ ತಳಿ) ನಳನಳಿಸುತ್ತಿದ್ದವು. ನನ್ನೂರಿನ ಆ ಕೆರೆ – ಬಾವಿಗಳಲ್ಲಿ ನೀರು ಸಮೃದ್ಧವಾಗಿರುವಾಗ ನಾವು ಊರಿನ ಹುಡುಗರೆಲ್ಲ ಸಹಜವಾಗಿಯೇ ಈಜುಪಟುಗಳು. ಬೇಸಿಗೆಯ ರಜಾದಿನಗಳಂದು ಹಗಲಿನ ಅರ್ಧದಷ್ಟು ಸಮಯವನ್ನು ನೀರಾಟದಲ್ಲಿಯೇ ಕಳೆದದ್ದಿದೆ. ಕೆಲವೊಮ್ಮೆ ರೊಟ್ಟಿ ಬುತ್ತಿ ಕಟ್ಟಿಕೊಂಡು ಈಜಲು ಹೋದದ್ದಿದೆ. ನಿಮಿಷಗಟ್ಟಲೇ ನೀರಲ್ಲಿ ಮುಳುಗಿ ಅರವತ್ತು ಎಪ್ಪತ್ತು ಅಡಿ ಆಳದ ತಳದಿಂದ ಕಪ್ಪು ಹೂಳನ್ನು ಮುಷ್ಟಿಯಲ್ಲಿ ಹಿಡಿದು ಮೇಲಕ್ಕೆ ತಂದು ಜಾಲಾಡುವುದು. ಕಪ್ಪಾದ ಹಳೆಯ ಕಾಸುಗಳೇನಾದರೂ ಸಿಗಬಹುದೆಂಬ ಹುಡುಕಾಟ. ಇಲ್ಲಿ ದೀರ್ಘ ಶ್ವಾಸೋಚ್ಛ್ವಾಸದ ಮೂಲಕ ನಿಯಂತ್ರಣ ಸಾಧಿಸಿ ನೀರ ಪಾತಳಿಯ ಮೇಲೆ ಶವಾಸನ ಹಾಕಿ ತೇಲುತ್ತ ದಡದಲ್ಲಿದ್ದವರು ನಿಬ್ಬೆರಗಾಗಿ ನಿಂತು ನೋಡುವಂತೆ ಮಾಡುವಲ್ಲಿ ಗಟ್ಟಿಗರಾಗಿದ್ದೆವು. ಬಾಲ್ಯದ ಆ ಈಜಾಟದ ಕಸರತ್ತೇ ನಮ್ಮನ್ನು ಈಗಲೂ ಆರೋಗ್ಯವಂತರನ್ನಾಗಿಸಿ ಕಾಪಾಡುತ್ತಿರಬೇಕೆಂದು ನಾನಾದರೂ ನಂಬಿದವನು.

ಮೊನ್ನೆ ಊರಿಗೆ ಹೋದಾಗ ತಿಳಿಯಿತು. ಹೊಸ ತಲೆಮಾರಿನ ಹುಡುಗರಾರಿಗೂ ಈಜೇ ಬರುವುದಿಲ್ಲವೆಂದು. ಯಾಕೆ ಹೀಗಾಯಿತೆಂದರೆ, ಕಳೆದ ಹತ್ತಾರು ವರ್ಷಗಳಲ್ಲಿ ಮಳೆಗಾಲವೂ ಕಡಿಮೆ. ಅದರ ಜೊತೆಗೆ ಹೂಳು ತುಂಬಿದ ಕೆರೆಯ ಪಾತ್ರವೂ ಕುಗ್ಗಿ ನೀರು ಹಿಡಿದಿಟ್ಟುಕೊಳ್ಳುವ ಸಾಮರ್ಥ್ಯವೂ ಇಲ್ಲವಾಗಿದೆ. ಅದರಿಂದಾಗಿ, ಸುತ್ತಲಿನ ಬಾವಿಗಳಲ್ಲಿ ನೀರಿಲ್ಲ. ಅದೂ ಸಾಲದೆ, ಕೊರೆ ಬಾವಿಗಳಿಂದಾಗಿ ಅಂತರ್ಜಲವೂ ಬತ್ತಿ ಹೋಯಿತು. ಜನರಿಗೆ ಈಗ ಕುಡಿಯುವುದಕ್ಕೆ ನೀರು ಒದಗಿಸಿದರೆ ಸಾಕಾಗಿದೆ. ಇನ್ನು ಈಜಾಡಲು ನೀರು ಎಲ್ಲಿಂದ ತರಬೇಕು ? ಒಂದು ಕೆರೆ ಬತ್ತಿಹೋದರೆ ಆ ಊರಿನ ನಾಗರಿಕತೆಯ ಮೇಲೆ ಹೇಗೆ ಪ್ರತಿಕೂಲ ಪರಿಣಾಮ ಉಂಟಾಗುತ್ತದೆನ್ನುವ ಅಂಶವನ್ನು ಇಲ್ಲಿ ಗಮನಿಸಬೇಕು. ಅದು ಸಾಂಸ್ಕೃತಿಕವಾಗಿಯೂ ಹೇಗೆ ಕೊರತೆಯಾಗಿ ಕಾಡುತ್ತದೆನ್ನುವುದಕ್ಕೆ ಇದೊಂದು ಸಣ್ಣ ನಿದರ್ಶನ.

ತುಂಬಿದ ಕೆರೆಯಲ್ಲಿ ಬೆಳಗಿನ ಸೂರ್ಯ ಮೂಡಿಸುವ ಬೆಳ್ಳಿಯ ರೇಖೆಗಳು; ತಂಗಾಳಿಗೆದ್ದ ಅಲೆಗಳು ದಡಕ್ಕೆ ಬಡಿದು ಲಯಬದ್ಧವಾಗಿ ತಬಲಾ ನುಡಿಸುವುದು; ನೀರ ಮೇಲೆ ಹಾದು ಬರುವ ಕುಳಿರ್‌ಗಾಳಿ ದಣಿದ ದೇಹದ ಬೆವರ ಒರೆಸುವ ಪರಿ ಎಂಥ ಮನಮೋಹಕ! ಉರುವಲು ಕಟ್ಟಿಗೆಯ ಉದ್ದನೆಯ ಹೊರೆ ಹೊತ್ತು ಕೆರೆ ಏರಿಯ ಮೇಲೆ ಬರುತ್ತಿರುವ ಲಂಬಾಣಿ ಹೆಂಗಸರನ್ನು ಆಷಾಢದ ಗಾಳಿ ಹಿಗ್ಗಾಮುಗ್ಗಾ ಎಳೆದಾಡುತ್ತಿರುವಾಗ ಅವರ ಆ ಸೆಣಸಾಟ ನೋಡಬೇಕು. ಇವನ್ನು ಚಿತ್ತದಲ್ಲಿ ಮಾತ್ರ ಸೆರೆ ಹಿಡಿಯಲು ಸಾಧ್ಯ.

ಪ್ರತಿಯೊಬ್ಬ ಹದಿಹರೆಯದವನಿಗೂ ಆ ಕಾಲದಲ್ಲಿ ತನ್ನ ರಟ್ಟೆಯನ್ನು ತಾನೇ ಸವರಿಕೊಂಡು ಬೀಗುವ ಮನೋಭಾವವಿರುತ್ತದೆ. ಎದುರಾದುದನ್ನೆಲ್ಲ ಕುಟ್ಟಿ ಪುಡಿ ಮಾಡುವ – ವಜ್ರದೇಹಿಯಾಗುವ ತಹತಹಿಕೆಯಿರುತ್ತದೆ. ಅದಕ್ಕಾಗಿ ಗರಡಿಮನೆ ಸಿಕ್ಕದಿದ್ದರೂ ನಿತ್ಯ ಕೆರೆಯ ದಿಬ್ಬದ ಮೇಲೋ, ಶಾಲೆಯ ಅಂಗಳದಲ್ಲಿಯೋ ದೇಹದಾರ್ಢ್ಯತೆಯ ಕಸರತ್ತು ಮಾಡಬೇಕೆನ್ನುವ ಹುಮ್ಮಸ್ಸು ಇರುತ್ತದೆ. ಅದೇ ಆಗ ಅಕ್ಷರ ಪ್ರಪಂಚಕ್ಕೆ ಕಣ್ಣು ಕೀಲಿಸುತ್ತಿದ್ದ ಆ ಹುಡುಗರಿಗೆ ಸ್ವಾಮಿ ಶಿವಾನಂದರ 'ಬ್ರಹ್ಮಚರ್ಯವೇ ಜೀವನ – ವೀರ್ಯನಾಶವೇ ಮೃತ್ಯು' ಎಂಬ ಪುಸ್ತಕವೇನಾದರೂ ಕೈಗೆ ಸಿಕ್ಕರೆ ಮುಗಿಯಿತು. ಅದರಲ್ಲಿ ಚರ್ಚಿಸಿದ ಅತಿರೇಕಗಳು ಇಲ್ಲಸಲ್ಲದ ಭ್ರಮೆಯನ್ನು ಹುಟ್ಟಿಸಿಬಿಡುತ್ತಿದ್ದವು.

ಆ ದಿನಗಳಲ್ಲಿ ಬೆಳಗಿನ ತಂಪು ಹೊತ್ತಿನಲ್ಲಿ ನನ್ನೂರ ಕೆಂಪು ಕೆರೆಯ ಏರಿಯ ಮೇಲಿನ ರಸ್ತೆಯಲ್ಲಿ ಉದ್ದಕ್ಕೆ ಬರೀ ಮೈಯಲ್ಲಿ ಓಡುವುದೆಂದರೆ ನನಗೆ ಆಪ್ಯಾಯಮಾನವಾಗಿರುತ್ತಿತ್ತು. ಮೈಯಿಂದ ಹೊರಟ ಬೆವರನ್ನು ತಂಗಾಳಿಯ ಸೆರಗೇ ಒರೆಸುತ್ತಿತ್ತು. ನಂತರ ಪಕ್ಕದ ಬಾವಿಗೆ ಜಿಗಿದು

ದೇಹ ದಣಿಯುವಷ್ಟು ಈಜಿ ಮನೆ ದಾರಿ ಹಿಡಿಯುತ್ತಿದ್ದೆವು – ಯಥೇಷ್ಟವಾಗಿ ಜೋಳದ ರೊಟ್ಟಿಗಳನ್ನು ಕತ್ತರಿಸುವ ಹಪಾಹಪಿಯಲ್ಲಿ.

ಹೈಸ್ಕೂಲಲ್ಲಿ ನಮಗಾಗ ವಿಜ್ಞಾನ ಕಲಿಸುತ್ತಿದ್ದ ಪ್ರಾಣೇಶಾಚಾರ್ಯರು ಬಗಲಲ್ಲಿ ಮಡಿಪಂಚೆ ಟವಲು ಸುತ್ತಿಟ್ಟು ಕೊಂಡು, ಒಂದು ಕೈಯಲ್ಲಿ ಥಳ ಥಳ ಹೊಳೆಯುವ ತಾಮ್ರದ ತಂಬಿಗೆ (ಅವರ ತಲೆಯೂ ಅಂತೆಯೇ), ಇನ್ನೊಂದು ಕೈಯಲ್ಲಿ ಬೇವಿನ ಕಡ್ಡಿಯ ಬ್ರಶ್‌ನಿಂದ ಹಲ್ಲುಜ್ಜುತ್ತ ಕೆರೆಯ ದಾರಿಗುಂಟ ಎದುರಾಗುತ್ತಿದ್ದರು. ಅವರು ತಪ್ಪಿದರೆ, ಕಟ್ಟಾ ಮಡಿ ಬ್ರಾಹ್ಮಣ – ಮೃದು ಹೃದಯಿಯೆಂದೇ ಹೆಸರಾಗಿದ್ದ ಮುಂಡಾಸದ ಎಂಕಪ್ಪಾಚಾರ್ಯರು 'ಗೋವಿಂದೇತಿ ಸದಾ ಧ್ಯಾನಂ, ಗೋವಿಂದೇತಿ ಸದಾ ಜಪಂ' ಎಂದು ಗಟ್ಟಿಯಾಗಿ ಹೇಳಿಕೊಳ್ಳುತ್ತ ಗಲಗಲ ಅನ್ನುವ ಚಳಿಯಲ್ಲಿಯೂ ಬಾವಿಯ ತಣ್ಣೀರ ಸ್ನಾನಕ್ಕೆ ಬರುತ್ತಿದ್ದುದು ನಿತ್ಯದ ದೃಶ್ಯವಾಗಿದ್ದವು.

ಹೊತ್ತೇರಿದಂತೆಲ್ಲ, ಬಟ್ಟೆ ಒಗೆಯಲು ಬರುವ ಹೆಂಗಸರಿಂದ, ದನಗಳ ಮೈ ತೊಳೆಯಲು ಬರುವ ಗಂಡಸರಿಂದ ಕೆರೆ ಗಿಜುಗುಡಲಾರಂಭಿಸುತ್ತಿತ್ತು. ಕೆರೆಯಂಚಿನ ನಿರ್ಜನ ಪ್ರದೇಶದ ತಟದಲ್ಲಿ ಕೂತಿರುತ್ತಿದ್ದ ಕಪ್ಪೆಗಳು ಮನುಷ್ಯ ಪ್ರಾಣಿಯ ನೆರಳು ಬೀಳುತ್ತಿದ್ದಂತೆಯೇ ಏಕಕಾಲಕ್ಕೆ ಟುಮುಕ್ ಎಂದು ನೀರಿಗೆ ಜಿಗಿಯುತ್ತಿದ್ದವು –ಸೀಟಿ ಹೊಡೆದೊಡನೆ ಈಜುಕೊಳದಲ್ಲಿ ಡೈ ಹೊಡೆಯುವ ಸ್ಪರ್ಧಾಳುಗಳಂತೆ. ಹೆಂಗಸರನ್ನು ಅನುಸರಿಸಿಕೊಂಡು ಬಂದಿದ್ದ ಮಕ್ಕಳು ಹುಟ್ಟುಡುಗೆಯಲ್ಲಿಯೋ, ಬರೀ ಉಡುದಾರದಲ್ಲಿಯೋ ಕೂತು ನೀರಿಗಿಳಿಯಲು ಕಾತರಿಸುತ್ತಿದ್ದವು.

ಮೇಗಳ ಓಣಿಯ ಪಡ್ಡೆ ಹುಡುಗಿಯೊಂದು ತಾನು ಉಟ್ಟಿದ್ದ ಲಂಗ – ಪರಕಾರದಲ್ಲಿಯೇ, ಏರುಗಚ್ಚೆ ಸಿಕ್ಕಿಸಿಕೊಂಡು ತನ್ನ ಎಮ್ಮಿ ಮಣಕದೊಂದಿಗೆ ನೀರಿಗಿಳಿದು, ಅದರ ಬಾಲ ಹಿಡಿದು ಈಜಿ ಬರುತ್ತಿರುವುದನ್ನು ಕಂಡು ದಡದಲ್ಲಿದ್ದ ದನಗಾಹಿ – ಹುಡುಗರೆಲ್ಲ ಆಕೆಯ ಧೈರ್ಯಕ್ಕೆ ಕೇಕೆ ಹಾಕಿ, ಸೀಟಿ ಹೊಡೆದು, ಹೋ ಎಂದು ಅರಚಿ ಉತ್ತೇಜಿಸಿದ್ದರು. ದಡಕ್ಕೆ ಬಂದ ಆಕೆ, ನೀರು ತೊಟ್ಟಿಕ್ಕುತ್ತಿದ್ದ ಬಟ್ಟೆಗಳನ್ನು ಮೈ ಮೇಲಿದ್ದಂತೆಯೇ ಹಿಂಡಿ ಆರಿಸಲು ಪ್ರಯತ್ನಿಸುತ್ತಲೇ ಹುಡುಗರೆಡೆ ಕಡೆಗಣ್ಣ ನೋಟದಲ್ಲಿ ಮುಗುಳುನಗೆ ಬೀರುತ್ತಿದ್ದಳು. ಎಂಥಾ ಎದೆಗಾತಿ?

ಇನ್ನೊಬ್ಬ ಹುಡುಗ ತನ್ನ ಮುದ್ದಿನ ನಾಯಿಯನ್ನು ಪುಸಲಾಯಿಸಿ ಹತ್ತಿರ ಕರೆದು, ಬಳಿ ಸಾರಿದೊಡನೆ ಅದನ್ನು ಅನಾಮತ್ತಾಗಿ ಎತ್ತಿ ಕೆರೆಗೆ ಎಸೆದು, ದಡಕ್ಕೆ ಬಾರದಂತೆ ಕೂಗಿ ಅದರತ್ತ ಕಲ್ಲು ಬೀರಿದ. ದಿಕ್ಕು ತಪ್ಪಿದಂತಾದ ಅದು ಜೀವಭಯದಿಂದ ಮುಖ ಮೇಲೆತ್ತಿ ಹಿಡಿದು ನಾಕೂ ಕಾಲಿಂದ ನೀರು ತುಳಿಯುತ್ತ ನಿರ್ಜನ ದಂಡೆಯತ್ತ ಈಜಿ ಪಾರಾಗಿ, ಅಷ್ಟು ದೂರದಲ್ಲಿ ಹತ್ತಿನಿಂತು ಬಿಸಿಲು ಕಾಯಿಸುತ್ತಿತ್ತು. ಅಷ್ಟಕ್ಕೇ ಬಿಡದೆ, ಇವನು ಕುರ್ರೋ ಎಂದು ಕೂಗುತ್ತ ಮತ್ತೆ ಅದರ ಹತ್ತಿರ ಹೋದೊಡನೆ, ಹುಷಾರಾಗಿದ್ದ ಅದು 'ನಿನ್ನ ಸಹವಾಸ ಸಾಕು' ಎನ್ನುವಂತೆ ಅಷ್ಟು ದೂರಕ್ಕೆ ಓಡಿಹೋಗಿ ನಿಂತು ನೋಡುತ್ತಿತ್ತು. ದೂರದ ಎದುರು ದಡದಲ್ಲಿ ಸಾಬರ ಹುಡುಗರು ಗಳಿಗೆಗೊಮ್ಮೆ ಬೀಡಿ ಸೇದುತ್ತ, ಮೀನಿಗಾಗಿ ಗಾಳ ಹಾಕಿಕೊಂಡು ತಪೋನಿರತರಾಗಿದ್ದರು.

ಎಪ್ಪತ್ತರ ದಶಕದಲ್ಲಿ ಒಮ್ಮೆ ಸದರಿ ಕೆರೆ ಮಳೆಯಿಲ್ಲದೆ ಪೂರ್ತಿ ಒಣಗಿ ನಿಂತಿತ್ತು. ಅದರ ಜೊತೆ ಕರುಳಬಳ್ಳಿ ಬೆಳೆಸಿಕೊಂಡಿದ್ದ ನನಗೆ, ಅದು ಹಾಗೆ ಚಿತ್ತಾಗಿರುವುದನ್ನು ನೋಡಲಾಗುತ್ತಿರಲಿಲ್ಲ. ಹಕ್ಕಳೆಗಟ್ಟಿದ ಗಾಯದಂತೆ ಕೆರೆಯಂಗಳದ ಗೋಡು ಮಣ್ಣು ಬಿರುಕುಬಿಟ್ಟಿತ್ತು. ಕೆರೆಯ ಆಚೆ ಬದಿಯ ತೋಟ – ಪಟ್ಟಿಗಳಿಗೆ, ಕೆಲಸ ಬೊಗಸೆಗೆ ಹೋಗುವ ಜನರು ಅಡ್ಡದಾರಿ ಮಾಡಿಕೊಂಡು ಕೆರೆಯಂಗಳದಲ್ಲಿಯೇ ನಡೆದಾಡಿದ ಪ್ರಯುಕ್ತ ಉಂಟಾಗಿದ್ದ ಆ ಕಾಲುದಾರಿಗಳು ದೂರದಿಂದ ನೋಡುವವರಿಗೆ ಬರೆ ಹಾಕಿದಂತೆ ತೋರುತ್ತಿದ್ದವು.

ನಿತ್ಯದಂತೆ, ಅವತ್ತೊಂದು ದಿನ, ಸೂರ್ಯೋದಯಕ್ಕೆ ಮೊದಲೇ, ಒಣಗಿದ್ದ ಆ ಕೆರೆಯಂಗಳಕ್ಕೆ ಇಳಿದ ನಾನು ಬರೀ ಚಡ್ಡಿಯ ಮೇಲೆ (ವಾಚಕರು ಕ್ಷಮಿಸಬೇಕು. ನನಗಾಗ ಬನಿಯನ್ನು ಹಾಕುವ ಪರಿಪಾಠವಿರಲಿಲ್ಲ ಅನ್ನುವುದಕ್ಕಿಂತ, ಅದನ್ನು ಕೊಳ್ಳುವ ಚೈತನ್ಯವಿರಲಿಲ್ಲವಷ್ಟೇ) ಐದಾರು ಸುತ್ತು ಹಾಕಿ ಬರುವ ಹಠ ತೊಟ್ಟು ಎಂದಿನಂತೆ ದಮ್ಮುಕಟ್ಟಿ ಓಡಲಾರಂಭಿಸಿದ್ದೆ.

ಒಂದು ಸುತ್ತು ಬಂದು ಎರಡನೇ ಸುತ್ತಿನಲ್ಲಿದ್ದಾಗ, ಕಾಲ ಬುಡದಲ್ಲಿ ದಪ್ಪನೆಯ ಸೇದೋ ಹಗ್ಗವೊಂದನ್ನು ಯಾರೋ ರಭಸವಾಗಿ ಎಳೆದಂತಾಗಲು ಬೆಚ್ಚಿ ಬಿದ್ದು ಅಷ್ಟು ದೂರ ಚಂಗನೇ ಹಿಂದಕ್ಕೆ ನೆಗೆದು ನಿಂತು ನೋಡುತ್ತೇನೆ, ಹತ್ತಿರದಲ್ಲಿಯೇ ಎರಡೂವರೆ ಮಾರು ಉದ್ದದ ಕೆರೆ ಹಾವೊಂದು ಸರಭರ ಹರಿಯುತ್ತಿತ್ತು. ಎದೆ ಝಲ್ಲೆಂದಿತು. ಸಾವರಿಸಿಕೊಂಡು ನೋಡುತ್ತಿರಲಾಗಿ, ಗಡಬಡಿಸಿ ನೆಲದ ಬಿರುಕುಗಳಲ್ಲಿ ತಲೆ ತೂರಿಸುವುದು, ಅಲ್ಲಿ ತಾವಿಲ್ಲವೆಂದು ತಿಳಿದೊಡನೆ ಹೊರ ಬಂದು ಮತ್ತೊಂದು ಬಿರುಕಿಗೆ ತಲೆ ಹೋಗಿಸುತ್ತ ಅದು ತಲೆಮರೆಸಿಕೊಳ್ಳಲು ಪ್ರಯತ್ನಿಸುತ್ತಿತ್ತು. ಅದೇನಾದರೂ ನಾಗರ ಹಾವಾಗಿದ್ದು, ಅರೆಗತ್ತಲಿನಲ್ಲಿ ಅದರ ಮೇಲೆ ಕಾಲಿಟ್ಟಿದ್ದರೆ ನನ್ನ ಗತಿ ? ಸ್ವಲ್ಪದರಲ್ಲೇ ಅಂದು ಬಚಾವಾಗಿದ್ದೆ. ಬೆಳಗಿನ ಚಳಿಯಲ್ಲಿಯೂ ಬೆವರು ಕಿತ್ತು ಎದೆ ಡವಡವಗುಟ್ಟಿತ್ತು. ಅವತ್ತಿನಿಂದ ಒಣಗಿದ್ದ ಆ ಕೆರೆಯಂಗಳದಲ್ಲಿ ಓಡುವುದನ್ನು ಬಿಟ್ಟುಕೊಟ್ಟೆ. ಏನಿದ್ದರೂ ಕೆರೆ ಏರಿಗುಂಟ ಕಾಲುದಾರಿಯಲ್ಲಿ ಸುತ್ತು ಹಾಕಿ ಬರುವುದನ್ನು ರೂಢಿಸಿಕೊಂಡೆ. ಕೆರೆ ಒಣಗಿ ಕುಷ್ಠರೋಗಿಯಂತೆ ಕಂಡರೂ ನನಗದರ ಸಹವಾಸ ಕಳಕೊಳ್ಳಲು ಮನಸ್ಸು ಬರುತ್ತಿದ್ದಿಲ್ಲ. ಆಕಸ್ಮಾತ್ ಬೆಳಗಿನ ಹೊತ್ತು ತಪ್ಪಿದರೆ, ಸಂಜೆಯ ಗೋಧೂಳಿ ಸಮಯದಲ್ಲಾದರೂ ಕೆರೆ ಏರಿಯ ಮೇಲೆ ಕೂತು 'ಹವಾಸಿರಿ' ಅನುಭವಿಸುವುದು ನನಗೊಂದು ಗೀಳಾಗಿತ್ತು.

ಕಳೆದ ಮಾರ್ಚ್ ಬೇಸಿಗೆಯಲ್ಲಿ ಊರಿಗೆ ಭೇಟಿಯಿತ್ತಾಗ ಸಹಜವಾಗಿಯೇ ಕೆರೆಯ ಕಡೆ ನಡೆದೆ. ಕೆರೆಯ ಅಂಗಳದಲ್ಲಿ ಜನ ಸೇರಿದ್ದರು. ಹೂಳೆತ್ತುವ ಕಾರ್ಯ ಭರದಿಂದ ನಡೆದಿತ್ತು. ನನ್ನ ಪ್ರೀತಿಯ ಕೆರೆಗೆ ಕಳೆದ ವೈಭವದ ದಿನಗಳು ಮರುಕಳಿಸುವ ಕನಸು ಕಂಡು ಪುಳಕಿತಗೊಂಡೆ. ಮಂಜೂರಾದ ಹಣದಲ್ಲಿ ಶೇಕಡಾ ಐವತ್ತರಷ್ಟು ವಿನಿಯೋಗಿಸಿದರೂ ಕೆರೆಯ ಪಾತ್ರ ಹಿಗ್ಗುತ್ತದೆಂದು ಜನ ಆಡಿಕೊಳ್ಳುತ್ತಿದ್ದರು.

ಆದರೆ, ಏಪ್ರಿಲ್ ತಿಂಗಳಲ್ಲಿ ಅಕಾಲಿಕವಾಗಿ ಸುರಿದ ಬೀಜ ಮಳೆಯ ಧಾರಾಕಾರದಿಂದಾಗಿ ಜನ ವ್ಯಥೆಪಟ್ಟರು. ಯಾಕೆಂದರೆ, ಸಾಮಾನ್ಯವಾಗಿ ಮಾರ್ಚ್ – ಏಪ್ರಿಲ್ ತಿಂಗಳಲ್ಲಿ ಮೋಡಗಳು ಆಕಾಶದಲ್ಲಿ ಜಮಾಯಿಸಿ ಗರ್ಭಗಟ್ಟುತ್ತವಂತೆ. ಆ ಕಾಲದಲ್ಲಿ ಅವೇನಾದರೂ ಸುರಿದುಬಿಟ್ಟರೆ ಖಾಲಿಯಾಗಿ, ಮುಂದೆ ಮಳೆಗಾಲ ಇಲ್ಲವೆಂದು ಕೃಷಿಕರ ಲೆಕ್ಕಾಚಾರ. ಎಣಿಸಿದಂತೆ ಅದೇ ಗಟ್ಟಿಯಾಯಿತು. ಈ ವರ್ಷ ಮುಂಗಾರು ಪೂರ್ತಿ ಕೈ ಕೊಟ್ಟಿತು. ಚೂರು ಚೂರು ಹೂಳೆತ್ತಿದ್ದ ತಗ್ಗುಗಳಲ್ಲಿ ಅಕಾಲಿಕವಾಗಿ ಸುರಿದ ಮಳೆಯಿಂದಾಗಿ ನೀರು ತುಂಬಿಕೊಂಡಿತು. ಬೆಂದ ಮನೆಯ ಗಳ ಹಿರಿದಂತೆ, ನೀರು ತುಂಬಿದ್ದ ಆ ಗುಂಡಿಗಳಲ್ಲಿ ಮೊಳಕಾಲೂರಿ ಟೇಪು ಹಿಡಿದರು. ಒಂದಕ್ಕೆ ಮೂರರಷ್ಟು ಸುಳ್ಳು ಆಳ ತೋರಿಸಿ ದುಡ್ಡು ಬಾಚಿದರು. ಕೆರೆಯ ಬಾಬತ್ತಿನಲ್ಲಿ ಯಾರ್‍ಯಾರು ಎಷ್ಟೆಷ್ಟು ಕೆರೆದುಕೊಂಡರೋ ಅದು ಹೊರನೋಟಕ್ಕೆ ಕಾಣುವಂಥದ್ದಲ್ಲ. ಅಕಾಲಿಕ ಮಳೆಯಿಂದಾಗಿ ಹೂಳೆತ್ತುವ ಕಾಮಗಾರಿ ಹೊಳೆಯಲ್ಲಿ ಹುಣಸೆಹಣ್ಣು ತೊಳೆದಂತೆ ವ್ಯರ್ಥವಾಯಿತು. ಯಾತಕ್ಕೆ ಮಳೆ ಹೋದವೋ ಎಂದು ಕೃಷಿಕರು ಮಳೆಗಾಗಿ ಮತ್ತೆ ಮುಗಿಲತ್ತ ನೋಡುತ್ತ ಕಂಗಾಲಾದರು. ಕೆರೆ ಮೂಕಸಾಕ್ಷಿಯಾಗಿ ಉಳಿಯಿತು.

ಮೊನ್ನೆ ಗೌರಿ - ಗಣೇಶನ ಹಬ್ಬದ ಮುನ್ನಾ ದಿನಗಳಂದು ಬೆಂಗಳೂರಿನ ಬೀದಿಗಳುದ್ದಕ್ಕೂ ಬೇಕಾದಷ್ಟು ಕಡೆ ಟನ್ನುಗಟ್ಟಲೇ ತೂಗಬಲ್ಲ ದೊಡ್ಡ ದೊಡ್ಡ ಮಣ್ಣಿನ ಗಣಪತಿಗಳು ಕಾದು ಕೂತಿದ್ದನ್ನು ನೋಡಿ ಅಲಸೂರು ಕೆರೆಯ ಬಗ್ಗೆ ಕನಿಕರ ಮೂಡಿತು. ಯಾಕೆಂದರೆ ಇತ್ತೀಚೆಗಷ್ಟೇ ಮಿಲಿಟರಿಯವರು ಅದರ ಹೂಳೆತ್ತಿದ್ದರು.

ಈರಪ್ಪ ಎಂ. ಕಂಬಳಿ
ಸಂಶೋಧನಾಧಿಕಾರಿ, ಭಾಷಾಂತರ ನಿರ್ದೇಶನಾಲಯ,
ಕಾವೇರಿ ಭವನ 'ಎಫ್' – ಬ್ಲಾಕ್, ಬೆಂಗಳೂರು – ೫೬೦ ೦೦೯.



**ಶ್ರದ್ಧಾಂಜಲಿ**

'ಮಾನಸಿಕ ಸಮಸ್ಯೆಗಳಿಗೆ 'ಮನಸ್ಸು' ಇಲ್ಲದ ಮಾರ್ಗ', 'ಈ ವರ್ತನೆಗಳು ನಿಮ್ಮಲ್ಲಿ ಎಷ್ಟಿವೆ' ಮತ್ತು 'ಮಡದಿ ಮತ್ತೊಬ್ಬ ಚೆಲುವಗೆ' – ಮುಂತಾದ ಅತ್ಯಂತ ಜನಪ್ರಿಯ ಕೃತಿಗಳ ಲೇಖಕರಾದ ಡಾ|| ಮೀನಗುಂಡಿ ಸುಬ್ರಹ್ಮಣ್ಯ ನಿಧನರಾಗಿದ್ದಾರೆ. ಗೆಸ್ಟಾಲ್ಟ್ ಥೆರಪಿಯಂಥ ಅಪರಿಚಿತ ವಿಷಯದ ಬಗ್ಗೆ ಅನಾಮಧೇಯ ಲೇಖಕ ಬರೆದ ಕೃತಿಯನ್ನು ಪ್ರಕಟಿಸಿದ ನವಕರ್ನಾಟಕವನ್ನು ಸದಾ ಸ್ಮರಿಸುತ್ತಿದ್ದ ಸ್ನೇಹ ಜೀವಿ, ಸರಳ ವ್ಯಕ್ತಿ ಅವರಾಗಿದ್ದರು. ಅವರಿಗೆ ನಮ್ಮ ನಮನ.




ಚುನಾವಣೆ! ಚುನಾವಣೆ!
ಮೋದಿ


ROL
FUEL
ದೇಶ
ಪೆಟ್ರೋಲ್ ಬಂಕ್ ಹಗರಣ


ವಿಜಯ ಮಲ್ಯ
ದಳ (ಯು)
ರಾಷ್ಟ್ರೀಯ ಉಪಾಧ್ಯಕ್ಷ


ದಳ ಪರಿವಾರ ವಿಲೀನ-ವಾಗಲಿ


ಭಯೋತ್ಪಾದನೆ
ಕಾಶ್ಮೀರ ಚುನಾವಣೆ

# ಇವು ಸುಧಾರಣೆಗಳೇ ?

*ಇದೇ ಆಗಸ್ಟ್ ಮೂರರಂದು ದಕ್ಷಿಣ ಕೊರಿಯಾದಲ್ಲಿ ಸಹಸ್ರಾರು ರೈತರು ಮತ್ತು ಅವರ ಬೆಂಬಲಿಗರು ಬೀದಿಗಿಳಿದು ಅವರ ಸರ್ಕಾರದ ನೀತಿಯ ವಿರುದ್ಧ ಚುರುಕಾದ ಹೋರಾಟ ನಡೆಸಿದರು. ಏತಕ್ಕಾಗಿ ಗೊತ್ತೇ ? ಹೊರದೇಶಗಳಿಂದ ಬೆಳ್ಳುಳ್ಳಿ ಆಮದು ಮಾಡಿಕೊಂಡು ಸ್ಥಳೀಯ ಬೆಳೆಗಾರರ ಕತ್ತು ಕುಯ್ಯಲಾಗಿದೆ ಎಂಬ ಕಾರಣಕ್ಕಾಗಿ. ಭಾರತದಲ್ಲಿ ಕತ್ತು ಕುಯ್ಯಲು ಸರ್ಕಾರ ಒಂದಲ್ಲ , ನೂರು ಗರಗಸಗಳನ್ನು ಪ್ರಯೋಗಿಸುತ್ತಿದೆ.*

ನಮ್ಮ ರಾಷ್ಟ್ರದಲ್ಲಿ ಜಾಗತೀಕರಣ, ಖಾಸಗೀಕರಣ ಹಾಗೂ ಉದಾರೀಕರಣ (ತ್ರಿಕರಣ ಶುದ್ಧಿಯಿಲ್ಲದ ತ್ರಿ-ಕರಣ) ನೀತಿಗಳು ಜಾರಿಯಾಗಿ ಸುಮಾರು ಹನ್ನೊಂದು ವರ್ಷಗಳಾದವು. ಎಲ್ಲಾ ಕ್ಷೇತ್ರಗಳಲ್ಲೂ ಸುಧಾರಣೆಗಳನ್ನು ತರಬೇಕೆಂಬುದು ಇವುಗಳ ಉದ್ದೇಶವಾಗಿತ್ತು. ಪ್ರಥಮವಾಗಿ ಕಾಂಗ್ರೆಸ್ಸಿನ ನರಸಿಂಹರಾಯರ ಸರ್ಕಾರ ಇವುಗಳನ್ನು ಜಾರಿ ಮಾಡಿತ್ತು. ನಂತರ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದ ಸರ್ಕಾರಗಳು ಈ ನೀತಿಗಳನ್ನು ಮುಂದುವರಿಸಿಕೊಂಡು ಹೋದವು.

ಸುಧಾರಣೆ ಎಂದರೆ ಏನು ?

ಇರುವ ಸ್ಥಿತಿ-ಗತಿ, ವಿಧಾನಗಳ ಉತ್ತಮಪಡಿಸು ವಿಕೆಯೇ ಸುಧಾರಣೆ. ಅಧಿಕಾರದ ಚುಕ್ಕಾಣಿ ಹಿಡಿದಿರುವ ಸರ್ಕಾರದಿಂದ ಜಾರಿಯಾಗುವ ಸುಧಾರಣಾ ಕ್ರಮಗಳು ಸಮಷ್ಟಿಯ ಹಿತದಲ್ಲಿರಬೇಕು. ಅವುಗಳಿಂದ ಸಾಮಾನ್ಯ ಜನರ ಜೀವನಮಟ್ಟದಲ್ಲಿ ಗುರುತಿಸುವಂತಹ ಇತ್ಯಾತ್ಮಕ ಬದಲಾವಣೆಗಳಾಗಬೇಕು. ಒಂದು ದಶಕದ ನಂತರ ಈ ಸುಧಾರಣೆಗಳ ಬಗ್ಗೆ ವ್ಯಾಖ್ಯೆ ಮಾಡಿದಾಗ ಕಂಡುಬರುವ ವಾಸ್ತವ ಸಂಗತಿಗಳು ಆಶಾದಾಯಕವಾಗಿಲ್ಲ. ಕೆಲವು ಕ್ಷೇತ್ರಗಳ ವಸ್ತುಸ್ಥಿತಿಯತ್ತ ಗಮನಹರಿಸೋಣ.

ಕೈಗಾರಿಕಾ ಉತ್ಪಾದನೆ ಕುಂಠಿತಗೊಳ್ಳುತ್ತಾ ಸಾಗುತ್ತಿದೆ. ದೊಡ್ಡ ಕೈಗಾರಿಕಾ ಘಟಕಗಳೇ ಗಂಭೀರ ಸ್ಥಿತಿಯನ್ನು ಎದುರಿಸುತ್ತಿವೆ. ಇತ್ತೀಚಿನ ಆರ್ಥಿಕ ಸರ್ವೇಕ್ಷಣದ ಪ್ರಕಾರ ಅಪಾರ ಸಂಖ್ಯೆಯ ಕೈಗಾರಿಕಾ ಘಟಕಗಳು ಮುಚ್ಚಿವೆ, ಕಾರ್ಮಿಕರು ಹಾಗೂ ಉದ್ಯೋಗಿಗಳು ಕೆಲಸವನ್ನು ಕಳೆದು ಕೊಂಡಿದ್ದಾರೆ. ೩೧ನೇ ಮಾರ್ಚ್ ೨೦೦೧ರ ಅಂಕಿ-ಸಂಖ್ಯೆಗಳ ಅನ್ವಯ ೨,೫೨,೯೪೭ ದೊಡ್ಡ, ಮಧ್ಯಮ ಮತ್ತು ಸಣ್ಣ ಕೈಗಾರಿಕಾ ಘಟಕಗಳು ರೋಗಗ್ರಸ್ತವಾಗಿದ್ದು, ಅವುಗಳಲ್ಲಿ ಅನೇಕವು ಕದಗಳನ್ನು ಮುಚ್ಚಿವೆ. ತೀವ್ರವಾದ ಆಘಾತಕ್ಕೊಳಗಾಗಿರುವುದು ಸಣ್ಣ ಕೈಗಾರಿಕೆಗಳು. ಒಂದು ಅಂದಾಜಿನ ಪ್ರಕಾರ ಘಟಕಗಳ ಮುಚ್ಚುವಿಕೆ, ಸ್ವಯಂ ನಿವೃತ್ತಿ ಯೋಜನೆ ಹಾಗೂ ಸಿಬ್ಬಂದಿ ಕಡಿತಗಳಿಂದ ಸುಮಾರು ಎರಡು ಕೋಟಿ ನೌಕರರು ಆರ್ಥಿಕ ಸುಧಾರಣೆಗಳು ಜಾರಿಯಾದ ನಂತರ ತೀವ್ರ ಸಂಕಷ್ಟಕ್ಕೆ ಒಳಗಾಗಿದ್ದಾರೆ. ಕಳೆದ ಎರಡು ವರ್ಷಗಳಲ್ಲಿ ಕಾರ್ಖಾನೆಗಳಲ್ಲಿ ದುಡಿಯುತ್ತಿದ್ದ ೭ ಲಕ್ಷ ಕಾರ್ಮಿಕರು ಕೆಲಸವನ್ನು ಕಳೆದುಕೊಂಡಿದ್ದಾರೆ. ಇದರ ಜೊತೆಗೆ ಕೇಂದ್ರ ಸರ್ಕಾರ ತನ್ನ ಸಿಬ್ಬಂದಿಯನ್ನು ಶೇ. ೧೦ರಷ್ಟು ಇಳಿಸುವುದಾಗಿ ಘೋಷಿಸಿದೆ. ಇತ್ತೀಚೆಗೆ ಸಾರ್ವಜನಿಕ ಕ್ಷೇತ್ರದ ಉದ್ಯಮಗಳಲ್ಲಿ ಸುಮಾರು ೪೦,೦೦೦ ನೌಕರರನ್ನು ಸ್ಥಳಾಂತರಿಸಲಾಗಿದೆ. ನಮ್ಮ ದೇಶದ ನೌಕರರ ಸಂಖ್ಯೆಯಲ್ಲಿ ಸುಮಾರು ಶೇ. ೫ರಷ್ಟು ಇಳಿತ ಕಂಡುಬಂದಿದೆಯೆಂದು ಕೇಂದ್ರ ಅಂಕಿ-ಅಂಶಗಳ ಸಂಸ್ಥೆಯ ವಾರ್ಷಿಕ ವರದಿಯಲ್ಲಿ ಉಲ್ಲೇಖಿಸಲಾಗಿದೆ. ಕಳೆದ ವರ್ಷ ಇದು ಶೇ. ೩ರಷ್ಟಿತ್ತು. ಉದ್ಯೋಗದ ರಂಗದಲ್ಲಿ ಶೇ. ೮ರಷ್ಟು ಇಳಿತ ಎರಡು ವರ್ಷಗಳಲ್ಲಾಗಿರುವುದು ಆತಂಕಕಾರಿ ವಿಷಯ.

ಮುಂದಿನ ೧೦ ವರ್ಷಗಳಲ್ಲಿ ಸುಮಾರು ೭೦ ಮಿಲಿಯ ನಿರುದ್ಯೋಗಿಗಳ ಸೇರ್ಪಡೆಯಾಗಬಹುದು. ಕೃಷಿ ಕ್ಷೇತ್ರ ದಲ್ಲಿ ಹೊಸಬರಿಗೆ ಉದ್ಯೋಗ ದೊರಕುವುದು ಕಷ್ಟದ ವಿಚಾರವೇ ಸರಿ. ಈ ಕ್ಷೇತ್ರಕ್ಕೂ ಅದರದೇ ಆದ ಇತಿಮಿತಿಗಳಿವೆ. ಹೀಗೆ ನಮ್ಮಲ್ಲಿ ಉದ್ಯೋಗರಹಿತ ವೃದ್ಧಿಯಿದೆ. ನ್ಯಾಷನಲ್ ಸ್ಯಾಂಪಲ್ ಸರ್ವೆಯ ಅನ್ವಯ ನಿರುದ್ಯೋಗದ ದರ ೧೯೯೩-೯೪ರಲ್ಲಿ ಶೇ. ೬ರಷ್ಟಿತ್ತು. ಅದು ೧೯೯೯-೨೦೦೦ದಲ್ಲಿ ಶೇ. ೭ಕ್ಕೆ ಏರಿದೆ. ಈ ವಿಷಯವನ್ನು ಕೇಂದ್ರ ಸರ್ಕಾರವೇ ನಿಯೋಜಿಸಿದ್ದ ಎರಡನೆ ಕಾರ್ಮಿಕ ಆಯೋಗದ ವರದಿಯಲ್ಲಿ ಪ್ರಸ್ತಾಪಿಸಲಾಗಿದೆ.

ಖಾಸಗಿ ಕಾರ್ಪೊರೇಟ್ ರಂಗದಲ್ಲಂತೂ ಉದ್ಯೋಗಿ ಗಳ ಸಂಖ್ಯೆಯಲ್ಲಿ ಕಡಿತ ಮಾಡುವುದರತ್ತ 'ನಾ ಮುಂದೆ, ತಾ ಮುಂದೆ' ಎಂಬ ಸ್ಪರ್ಧೆ ಪ್ರತಿಕಾರವೇನೋ ಎಂಬಂತೆ ಜರುಗುತ್ತಿದೆ. ಟೆಕ್ಸ್‌ಟೈಲ್ ಕ್ಷೇತ್ರದಲ್ಲೇ ಸುಮಾರು ೩,೯೦,೦೦೦ ಕಾರ್ಮಿಕರು ಕೆಲಸ ಕಳೆದುಕೊಂಡಿದ್ದಾರೆ. ಟಿಸ್ಕೊ, ಟೆಲ್ಕೋ, ಬಜಾಜ್ ಆಟೋ, ವೋಲ್ಟಾಸ್, ಎ.ಸಿ.ಸಿ. ಮತ್ತು ಯೂನೀಲಿವರ್‌ನಂತಹ ಬೃಹತ್ ಕೈಗಾರಿಕಾ ಘಟಕಗಳು ಸುಮಾರು ೫೦,೦೦೦ ನೌಕರರನ್ನು ಮನೆಗಟ್ಟಿವೆ. ಹೆಚ್ಚಿನ ಸುದ್ದಿಯಲ್ಲಿರುವ ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಸುಮಾರು ೧೦,೦೦೦ ಕೆಲಸಗಳು ಕಡಿಮೆಯಾಗಿವೆ.

ಕೇಂದ್ರ ಸರ್ಕಾರ ಬಂಡವಾಳ ಹಿಂತೆಗೆತದ ಕಾರ್ಯಕ್ರಮವನ್ನು ತ್ವರಿತವಾಗಿ ಜಾರಿಮಾಡುತ್ತಾ ಬಂದಿದೆ. ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ವಿತ್ತನಿಧಿ, ಹಾಗೂ ಇತರ ಜಾಗತಿಕ ಸಂಸ್ಥೆಗಳ ಒತ್ತಡಗಳಿಗೆ ಮಣಿದು ಈ ನೀತಿ ಅನುಷ್ಠಾನಕ್ಕೆ ಬಂದಿರುವುದು ಈಗ ತಿಳಿದಿರುವ ವಿಚಾರವೇ. ಲಾಭ ಮಾಡುತ್ತಿರುವ ಸಾರ್ವಜನಿಕ ಕ್ಷೇತ್ರದ ಉದ್ಯಮಗಳನ್ನು ಖಾಸಗಿಯವರಿಗೆ ಮಾರಾಟ ಮಾಡುತ್ತಿರುವುದು ಕೇಂದ್ರ ಸರ್ಕಾರದ ನಿಲುವು ಯಾರ ಪರವಾಗಿದೆ ಎಂಬುದನ್ನು ಸಾಬೀತುಪಡಿಸುತ್ತದೆ.



'ಸರ್ಕಾರಿ ನೌಕರಿ' ದೊರಕಿತು ಅಂದ್ರಲ್ಲಾ ಸಾರ್... ಅದ್ಕೇ ಕೇಳಿದೆ ನಿಮ್ಮ ಶರ್ಟ್‌ಗೆ ಈಗ ದೊಡ್ಡ ಜೇಬು ಇಡಲೀ ಅಂತ?

ಸಾರ್ವಜನಿಕ ಕ್ಷೇತ್ರದ ವಿಚಾರದ ಬಗ್ಗೆ ತೀವ್ರ ವಿರೋಧ ವ್ಯಕ್ತಪಡಿಸುವ ಆಳುವ ವರ್ಗ, ಆ ಕ್ಷೇತ್ರದಲ್ಲಿರುವ ಉದ್ಯಮಗಳ ಆರೋಗ್ಯದ ಬಗ್ಗೆ ಸೂಕ್ತವಾದ, ಜರೂರಾದ, ಸಕಾರಾತ್ಮಕ ಕಾರ್ಯಕ್ರಮ ಗಳನ್ನು ಜಾರಿ ಮಾಡಲು ತಯಾರಿಲ್ಲ. ಖಾಸಗಿ ಕ್ಷೇತ್ರದ ಕಂಪನಿಗಳಿಂದ ಸುಮಾರು ೬೨,೦೦೦ ಕೋಟಿ ರೂ. ತೆರಿಗೆಗಳು ಬಾಕಿಯಿವೆ. ಆದರೆ ರಾಷ್ಟ್ರದ ಬೊಕ್ಕಸಕ್ಕೆ ಸಾರ್ವಜನಿಕ ಕ್ಷೇತ್ರದಿಂದ ಸಂದಾಯವಾಗಿರುವ ಮೊತ್ತ ದಲ್ಲಿ ಸುಮಾರು ರೂ. ೪೮೨೧ ಕೋಟಿ ಜಾಸ್ತಿಯಾಗಿರು ವುದು ಗಮನಾರ್ಹವಾದ ಅಂಶ. ಸಾರ್ವಜನಿಕ ಕ್ಷೇತ್ರದ ಘಟಕಗಳ ಬಗ್ಗೆ ಆರೋಪ ಮಾಡುವ ಶಕ್ತಿಗಳು, ಮಾಧ್ಯಮಗಳನ್ನು ಸೇರಿ, ಈ ಅಂಶವನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.

ಸಾರ್ವಜನಿಕ ಕ್ಷೇತ್ರದ ಬ್ಯಾಂಕ್‌ಗಳಲ್ಲಿರುವ ಕೆಟ್ಟ ಸಾಲ (ಅನುತ್ಪಾದಕ ಸ್ವತ್ತುಗಳು)ಗಳ ಮೊತ್ತವಂತೂ ಸುಮಾರು ರೂ. ೮೦,೦೦೦ ಕೋಟಿಯಷ್ಟಿದೆ. ದೇಶದ ದೊಡ್ಡ

ಮ. ಶ್ರೀ. ಮುರಳಿಕೃಷ್ಣ

ದೊಡ್ಡ ಉದ್ಯಮಿಗಳಲ್ಲಿ ಹಲವರು ಬ್ಯಾಂಕ್‌ಗಳಿಂದ ತೆಗೆದುಕೊಂಡ ಸಾಲವನ್ನು ಮರುಪಾವತಿ ಮಾಡಿಲ್ಲ. ಸರ್ಕಾರಕ್ಕೂ ಅಂತಹವರ ಮೇಲೆ ಕಠಿಣ ಕ್ರಮ ಜರುಗಿಸುವ ಮನಸ್ಸಿಲ್ಲ. ಬಡ ಬೋರೇಗೌಡ ಸಣ್ಣ ಮೊತ್ತದ ಸಾಲ ವಾಪಸ್ಸು ಮಾಡದಿದ್ದರೆ ಆತನ ಮೇಲೆ ಕ್ರಮ ತೆಗೆದುಕೊಳ್ಳಲಾಗುತ್ತೆ. ಆದರೆ ದೊಡ್ಡವರೆನಿಸಿಕೊಂಡವರ ಸಾಲಗಳು ಮರುಪಾವತಿಯಾಗದಿದ್ದರೂ, ಅವರು ರಾಜಾರೋಷವಾಗಿ ಓಡಾಡುತ್ತಿದ್ದಾರೆ. ನಮ್ಮ ನೆರೆಯ ದೇಶವಾದ ಪಾಕಿಸ್ತಾನದಲ್ಲಿ ಸುಮಾರು ಎರಡು ವರ್ಷಗಳ ಹಿಂದೆ ಇಂತಹ ಸುಸ್ತಿದಾರರ ವಿರುದ್ಧ ಕೆಲವು ಕಠಿಣ ಕ್ರಮಗಳನ್ನು ತೆಗೆದುಕೊಳ್ಳಲಾಗಿತ್ತು. ಅಂತಹ ಮಂದಿ ದೇಶದಿಂದ ಹೊರಗೆ ಹೋಗದಂತೆ ನೋಡಿಕೊಳ್ಳ ಲಾಗಿತ್ತು. ಪ್ರಜಾಪ್ರಭುತ್ವ ರಾಷ್ಟ್ರ ಎಂಬ ಹೆಗ್ಗಳಿಕೆ ಇರುವ ಭಾರತವಂತೂ ಈ ದಿಶೆಯಲ್ಲಿ ತೀರಾ ಹಿಂದೆ ಬಿದ್ದಿದೆ. ಇದರಿಂದ ಯಾವ ಶಕ್ತಿಗಳು ನಮ್ಮ

ಪ್ರಜಾಪ್ರಭುತ್ವದ ವ್ಯವಸ್ಥೆಯನ್ನು ನಿಯಂತ್ರಿಸುತ್ತಿವೆ ಎನ್ನುವುದು ನಿಚ್ಚಳ. ಆದರೆ ಇದೇ ಬ್ಯಾಂಕ್‌ಗಳಲ್ಲಿ ಠೇವಣಿಯ ಮೇಲಿನ ಬಡ್ಡಿ ದರಗಳನ್ನು ಮಾತ್ರ ಆಗಾಗ ಕಡಿಮೆ ಮಾಡಲಾಗುತ್ತಿದೆ.

ಕೃಷಿ ಕ್ಷೇತ್ರವೂ ಅನೇಕ ಧಾಳಿಗಳನ್ನು ಎದುರಿಸುತ್ತಿದೆ. ಶೇ. ೬೦ರಷ್ಟು ಜನರಿಗೆ ಉದ್ಯೋಗಾವಕಾಶಗಳನ್ನು ನೀಡುತ್ತಿದ್ದರೂ, ಅದರ ಸ್ಥಿತಿ ತೀರಾ ಕಂಗೆಟ್ಟಿರುವುದು ಸತ್ಯ. ಸಹಾಯಧನವನ್ನು ಹಂತ ಹಂತವಾಗಿ ಕಡಿಮೆ ಮಾಡುತ್ತಿರುವುದು ಅಂತರರಾಷ್ಟ್ರೀಯ ಸಂಸ್ಥೆಗಳಿಗೆ ನಮ್ಮ ರಾಷ್ಟ್ರದ ಸರ್ಕಾರದ ಮೇಲಿರುವ ಹಿಡಿತದ ಕೈಗನ್ನಡಿ. ಮುಂದುವರಿದ ರಾಷ್ಟ್ರಗಳಲ್ಲಿ ಈ ಕ್ಷೇತ್ರಕ್ಕೆ ಅಪಾರ ಮೊತ್ತದ ಸಹಾಯಧನ ಸಂದಾಯವಾಗುತ್ತಿದೆ. ಆದರೆ ತೃತೀಯ ಜಗತ್ತಿನ ದೇಶಗಳಿಗೆ ಮಾತ್ರ ಷರತ್ತುಗಳನ್ನು ಹೇರಲಾಗುತ್ತಿದೆ.

ಆಮದು ನೀತಿಯನ್ನು ಉದಾರೀಕರಿಸುವುದರಿಂದ ಕಡಿಮೆ ದರದ ಕೃಷಿ ಉತ್ಪನ್ನಗಳು ನಮ್ಮ ಮಾರುಕಟ್ಟೆಗಳಿಗೆ ಲಗ್ಗೆ ಹಾಕುತ್ತಿವೆ. ಈ ಬೆಳವಣಿಗೆಗಳಿಂದ ಧೃತಿಗೆಟ್ಟಿರುವ ಕೆಲವು ರೈತರು ಆಂಧ್ರ, ಕರ್ನಾಟಕ ಒರಿಸ್ಸಾ ಹಾಗೂ ಪಂಜಾಬ್ ರಾಜ್ಯಗಳಲ್ಲಿ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಕೃಷಿ ಕೂಲಿಕಾರರ ಪಾಡಂತೂ ತೀರಾ ಶೋಚನೀಯವಾಗಿದೆ.

ನಮ್ಮ ರಾಷ್ಟ್ರದ ಜನತೆಗೆ ಈ ನೀತಿಗಳಿಂದ ಆಗುತ್ತಿರುವ ಹಾನಿಗಳ ಬಿಸಿ ತಟ್ಟುತ್ತಿದೆ. ಮಧ್ಯಮ ವರ್ಗದ ಜನರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ದುಡಿಯುವ ವರ್ಗದ ಮೇಲಿನ ಪ್ರಹಾರಗಳು ಜಾಸ್ತಿಯಾಗಿವೆ. ಅನೇಕ ಬಾರಿ ದುಡಿಯುವ ವರ್ಗ ಈ ನೀತಿಗಳ ವಿರುದ್ಧ ಪ್ರತಿಭಟನೆ ವ್ಯಕ್ತಪಡಿಸಿದೆ. ಆದರೆ ನಮ್ಮನ್ನಾಳುತ್ತಿರುವ ಪ್ರಭುಗಳು ಸ್ವಲ್ಪವೂ ವಿಚಲಿತರಾಗದೆ ಒಂದಾದ ನಂತರ ಒಂದು ನೀತಿಯನ್ನು ಉಗ್ರವಾಗಿ ಜಾರಿ ಮಾಡುತ್ತಿದ್ದಾರೆ. ಜುಲೈ ೧೫, ೨೦೦೧ರಂದು ಕೇಂದ್ರ ಕಾರ್ಮಿಕ ಸಂಘಟನೆಗಳು, ಒಕ್ಕೂಟಗಳು ಹಾಗೂ ಸ್ವತಂತ್ರ ಕಾರ್ಮಿಕ ಸಂಘಗಳು ರಾಷ್ಟ್ರಮಟ್ಟದ ಸಭೆಯನ್ನು ಆಯೋಜಿಸಿದ್ದವು. ಸುಮಾರು ೫೦೦೦ ಪ್ರತಿನಿಧಿಗಳು ಇದರಲ್ಲಿ ಭಾಗವಹಿಸಿದ್ದರು. ಈ ತ್ರಿ-ಕರಣ ನೀತಿಗಳ ದುಷ್ಪರಿಣಾಮಗಳ ಬಗ್ಗೆ ಚರ್ಚೆ ನಡೆಸಿ ಕೆಲವು ಹಕ್ಕೊತ್ತಾಯಗಳನ್ನು ಮಂಡಿಸಲಾಯಿತು. ಆಡಳಿತ ನಡೆಸುತ್ತಿರುವ ಬಿ.ಜೆ.ಪಿ.ಯ ಕಾರ್ಮಿಕ ಭಾಗದ ಭಾರತೀಯ ಮಜ್ದೂರ್ ಸಂಘ ಹೊರತುಪಡಿಸಿ ಬಹುತೇಕ ಎಲ್ಲಾ ಕಾರ್ಮಿಕ ಸಂಘಟನೆಗಳು ಈ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದವು. ಆದರೆ ಇದೇ ವರ್ಷದ ಏಪ್ರಿಲ್ ೧೬ರಂದು ಜರುಗಿದ ಅಖಿಲ ಭಾರತ ಮುಷ್ಕರದಲ್ಲಿ ಬಿ.ಎಂ.ಎಸ್. ಭಾಗವಹಿಸಿತ್ತು.

ಹೀಗೆ ದುಡಿಯುವ ವರ್ಗ ಮತ್ತು ಸಾಮಾನ್ಯ ಜನರಿಗೆ ಈ ತ್ರಿ-ಕರಣದ ನೀತಿಗಳ ಫಲಗಳಾದ ಸುಧಾರಣೆಗಳು ಕಂಟಕಪ್ರಾಯವಾಗಿವೆ. ಈ ಸುಧಾರಣೆಗಳು ನಿಜವಾದ ಅರ್ಥದಲ್ಲಿ ಸುಧಾರಣೆಗಳಾಗಿವೆಯೇ ? ನಮ್ಮ ದೇಶದ ನಾಗರಿಕರು ಇದಕ್ಕೆ ಸ್ವಾನುಭವದಿಂದ ಉತ್ತರ ಕೊಡಬೇಕಾಗಿದೆ ಮತ್ತು ಜನಹಿತದ ಆಶಯವನ್ನು ಈಡೇರಿಸಲು ಮಧ್ಯಪ್ರವೇಶ ಮಾಡಬೇಕಾಗಿದೆ.

ಮ. ಶ್ರೀ. ಮುರಳಿಕೃಷ್ಣ
ನಂ. ೧೦೦, ೨ನೇ 'ಎ' ಕ್ರಾಸ್, ಗವಿಪುರಂ ಬಡಾವಣೆ,
ಬೆಂಗಳೂರು-೫೬೦ ೦೧೯

# ಆಲದ ಮರಕ್ಕೆ ಸುತ್ತು ಬರುವ ಈ ಜನರು !

**ಹೊ**ಸತಾಗಿ ನೇಮಕಗೊಂಡ ಕೇಂದ್ರೀಯ ಮಂತ್ರಿಯೊಬ್ಬರು ಜುಲೈ ೩ರಂದು ಅಧಿಕಾರದ ಗದ್ದುಗೆಯನ್ನೇರುವ ಮೊದಲು ಗದ್ದುಗೆ ಮತ್ತು ಮೇಜಿಗೆ ಭಟ್ಟರೊಬ್ಬರಿಂದ ಪೂಜೆ ಮಾಡಿಸಿದ ದೃಶ್ಯ ದೂರದರ್ಶನದ ರಾಷ್ಟ್ರೀಯ ಚಾನಲಿನಲ್ಲಿ ಮೂಡಿಬಂತು.

ಹಲವು ದಿನಗಳ ಹಿಂದೆ ರಾಜ್ಯದ ಮಂತ್ರಿಯೊಬ್ಬರು ನಗರದ ಮೂಲೆಯೊಂದರಲ್ಲಿ ಕೊಳಚೆ ನಿರ್ಮೂಲನಾ ಕಾರ್ಯಕ್ರಮವನ್ನು ಆರಂಭಿಸುವ ಮೊದಲು ಪುರೋಹಿತರಿಂದ ಕೊಳಚೆ ಜಾಗಕ್ಕೆ ಪವಿತ್ರ ಜಲವನ್ನು ಪ್ರೋಕ್ಷಿಸಿ ಪೂಜೆ ಮಾಡಿಸಿ, ಆಮೇಲೆ ಗುದ್ದಲಿ ಪೂಜೆ ಮಾಡಿದ ಚಿತ್ರ ದೂರದರ್ಶನದ ಸಂಜೆ ೭ರ ಪ್ರಾಂತೀಯ ಸಮಾಚಾರದಲ್ಲಿ ಕಂಡುಬಂತು.

ಉತ್ತರ ಕರ್ನಾಟಕದ ಒಂದು ಕಡೆ ಹಲವು ತಿಂಗಳುಗಳಿಂದ ಎಣ್ಣೆ ಇಲ್ಲದೆ ದೀಪವೊಂದು ಉರಿಯುತ್ತಿದೆ ಎಂಬ ಸುದ್ದಿ ಸರ್ವತ್ರ, ಬಹುಬೇಗನೆ ಹಬ್ಬಿತು. ಜನರು ಕರ್ನಾಟಕದ ಮೂಲೆ ಮೂಲೆಗಳಿಂದ ಮಾತ್ರವಲ್ಲ, ನೆರೆಯ ರಾಜ್ಯಗಳಿಂದಲೂ ತಂಡೋಪತಂಡವಾಗಿ ಬಂದು, ದೀಪಕ್ಕೆ ಕೈ ಮುಗಿದು, ಕಾಣಿಕೆ ಸಲ್ಲಿಸಲು ಆರಂಭಿಸಿದರು. ಎಣ್ಣೆ ಇಲ್ಲದೆ ಉರಿಯುತ್ತಿರುವ ಗುಟ್ಟೂ ಆಮೇಲೆ ಬಯಲಾಯಿತು, ಬಿಡಿ !

ಕರ್ನಾಟಕದಲ್ಲೇ ಇನ್ನೊಂದು ಕಡೆ ಆಲದ ಮರದ ಬುಡದಲ್ಲಿ ಘುಣಾಕ್ಷರ ನ್ಯಾಯದಂತೆ ಗಣಪತಿಯ ಸೊಂಡಿಲನ್ನು ಹೊತ್ತುಕೊಂಡ ಹುತ್ತವೊಂದು ತಲೆ ಎತ್ತಿ ನಿಂತಿತು. ಗಣಪತಿಯನ್ನು ಪೂಜಿಸಲು ಜನರು ಪ್ರತಿ ದಿನ ಸಾಲುಗಟ್ಟಿ ನಿಂತರು.

ಕೋಲಾರದ ಹತ್ತಿರ ಯುವಕನೊಬ್ಬ ಪ್ರತಿರಾತ್ರಿ, ಹತ್ತು ಗಂಟೆಯ ಸಮಯದಲ್ಲಿ ಹಾವಿನಂತೆ ತೆವಳುತ್ತಾ, ಬುಸುಗುಟ್ಟುತ್ತಾ, ನಾಗದೇವತೆ ನನ್ನ ಮೇಲೆ ಆವಾಹನೆಯಾಗಿದೆ ಎಂದು ಹೇಳುತ್ತಾ, ನೂರಾರು ಮಂದಿಯನ್ನು ಆಕರ್ಷಿಸಲು ಆರಂಭಿಸಿದ. ಸರಿ, ಮಕ್ಕಳು, ಮಹಿಳೆಯರು, ಆ ವ್ಯಕ್ತಿಗೆ ಆರತಿ ಎತ್ತಲು, ಹಾಲು ಕುಡಿಸಲು, ನೈವೇದ್ಯವಾಗಿ ಮೊಟ್ಟೆಗಳನ್ನು ನೀಡಲು ಆರಂಭಿಸಿದರು. ಗಂಡಸರು ಒಂದು ಹೆಜ್ಜೆ ಮುಂದಕ್ಕೆ ಹೋಗಿ, ನಾಗದೇವತೆಗೆ ದೇವಸ್ಥಾನವೊಂದನ್ನು ನಿರ್ಮಿಸಲು ತೊಡಗಿದ್ದಾರಂತೆ. ಹಾವಿನಂತೆ ವರ್ತಿಸುವ ಆ ಮಾನವನ ದರ್ಶನಕ್ಕೆ ಜನರು ಜಮಾಯಿಸುತ್ತಿದ್ದಾರಂತೆ.

ಮೊನ್ನೆ ಮೊನ್ನೆ ನೇಪಾಳದ ದೊರೆ ಪತ್ನಿ ಪುತ್ರಿ ಸಮೇತರಾಗಿ ಭಾರತಕ್ಕೆ ರಾಜಕೀಯ ಭೇಟಿ ಇತ್ತು, ಸ್ವದೇಶಕ್ಕೆ ಹಿಂತೆರಳುವ ಮೊದಲು ಸರ್ವದೋಷ, ಸರ್ವಪಾಪ ಪರಿಹಾರಕ್ಕಾಗಿ ಕಾಳೀ ಮಂದಿರದಲ್ಲಿ ಎರಡು ಎಮ್ಮೆಗಳನ್ನೂ ಮರುದಿನ ಇನ್ನೊಂದು ಮಂದಿರದಲ್ಲಿ ಆಡನ್ನು ಬಲಿ ಇತ್ತು ಪುನೀತರಾಗಿ ಹೊರಟುಹೋದರು ! ದೇವಸ್ಥಾನಗಳಲ್ಲಿ ಪಶುಬಲಿ ಬೇಡ ಎನ್ನುವ ಭಾರತ ಸರ್ಕಾರ ಕಣ್ಣು, ಕಿವಿ, ಮೂಗು ಮುಚ್ಚಿ ಕುಳಿತುಕೊಂಡಿದ್ದಿತು.

ನಮ್ಮ ತೋಟದ ಪಕ್ಕದಲ್ಲಿ ಬೇರೆ ಪ್ರಾಂತದಿಂದ ಬಂದ ಕುಟುಂಬವೊಂದಿದೆ. ಗಂಡ ಹೆಂಡತಿ, ಹೆಂಡತಿಯ ಮುದಿ ತಂದೆ ಮತ್ತು ಮೂರು ಹೆಣ್ಣು ಮಕ್ಕಳು. ಗಂಡಿಗೆ ಕೇಂದ್ರ ಸರ್ಕಾರದ ಆಫೀಸೊಂದರಲ್ಲಿ ಸಣ್ಣದೊಂದು ಕೆಲಸ. ಉಳಿದವರು ನಿರಕ್ಷರ ಕುಕ್ಷಿಗಳು. ವಿಪರೀತ ಕುಡಿತದ ಚಟಕ್ಕೆ ಬಲಿಯಾದ ಗಂಡು ಒಂದು ದಿನ ರಾತ್ರಿ ಹತ್ತಿರದಲ್ಲಿದ್ದ ಹಲಸಿನ ಮರಕ್ಕೇರಿ ಕುತ್ತಿಗೆಗೆ ಹಗ್ಗ ಬಿಗಿದುಕೊಂಡ. ಮರುದಿನ ತನ್ನವರು ಎಂಬವರು ಯಾರೂ ಇಲ್ಲದಿದ್ದುದರಿಂದ ಆಫೀಸಿನ ಜನರೇ ಬಂದು ಶವಸಂಸ್ಕಾರ ಮಾಡಿಹೋದರು. ಕೆಲವು ದಿನಗಳ ನಂತರ ಗಂಟಲು ಕ್ಯಾನ್ಸರಿನಿಂದ ನರಳುತ್ತಿದ್ದ ಮುದುಕನೂ ಹೊರಟುಹೋಗಿಬಿಟ್ಟ. ಈಗ ಕುಟುಂಬ ಸಂಪೂರ್ಣ ಅನಾಥವಾಯಿತು. ಸುತ್ತಮುತ್ತಲೂ ವಾಸಿಸುತ್ತಿದ್ದ ಅದೇ ಪ್ರಾಂತದ ಹತ್ತು ಮಂದಿ ಅನ್ಯಮತಸ್ಥರು ಇವರ ಸಹಾಯಕ್ಕೆ ಬಂದರು. ಮುಖಂಡನೊಬ್ಬ ದೇವ ಮಂದಿರದ ಪುರೋಹಿತನೊಬ್ಬನನ್ನು ಕರೆಸಿ ಎಲ್ಲರ ಮೇಲೂ ಪವಿತ್ರ ಜಲವನ್ನು ಪ್ರೋಕ್ಷಿಸಿ, ನಿಮ್ಮ ಎಲ್ಲ ಪಾಪಗಳೂ ಪರಿಹಾರವಾಗಿ ಸ್ವರ್ಗಪ್ರಾಪ್ತಿಯಾಗುತ್ತದೆ ಎಂದು ಹರಸಿ, ಮತಾಂತರಗೊಳಿಸಿ ಹೊರಟುಹೋದ. ಇವರೀಗ ಅಲ್ಲಿಯವರಿಗೆ ಅನ್ಯಮತಸ್ಥರಾಗಿ ಉಳಿಯಲಿಲ್ಲ, ಕೆಲವು ಸಮಯದ ನಂತರ ಮುಖಂಡನು ವಿಧವೆಯನ್ನು ತನ್ನೊಂದಿಗೆ ಅನೈತಿಕ ಸಂಬಂಧಕ್ಕೆ ಒತ್ತಾಯಿಸಿದ. ವಿಧವೆ ನಿರಾಕರಿಸಿದಳು. ಸಹಾಯ ನಿಂತುಹೋಯಿತು. ಕುಟುಂಬ ಇತೋಭ್ರಷ್ಟಃ ತತೋಭ್ರಷ್ಟವಾಗಿ ಗತಿ ಕಾಣದಾಯಿತು.

ಅನೇಕ ಮಂದಿ ರಾಜಕೀಯ ಪುಢಾರಿಗಳೂ ಸೇರಿ ಭಾರತದ ಜನಸಂಖ್ಯೆಯಲ್ಲಿ ಶೇ. ೮೦ರಷ್ಟು ಜನ ಮೂಢನಂಬಿಕೆಯಲ್ಲಿ ವಿಶ್ವಾಸವಿಟ್ಟು ಕಂಡ ಕಂಡ ದೈವಗಳ, ಭೂತಪ್ರೇತಗಳ, ಜ್ಯೋತಿಷಿಗಳ ಮತ್ತು ಪುರೋಹಿತರ ಆರಾಧಕರಾಗಿರುವಷ್ಟು ಕಾಲ ಈ ದೇಶ ಉದ್ಧಾರವಾಗದು.

ಜನರ ಹಿತದ ಹೆಸರಿನಲ್ಲಿ ಸರ್ಕಾರ ಮಾಡುವ ಕೆಲಸಗಳು ಮಂತ್ರಿಗಳಿಗೆ, ಸರ್ಕಾರಿ ಅಧಿಕಾರಿಗಳಿಗೆ ಹಾಗೂ ಗುತ್ತಿಗೆದಾರರಿಗೆ ಮಾತ್ರ ಲಾಭದಾಯಕವಾಗಿರುತ್ತದೆ. ಸಾಮಾನ್ಯ ಜನರು ಅಜ್ಞಾನವೆಂಬ ಅಂಧಕಾರದಲ್ಲಿ ಬೆಳಕು ಕಾಣದೆ ಹಿರಿಯರು ನೆಟ್ಟು, ಬಿಟ್ಟು ಹೋದ ಆಲದ ಮರಕ್ಕೆ ಸುತ್ತುತ್ತಲೇ ಇರುತ್ತಾರೆ. ಈ ಸುತ್ತಾಟ ಇರುವಷ್ಟು ಕಾಲ ನಮ್ಮ ರಾಜಕೀಯ ಪುರೋಹಿತರಿಗೆ ಮೃಷ್ಟಾನ್ನಕ್ಕೆ ಎಂದೂ ತೊಂದರೆಯಾಗದು. ಅವರಿಗೆ ಬೇಕಾಗಿರುವುದೂ ಅದೇ !

ಎಂ. ವಿ. ಭಟ್, 'ಶ್ರೀ ಮಿತ್ತೂರು',
ಮೇದರಹಳ್ಳಿ, ಚಿಕ್ಕಬಾಣಾವರ, ಬೆಂಗಳೂರು-೫೬೦ ೦೯೦

# ಕಾಂ। ಪಂಪಾಪತಿ ನಾನು ಕಂಡಂತೆ

**ಶಶಿಕಲಾ ಬೆಳಗಲಿ**



*ನಿಧನ : ಜುಲೈ ೩೧, ೨೦೦೨*

ಇದು ಇಪ್ಪತ್ತು ವರ್ಷಗಳ ಹಿಂದಿನ ಮಾತು. ನಾನಾಗ ಇಪ್ಪತ್ತರ ಯುವತಿ. ಜೀವನೋಪಾಯಕ್ಕಾಗಿ ಎಲ್.ಐ.ಸಿ. ಏಜೆಂಟ್ ಆಗಿ ಕಾರ್ಯ ನಿರ್ವಹಿಸುತ್ತಿದ್ದೆ. ಅದೊಂದು ದಿನ ಯಾರೋ ಬಂದು ''ಪಂಪಣ್ಣ ಕರೆಯುತ್ತಿದ್ದಾರೆ, ಪಾರ್ಟಿ ಆಫೀಸಿಗೆ ಬಾ'' ಎಂದು ಕರೆದರು. ಯಾಕೆ ಕರೆಯುತ್ತಿದ್ದಾರೆಂದು ನನಗೂ ಗೊತ್ತಿಲ್ಲ. ದಾವಣಗೆರೆಯ ಅಶೋಕ ರಸ್ತೆಯಲ್ಲಿದ್ದ ಪಕ್ಷದ ಕಚೇರಿಗೆ ಹೋದಾಗ ಜನವೋ ಜನ. ಅಲ್ಲಿ ಕುಳಿತಿದ್ದ ಲುಂಗಿ, ಜುಬ್ಬಾ ಧರಿಸಿದ್ದ ವ್ಯಕ್ತಿಯೇ ಪಂಪಣ್ಣ ಎಂದು ಗೊತ್ತಾಯಿತು. ಅವರು ನನ್ನನ್ನು ಕರೆದು ''ಏನಮ್ಮ ಮುನ್ಸಿಪಾಲ್ಟಿ ಚುನಾವಣೆಗೆ ನಿಲ್ತೀಯಾ'' ಎಂದು ಕೇಳಿದರು. ನಾನು ಮನೆಯಲ್ಲಿ ತಂದೆ, ತಾಯಿಯನ್ನು ವಿಚಾರಿಸಿ ತಿಳಿಸುತ್ತೇನೆ ಎಂದು ಹೇಳಿದೆ.

ನಂತರ ಪಂಪಣ್ಣ ಮನೆಗೂ ಬಂದರು. ನನ್ನ ತಂದೆಯ ಜೊತೆ ಮಾತಾಡಿ ಒಪ್ಪಿಸಿದರು. ಹೀಗಾಗಿ ತುಂಬ ಅನಿರೀಕ್ಷಿತವಾಗಿ ಕಮ್ಯುನಿಸ್ಟ್ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿದ ನಾನು ೧೯೭೪ರ ಜೂನ್‌ನಲ್ಲಿ ಚುನಾಯಿತಳಾದೆ. ಕಮ್ಯುನಿಸ್ಟ್ ಪಕ್ಷದಿಂದ ಒಟ್ಟು ಹದಿನಾಲ್ಕು ಮಂದಿ ಚುನಾಯಿತರಾಗಿದ್ದೆವು. ನಮ್ಮ ಪಕ್ಷಕ್ಕೆ ಕಾಂಗ್ರೆಸ್ ಬೆಂಬಲ ನೀಡಿದುದರಿಂದ ಪಂಪಣ್ಣ ನಗರಾಧ್ಯಕ್ಷರಾಗಿ ಚುನಾಯಿತರಾದರು. ಕರ್ನಾಟಕದ ಮ್ಯಾಂಚೆಸ್ಟರ್ ಎಂಬ ಪ್ರತೀತಿ ಪಡೆದ ದಾವಣಗೆರೆಯನ್ನು ಆಗ ಪತ್ರಿಕೆಗಳು 'ಕರ್ನಾಟಕದ ಮಾಸ್ಕೋ' ಎಂದು ವರ್ಣಿಸಿದವು.

ನಗರಸಭೆ ಚುನಾವಣೆಗೆ ಕೇವಲ ನಾಲ್ಕು ವರ್ಷಗಳ ಹಿಂದೆ ದಾವಣಗೆರೆಯ ಜನಪ್ರಿಯ ಯುವ ಕಾರ್ಮಿಕ ನಾಯಕರಾಗಿದ್ದ ಕಾಮ್ರೇಡ್ ಸುರೇಶ ಮತ್ತು ಕಾಮ್ರೇಡ್ ಶೇಖರಪ್ಪ ಮಾಲೀಕ ವರ್ಗದ ಗೂಂಡಾಗಳಿಂದ ಕೊಲೆಗೀಡಾಗಿದ್ದರು. ಆ ಘಟನೆಯಲ್ಲಿ ಪಂಪಾಪತಿ ಬದುಕಿ ಉಳಿದರು. ಶ್ರಮಜೀವಿ ಆಂದೋಲನಕ್ಕೆ ರಕ್ತದ ಬೆಲೆ ತೆತ್ತು ಪರಿಣಾಮವಾಗಿ ಕಮ್ಯುನಿಸ್ಟರನ್ನು ನಗರಸಭೆಗೆ ಆರಿಸಿ ತಂದು ಜನ ಗೌರವಿಸಿದರು. ದಾವಣಗೆರೆ ಕಾಟನ್ ಮಿಲ್‌ನಲ್ಲಿ ನಾಲ್ಕು ದಶಕಗಳ ಹಿಂದೆ ತಿಂಗಳಿಗೆ ಕೇವಲ ಹನ್ನೊಂದು ರೂಪಾಯಿ ಸಂಬಳಕ್ಕೆ ಕಸ ಗುಡಿಸುವ ಕೆಲಸಕ್ಕೆ ಸೇರಿದ ಪಂಪಣ್ಣ ನಗರಾಧ್ಯಕ್ಷರಾದರು.

ನಾನು ವಾಸಿಸುತ್ತಿದ್ದ ಬೇತೂರು ರಸ್ತೆಯ ಪ್ರದೇಶದಲ್ಲಿ ನೂರಕ್ಕೆ ನೂರರಷ್ಟು ಕಾರ್ಮಿಕರೇ ನೆಲೆಸಿದ್ದರು. ಎಲ್ಲ ಜಾತಿ ಮತಕ್ಕೆ ಸೇರಿದ ಅವರ ನಡುವೆಯೇ ಬೆಳೆದ ನನಗೆ ಕೆಂಬಾವುಟದ ಬಗ್ಗೆ ಅಲ್ಪ ಸ್ವಲ್ಪ ತಿಳಿದಿತ್ತು. ಸುರೇಶ, ಶೇಖರಪ್ಪ, ಪಂಪಾಪತಿ ಹೆಸರು ಆಗಲೇ ಕೇಳಿದ್ದೆ. ಮಿಲ್ ಮಾಲೀಕರ ಶೋಷಣೆ, ದಬ್ಬಾಳಿಕೆ ವಿರುದ್ಧ ಹೋರಾಟದ ನಾಯಕತ್ವ ವಹಿಸಿದ್ದ ಅವರು ದುಡಿಯುವ ಜನತೆಯ ಪಾಲಿಗೆ ಹೀರೋಗಳಾಗಿದ್ದರು. ಮಿಲ್ಲಿನಿಂದ ಕೆಲಸ ಮುಗಿಸಿ ಸಂಜೆ ವಾಪಸ್ಸು ಬರುತ್ತಿದ್ದ ಕಾರ್ಮಿಕರು ಅವರ ಬಗ್ಗೆ ಹೇಳುತ್ತಿದ್ದರು.

ನಗರಸಭೆ ಚುನಾವಣೆಯಲ್ಲಿ ನಾನಿರುವ ವಿಭಾಗ ಮಹಿಳೆಯರಿಗೆ ಮೀಸಲಾಗಿತ್ತು. ಹೀಗಾಗಿ ಪಂಪಣ್ಣ ಅಭ್ಯರ್ಥಿಗಾಗಿ ಹುಡುಕಾಟ ನಡೆಸಿದಾಗ ಕಾರ್ಮಿಕರೇ ನನ್ನ ಹೆಸರನ್ನ ಹೇಳಿ ಚುನಾವಣೆ ಕಣಕ್ಕಿಳಿಸಿದರು. ಹೀಗೆ ಅನಿರೀಕ್ಷಿತವಾಗಿ ಕಮ್ಯುನಿಸ್ಟ್ ಪಕ್ಷದ ಸಮೀಪಕ್ಕೆ ಬಂದ ನಾನು ಪಂಪಣ್ಣನವರನ್ನು ತುಂಬಾ ಹತ್ತಿರದಿಂದ ನೋಡಿ ಬೆಳೆದುಬಂದವಳು. ಆ ಸರಳತೆ, ಸಜ್ಜನಿಕೆ ಮತ್ತು ಒರಟಾಗಿ ಕಂಡರೂ ಬತ್ತದ ಅಂತಃಕರಣ, ಎಂಥ ಬಿರುಗಾಳಿಯನ್ನೂ ಎದುರಿಸಿ ನಿಲ್ಲುವ ದಿಟ್ಟತನ ಇವೆಲ್ಲ ಅವರಲ್ಲಿ ರಕ್ತಗತವಾಗಿದ್ದವು.

ಪಂಪಾಪತಿ ಕಲಿತವರಲ್ಲ. ಯಾವುದೇ ಶಾಲೆಯ ಮುಖ ನೋಡಿದವರಲ್ಲ. ಆದರೆ ಕಮ್ಯುನಿಸ್ಟ್ ಪಕ್ಷವೇ ಅವರಿಗೆ ವಿಶ್ವವಿದ್ಯಾಲಯವಾಯಿತು. ಶೋಷಣೆಯ ವಿರುದ್ಧದ ಅವಿರತ ಸಂಗ್ರಾಮದಲ್ಲೇ ಈ ಸಮಾಜ ಬದಲಾವಣೆಯ ಅನಿವಾರ್ಯತೆಯನ್ನು ಅವರು ಮನಗಂಡರು. ಮಾರ್ಕ್ಸ್‌ವಾದ, ಲೆನಿನ್‌ವಾದಗಳ ಬಗ್ಗೆ ಆಳವಾದ ಅಧ್ಯಯನವೇನೂ ಅವರಿಗಿರಲಿಲ್ಲ. ಆದರೆ ಅಸಮಾನತೆಯಿಂದ ಕೂಡಿದ ಈ ಸಮಾಜ ಬದಲಾವಣೆಯಾಗಬೇಕು, ಜಾತಿ ಮತವಿಲ್ಲದ ರಾಷ್ಟ್ರ ಕಟ್ಟಬೇಕೆಂಬ ತಿಳುವಳಿಕೆ ಅವರಿಗಿತ್ತು. ದಾವಣಗೆರೆಯಲ್ಲಿ ಜಾತಿ ರಾಜಕಾರಣದ ಕೋಟೆಯನ್ನು ಭೇದಿಸಿದವರೇ ಪಂಪಾಪತಿ. ಎಪ್ಪತ್ತರ ದಶಕಕ್ಕಿಂತ ಮುಂಚೆ ಲಿಂಗಾಯತರಲ್ಲದವರು, ಹಣವಂತರಲ್ಲದವರು, ಅಲ್ಲಿನ ನಗರಸಭೆಗೆ ಇಲ್ಲವೇ ಅಲ್ಲಿಂದ ಶಾಸನಸಭೆಗೆ ಆರಿಸಿ ಬರುವುದು ಸಾಧ್ಯವೇ ಇರಲಿಲ್ಲ. ಆದರೆ ಸುರೇಶ, ಶೇಖರಪ್ಪ ಬಲಿದಾನದ ನಂತರ ಬೀಸಿದ ಕೆಂಪುಗಾಳಿ ಜಾತಿಮತದ ಕೋಟೆಗಳನ್ನು ನುಚ್ಚುನೂರು ಮಾಡಿತು. ಹಣದ ಚೀಲ ಇಟ್ಟುಕೊಂಡು ಮತಗಳನ್ನು ಖರೀದಿಸಹೊರಟವರು ಮಣ್ಣುಪಾಲಾದರು. ತಮಿಳುನಾಡು ಮೂಲದ ಪಂಪಾಪತಿ ಅವರ ಜಾತಿಗೆ ಸೇರಿದ ಇನ್ನೂರು ಕುಟುಂಬಗಳೂ ದಾವಣಗೆರೆಯಲ್ಲಿಲ್ಲ. ಆದರೆ ಪಂಪಾಪತಿ ಯಾವ ಜಾತಿ ಎಂಬುದು ಆಗ ಮುಖ್ಯವಾಗಿರಲಿಲ್ಲ. ದುಡಿಯುವ ವರ್ಗದ ಅದ್ವಿತೀಯ ನೇತಾರನಾಗಿ ಬೆಳೆದ ಇವರನ್ನು ನಗರಸಭೆ ಮಾತ್ರವಲ್ಲ, ಮೂರು ಬಾರಿ ಶಾಸನಸಭೆಗೂ ಕಳಿಸಿದ ಅಲ್ಲಿನ ಜನ ಹೊಸ ಇತಿಹಾಸ ಬರೆದರು.

೧೯೪೪ರಲ್ಲಿ ಪಂಪಾಪತಿ ತಂದೆ ಹೊಸಪೇಟೆಯಿಂದ ದಾವಣಗೆರೆಗೆ ವಲಸೆ ಬಂದರು. ಅದೇ ವರ್ಷ ಮಾರ್ಚ್ ೨೨ರಂದು ತಂದೆಯೊಂದಿಗೆ ಕಾಟನ್ ಮಿಲ್‌ನಲ್ಲಿ ಕಸ ಗುಡಿಸುವ ಕೆಲಸಕ್ಕೆ ಸೇರಿದ ಪಂಪಾಪತಿ ದಿನಕ್ಕೆ ೧೨ರಿಂದ ೧೩ ಗಂಟೆ ಕೆಲಸ ಮಾಡುತ್ತಿದ್ದರು. ಈ ಶೋಷಣೆ ವಿರುದ್ಧ ೧೯೪೭ರಲ್ಲೇ ಕಾರ್ಮಿಕರು ಸಂಘಟಿತರಾಗಿ ಪಂಪಾಪತಿ ಕೆಂಬಾವುಟದಡಿಗೆ ಬಂದರು. ಚಿಗುರುತ್ತಿರುವ ಕಾರ್ಮಿಕ ಚಳವಳಿಯನ್ನು ಕಂಡು ದಿಗ್ಭ್ರಮೆಗೊಂಡ ಮಾಲೀಕರು ಈ ಧ್ವನಿಯನ್ನು ಅಡಗಿಸಲು ನಾನಾ ಹುನ್ನಾರ ನಡೆಸಿದರು.

ದಾವಣಗೆರೆಯಲ್ಲಿ ಕಾರ್ಮಿಕ ಚಳುವಳಿ ಬೆಳೆದು ಬಂದ ಕಥೆಯನ್ನು ಬಸವರಾಜ ಕಟ್ಟೀಮನಿ ತಮ್ಮ 'ಜ್ವಾಲಾಮುಖಿಯ ಮೇಲೆ' ಕಾದಂಬರಿಯಲ್ಲಿ ಅತ್ಯಂತ ಮಾರ್ಮಿಕವಾಗಿ ಚಿತ್ರಿಸಿದ್ದಾರೆ. ನರಸಿಂಹನ್, ಸಿಂಪ್ಸನ್ ಸೋನ್ಸ್, ಶಿವಶಂಕರರಾವ್, ಉಪಾಧ್ಯಾಯರಂಥ ಹಿರಿಯ ಕಮ್ಯುನಿಸ್ಟ್ ನಾಯಕರ ಮಾರ್ಗದರ್ಶನದಲ್ಲಿ ರೂಪುಗೊಂಡ ಶ್ರಮಿಕ ಆಂದೋಲನವನ್ನು ಹತ್ತಿಕ್ಕಲು ಮಾಲೀಕರು ಪ್ರಾರಂಭದಿಂದಲೂ ಮಸಲತ್ತು ನಡೆಸಿದ್ದರು. ೧೯೪೮ರ ಜನವರಿ ೩೦ ರಂದು ಗೋಡ್ಸೆ ಗುಂಡಿಗೆ ಗಾಂಧೀಜಿ ಬಲಿಯಾದ ದಿನವೇ ಕಾರ್ಮಿಕರ ಮೇಲೆ ಗೂಂಡಾಗಳನ್ನ ಛೂಬಿಟ್ಟು ಬೀಗಮುದ್ರೆ ಘೋಷಿಸಿದರು.

ಕಮ್ಯುನಿಸ್ಟ್ ಕಾರ್ಮಿಕ ಸಂಘಟನೆಯನ್ನು ಮುರಿಯಲು ಸೋಷಲಿಸ್ಟ್ ಪಕ್ಷದ ಎ. ಎಚ್. ಶಿವಾನಂದಸ್ವಾಮಿ ಅವರನ್ನು ಬಳಸಿಕೊಂಡ ಮಾಲೀಕ ವರ್ಗ ಇಂಟಕ್ ಸಂಯೋಜಿತ ಸಂಘವನ್ನು ಸೃಷ್ಟಿಸಿತು. ಈ ಹೋರಾಟದಲ್ಲೇ ಬೆಳೆದುಬಂದ ಪಂಪಾಪತಿ ಸ್ವೀಪರ್ ಕೆಲಸದಿಂದ ಸ್ಪಿನ್ನಿಂಗ್ ವಿಭಾಗಕ್ಕೆ ಬಡ್ತಿ ಪಡೆದರು. ಅವರು ಬರಿ ಪ್ರತಿಭಟನಕಾರರಾಗಿರಲಿಲ್ಲ. ತಾವು ನಿರ್ವಹಿಸುವ ಕಾರ್ಯದಲ್ಲೂ ದಕ್ಷತೆ ಹಾಗೂ ಪರಿಣತಿ ಹೊಂದಿದ್ದುದರಿಂದ 'ಡಾಫಿಂಗ್ ಜಾಬರ್' ಆಗಿ ಬಡ್ತಿ ಪಡೆದು ಫಿಟ್ಟರ್ ಅಸಿಸ್ಟೆಂಟ್ ಕೆಲಸವನ್ನು ನಿಭಾಯಿಸುತ್ತಿದ್ದರು.

ಹೀಗೆ ಒಂದೆಡೆ ದಕ್ಷ ಕಾರ್ಯನಿರ್ವಹಣೆಯಲ್ಲಿ ಹೆಸರು ಮಾಡುತ್ತಲೇ ಇನ್ನೊಂದು ಕಡೆ ಮಾಲೀಕ ವರ್ಗದ ಶೋಷಣೆ ವಿರುದ್ಧ ಶ್ರಮಜೀವಿಗಳನ್ನ ಅವರು ಸಂಘಟಿಸತೊಡಗಿದರು. ಈ ನಡುವೆ ಮಾಲೀಕರ ಕುತಂತ್ರದಿಂದಾಗಿ ಹೆಗ್ಗಪ್ಪ ಎಂಬಾತನ ಕೊಲೆ ನಡೆಯಿತು. ಈ ಕೊಲೆ ಪ್ರಕರಣದಲ್ಲಿ ಪಂಪಾಪತಿ, ಎಂ. ಜಿ. ತಿಪ್ಪೇಸ್ವಾಮಿ ಸೇರಿ ಒಟ್ಟು ೨೩ ಜನರನ್ನು ಸಿಲುಕಿಸಲಾಯಿತು. ಆಗ

ಪೊಲೀಸರಿಂದ ನಾನಾ ಚಿತ್ರಹಿಂಸೆ ಅನುಭವಿಸಿದ ಪಂಪಾಪತಿ ಅವರು ಎರಡು ವರ್ಷ ಜೈಲು ವಾಸ ಕಳೆದರು.

ಪಂಪಾಪತಿ ಅವರು ಜೈಲಿಗೆ ಹೋದಾಗ ಅವರ ಮನೆ ಪರಿಸ್ಥಿತಿ ಹದಗೆಟ್ಟಿತು. ಅವರ ಹಿರಿಯ ಮಗ ತಾಯಿ ಮಾಡಿ ಕೊಟ್ಟ ಇಡ್ಲಿಗಳನ್ನು ಊರಲ್ಲಿ ಮಾರಾಟ ಮಾಡಿ ಅದರಿಂದ ಬಂದ ಹಣದಿಂದ ಮನೆ ನಡೆಸುತ್ತಿದ್ದ. ಮುಂದೆ ಆತ ಬಾವಿಗೆ ಬಿದ್ದು ತೀರಿಕೊಂಡಾಗ ಯಾವುದೋ ಸಭೆಯಲ್ಲಿ ಭಾಷಣ ಮಾಡುತ್ತಿದ್ದ ಪಂಪಾಪತಿ ಅವರಿಗೆ ಸುದ್ದಿ ಮುಟ್ಟಿಸಲಾಯಿತು. ಇದರಿಂದ ಧೃತಿಗೆಡದ ಪಂಪಾಪತಿ ಅವರು ಆತ ನನ್ನ ಮಗ ಮಾತ್ರವಲ್ಲ, ನಿಮ್ಮೆಲ್ಲರ ಮಗ, ನೀವೇ ಅಂತ್ಯಕ್ರಿಯೆ ಮಾಡಿ ಎಂದು ಕಾರ್ಮಿಕರಿಗೆ ಹೇಳಿದರಂತೆ.

ದಾವಣಗೆರೆಯ ಕಾರ್ಮಿಕ ಆಂದೋಲನಕ್ಕೆ ರಾಜ್ಯಮಟ್ಟದ ನಾಯಕರು ಮಾರ್ಗದರ್ಶನ ಮಾಡಿದರೂ ಕಮ್ಯುನಿಸ್ಟ್ ಪಕ್ಷದಿಂದ ನಾನೂ ಸೇರಿದಂತೆ ೧೪ ಮಂದಿ ಆರಿಸಿಬಂದೆವು. ಅಲ್ಲಿಯವರೆಗೆ ಕೇವಲ ಉಚ್ಚಜಾತಿಯ ಕೋಟ್ಯಾಧೀಶರ ಕೋಟೆಯಾಗಿದ್ದ ದಾವಣಗೆರೆ ನಗರ ಸಭೆಗೆ ಮೊದಲಬಾರಿಗೆ ಎಲ್ಲ ಜಾತಿಗಳಿಗೆ ಸೇರಿದ ಮಿಲ್ ಕಾರ್ಮಿಕರು ಪ್ರವೇಶ ಮಾಡಿದರು. ಪಂಪಾಪತಿಯವರೊಂದಿಗೆ ಮಿಲ್ ಕಾರ್ಮಿಕರಾಗಿದ್ದ ಎಚ್. ಕೆ. ರಾಮಚಂದ್ರಪ್ಪ, ತಿಪ್ಪೇಸ್ವಾಮಿ, ರಾಮಾಂಜನೇಯ, ಅಬ್ದುಲ್ ರೆಹಮಾನ್‌ಸಾಬ್, ಬೋರ ನಾಯಕ, ದೊಡ್ಡ ವೀರಪ್ಪ, ಅಬ್ದುಲ್ ಹಮೀದ್, ಜಹೀರಾಬಿ, ಹೀಗೆ ಶ್ರಮಜೀವಿಗಳ ಸೈನ್ಯವೇ ನಗರಸಭೆ ಪ್ರವೇಶಿಸಿತು. ಆಗ ನಮ್ಮೊಂದಿಗೆ ಶಾಮನೂರು ಶಿವಶಂಕರಪ್ಪ, ಮೋತಿ ವೀರಣ್ಣ, ಕೊಟ್ರ ಬಸಪ್ಪ, ಜೆನ್ನಪ್ಪ ಮುಂತಾದ ಘಟಾನುಘಟಿಗಳು ಚುನಾಯಿತರಾಗಿದ್ದರು. ರಾಷ್ಟ್ರಮಟ್ಟ




*ಸಂಗಾತಿಗಳಾದ ಎಂ. ಎಸ್. ಕೃಷ್ಣನ್, ಅನಂತಸುಬ್ಬರಾವ್, ಪಂಪಾಪತಿ*

ಕೂಡ ವರ್ಗ ಸಂಘರ್ಷದ ರಣರಂಗದಲ್ಲಿ ಶೋಷಕರನ್ನು ಎದುರಿಸಿದವರು ಶೇಖರಪ್ಪ, ಸುರೇಶ ಮತ್ತು ಪಂಪಾಪತಿ ಎಂಬ ತ್ರಿಮೂರ್ತಿಗಳು. ೧೯೬೮ರಲ್ಲಿ ಕಾರ್ಮಿಕರೇ ಹೆಚ್ಚಾಗಿದ್ದ ಆಜಾದ್ ನಗರದ ಬಡಾವಣೆಯಿಂದ ಸುರೇಶ ನಗರಸಭೆಗೆ ಸ್ಪರ್ಧಿಸಿ ಜಯಶಾಲಿಯಾದರು. ಏಳನೇ ಡಿವಿಜನ್‌ನಲ್ಲಿ ಸ್ಪರ್ಧಿಸಿದ್ದ ಪಂಪಾಪತಿ ಅವರು ೧೭ ಮತಗಳಿಂದ ಪರಾಜಿತರಾದರು.

ಕಾರ್ಮಿಕ ವರ್ಗ ಬರೀ ಆರ್ಥಿಕ ಬೇಡಿಕೆಗಳಿಗೆ ಹೋರಾಡದೇ ರಾಜಕೀಯ ಶಕ್ತಿಯಾಗಿ ಹೊರಹೊಮ್ಮುತ್ತಿರುವುದನ್ನು ಕಂಡು ಹೆದರಿದ ಶೋಷಕ ವರ್ಗ ೧೯೭೦ ಏಪ್ರಿಲ್ ಒಂದರಂದು ಗೂಂಡಾಗಳ ಮೂಲಕ ಸುರೇಶ ಮತ್ತು ಶೇಖರಪ್ಪ ಅವರನ್ನು ಕೊಲೆಮಾಡಿಸಿತು. ಈ ಘಟನೆಯಲ್ಲಿ ಪ್ರಾಣಾಂತಿಕ ಏಟುತಿಂದ ಪಂಪಾಪತಿಯವರು ಬದುಕುಳಿದರು. ಈ ಹುತಾತ್ಮರ ನೆತ್ತರಿನಿಂದ ತೋಯ್ದ ಕೆಂಬಾವುಟ ಇನ್ನಷ್ಟು ಪ್ರಜ್ವಲಿಸಿತು. ಮುಂದೆ ೧೯೭೪ರಲ್ಲಿ ನಡೆದ ನಗರಸಭೆ ಚುನಾವಣೆಯಲ್ಲಿ ಕಾಂಗ್ರೆಸ್ ಮತ್ತು ಸಿಪಿಐ ಹೊಂದಾಣಿಕೆ ಇದ್ದುದರಿಂದ ಕಾಂಗ್ರೆಸ್ ಬೆಂಬಲದ ಪರಿಣಾಮವಾಗಿ ಪಂಪಾಪತಿ ನಗರಾಧ್ಯಕ್ಷರಾದರು.

ನಗರಸಭೆ ಹೊಣೆ ಹೊತ್ತ ನಂತರ ಪಂಪಾಪತಿ ಅವರ ಕಾರ್ಯವಿಧಾನವೇ ಬದಲಾಯಿತು. ಬದುಕಿನುದ್ದಕ್ಕೂ ಶೋಷಕ ವರ್ಗಗಳ ವಿರುದ್ಧ ಬಂಡಾಯದ ಬಾವುಟ ಹಿಡಿದು ವರ್ಗ ಹೋರಾಟದಲ್ಲೇ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದ ಪಂಪಣ್ಣ ಪಾಲಿಕೆಯ ಸಾರಥ್ಯ ವಹಿಸಿದಾಗ 'ಈ ನಿರಕ್ಷರಿ ಏನು ಮಾಡುತ್ತಾನೆ' ಎಂದು ಕೊಂಕು ಮಾತನಾಡಿದವರಿದ್ದರು. ಆದರೆ ಯಾವ ಸುಶಿಕ್ಷಿತರೂ ಸಾಧಿಸಲಾಗದ್ದನ್ನು ಪಂಪಾಪತಿ ಸಾಧಿಸಿದರು.

ನಗರಾಧ್ಯಕ್ಷರಾಗಿ ಅಧಿಕಾರ ವಹಿಸಿಕೊಂಡ ತಕ್ಷಣ ನಗರದ ಶುಚೀಕರಣಕ್ಕೆ ಆದ್ಯತೆ ನೀಡಿದ ಅವರು ಸೋರಿ ಹೋಗುತ್ತಿದ್ದ ಆದಾಯವನ್ನು ತಡೆಯಲು ಸ್ವತಃ ರಾತ್ರಿ ಚೆಕ್‌ಪೋಸ್ಟ್‌ಗಳ ಬಳಿ ಗಸ್ತು ನಡೆಸಿದರು. ಎಲ್ಲಕ್ಕಿಂತ ಮುಖ್ಯವಾಗಿ ನಗರದ ಎಲ್ಲ ಬೀದಿಗಳಲ್ಲಿ ೧೬ ಸಾವಿರಕ್ಕೂ ಹೆಚ್ಚು ಮರಗಳನ್ನು ನೆಟ್ಟು ಪ್ರತಿದಿನ ಬೆಳಗಿನ ಜಾವ ಯಾರದೋ ವಾಹನದಲ್ಲಿ ಇಲ್ಲವೇ ನಡೆದುಕೊಂಡು ಹೋಗಿ ಆ ಸಾಲುಮರಗಳನ್ನು ನೋಡಿಕೊಂಡು ಅವುಗಳಿಗೆ ನೀರು ಹಾಕಿಸುವ ವ್ಯವಸ್ಥೆ ಮಾಡಿದರು. ಇದನ್ನು ಕಂಡು ದಂಗುಬಡಿದ ದಾವಣಗೆರೆ ವಿದ್ಯಾವಂತರು ಅಂದು ಅಶೋಕನಂತೆ ಇಂದು ಪಂಪಾಪತಿಯವರು ಮರ ನೆಟ್ಟು ತಂಪು ನೀಡಿದರೆಂದು ಉದ್ಗರಿಸಿದರು.

ಕಮ್ಯುನಿಸ್ಟರು ಎಂದರೆ ದಾಂಧಲೆ, ದೊಂಬಿ ಮಾಡುವವರು ಎಂಬ ಕೆಟ್ಟ ಕಲ್ಪನೆ ಮಾಯವಾಗಿ ಇವರು ಅಧಿಕಾರಕ್ಕೆ ಬಂದರೆ ಎಂಥ ದಕ್ಷ ಆಡಳಿತ ನೀಡುತ್ತಾರೆ ಎಂಬುದನ್ನು ಪಂಪಾಪತಿ ತೋರಿಸಿಕೊಟ್ಟರು. ಅಂದಿನ ಹಿರಿಯ ಸಚಿವ ಎಚ್. ಸಿದ್ಧವೀರಪ್ಪ ಅವರು ತಮ್ಮ ಕಾಂಗ್ರೆಸ್ ಪಕ್ಷದ ಹರಿಹರ ನಗರಸಭಾ ಸದಸ್ಯರಿಗೆ ''ದಾವಣಗೆರೆ ಪಂಪಾಪತಿ ಅವರನ್ನು ನೋಡಿ ಕಲಿಯಿರಿ'' ಎಂದು ಕಿವಿಮಾತು ಹೇಳಿದರು.

ಪಂಪಾಪತಿ ಅವರು ಇಷ್ಟಕ್ಕೇ ಸುಮ್ಮನಾಗಲಿಲ್ಲ. ನಗರಸಭೆಗಳಿಗೆ ಹೆಚ್ಚಿನ ಅಧಿಕಾರ ನೀಡಬೇಕೆಂದು ರಾಜ್ಯ ಸರ್ಕಾರದ ಮೇಲೆ ಒತ್ತಾಯ ಹೇರಲು ೧೯೭೫ರಲ್ಲಿ ಕರ್ನಾಟಕದ ಎಲ್ಲಾ ನಗರಸಭೆಗಳ ಅಧ್ಯಕ್ಷ, ಉಪಾಧ್ಯಕ್ಷರ ಸಮ್ಮೇಳನವನ್ನು ದಾವಣಗೆರೆಯಲ್ಲಿ ನಡೆಸಿ ಯಶಸ್ವಿಯಾದರು. ದಾವಣಗೆರೆ ನಗರಸಭೆಗೆ ಮುನ್ಸಿಪಾಲ್ಟಿ ಎಂಬ ಇಂಗ್ಲಿಷ್ ಬೋರ್ಡನ್ನು ತೆಗೆಸಿಹಾಕಿ ನಗರಸಭೆ ಕಾರ್ಯಾಲಯ ಎಂಬ ಬೋರ್ಡನ್ನು ಬರೆಸಿದರು. ಆಗ ಕೆಲ ಪತ್ರಕರ್ತರು 'ನಗರಸಭೆ ಕೆಂಪುಬಣ್ಣದಲ್ಲಿದೆ, ಕಾರ್ಯಾಲಯ ಮಾತ್ರ ಹಸಿರು ಬಣ್ಣದಲ್ಲಿದೆ ಹೀಗೇಕೆ ?' ಎಂದು ಪ್ರಶ್ನಿಸಿದಾಗ ತಮಾಷೆಯಾಗಿ ಉತ್ತರಿಸಿದ ಪಂಪಾಪತಿಯವರು ನಗರಸಭೆ ಕಮ್ಯುನಿಸ್ಟರ ಆಡಳಿತಕ್ಕೆ ಒಳಪಟ್ಟಿದೆ; ಆದರೆ ಕಾರ್ಯಾಲಯ ಮಾತ್ರ ನಮ್ಮ ಪಕ್ಷದ ನೀತಿಯಿಂದ ನಡೆಯುತ್ತಿಲ್ಲ ಎಂದರು.

ಪಂಪಾಪತಿಯವರು ನಗರಾಧ್ಯಕ್ಷರಾಗಿ ಸ್ವತಃ ಬೆಳಗಿನ ಜಾವ ನಾಲ್ಕು ಗಂಟೆಗೆ ಎದ್ದು ಎಲ್ಲ ವಾರ್ಡ್‌ಗಳಿಗೆ ಭೇಟಿ ನೀಡಿ ನೀರು ಪೂರೈಕೆ ಸರಿಯಾಗಿದೆಯೇ ? ರಸ್ತೆಗಳು ಶುಚೀಕರಣಗೊಂಡಿವೆಯೇ ? ಹೀಗೆ ಎಲ್ಲವನ್ನೂ ಪರಿಶೀಲಿಸುತ್ತಿದ್ದರು. ಹೀಗಾಗಿ ನಗರಸಭೆ ಸದಸ್ಯರಾದ ನಾವು ಬೆಳಿಗ್ಗೆ ಎದ್ದು ನಮ್ಮ ನಮ್ಮ ವಿಭಾಗಗಳಲ್ಲಿ ಸಂಚರಿಸುವುದು ಅನಿವಾರ್ಯವಾಯಿತು.

ಈ ನಡುವೆ ಪಂಪಾಪತಿಯವರ ದಕ್ಷ ಆಡಳಿತ ನಿರ್ವಹಣೆ ಹಾಗೂ ಹೆಚ್ಚುತ್ತಿರುವ ಜನಪ್ರಿಯತೆಯಿಂದಾಗಿ ದಿಗ್ಭ್ರಮೆಗೊಂಡ ದಾವಣಗೆರೆ ಶೋಷಕ ವರ್ಗದವರು, ಮುಖ್ಯವಾಗಿ ಬಲಪಂಥೀಯ ಪಕ್ಷಗಳು, ಒಂದುಗೂಡಿ ಪಿತೂರಿ ನಡೆಸಿದರು. ೧೯೭೭ರಲ್ಲಿ ಪಂಪಾಪತಿ ಅವರ ವಿರುದ್ಧ ಕಾಂಗ್ರೆಸ್ ಮತ್ತು ಜನತಾಪಕ್ಷಗಳು ಸೇರಿ ಅವಿಶ್ವಾಸ ನಿರ್ಣಯ ಮಂಡಿಸಿದವು. ಕಮ್ಯುನಿಸ್ಟ್ ಸದಸ್ಯರನ್ನು ಪಕ್ಷಾಂತರ ಮಾಡಿಸಲು ಕೋಟ್ಯಾಧಿಪತಿಗಳು ದುಡ್ಡಿನ ಚೀಲ ತೆಗೆದುಕೊಂಡು ಬಂದರು. ಸ್ವತಃ ನನ್ನ ಮನೆಗೆ ಬಂದ ಧಣಿಗಳು ಒಂದು ಲಕ್ಷ ರೂಪಾಯಿ ಮತ್ತು ಒಂದು ನಿವೇಶನ ಮಾತ್ರವಲ್ಲ ಸರ್ಕಾರಿ ಕೆಲಸ ಕೊಡಿಸುವ ಆಮಿಷ ಒಡ್ಡಿದರು. ನಾನು ಸೊಪ್ಪು ಹಾಕಲಿಲ್ಲ. ನಮ್ಮ ಕಾರ್ಮಿಕರು ತಲಾ ೧೦ ರೂಪಾಯಿ ಸೇರಿಸಿದರೂ ಒಂದು ಲಕ್ಷ

ರೂಪಾಯಿ ಆಗುತ್ತದೆಂದೂ ಅದು ಮುಖ್ಯವಲ್ಲವೆಂದೂ ಹೇಳಿದೆ. ಆದರೆ ನಮ್ಮ ಪಕ್ಷದ ಸದಸ್ಯನೊಬ್ಬ ಆಮಿಷಕ್ಕೊಳಗಾಗಿ ಪಕ್ಷಾಂತರವಾದ. ಆದರೆ ನನ್ನ ಮತವೇ ನಿರ್ಣಾಯಕವಾಗಿತ್ತು. ನಾನು ಆಮಿಷಕ್ಕೆ ಬಲಿಯಾಗುವುದಿಲ್ಲವೆಂದು ಖಚಿತವಾದ ನಂತರ ನನ್ನನ್ನು ಅಪಹರಣ ಮಾಡಲು ಯತ್ನಿಸಲಾಯಿತು. ಆಗ ಪಂಪಾಪತಿ ಅವರು ತಮ್ಮ ಮನೆಯಲ್ಲಿ ಆಶ್ರಯ ನೀಡಿದರು. ಕೊನೆಗೂ ಅವಿಶ್ವಾಸ ನಿರ್ಣಯ ಮತಕ್ಕೆ ಹಾಕುವ ದಿನದಂದು ನಗರಸಭೆ ಎದುರು ೧೦ ಸಾವಿರಕ್ಕೂ ಹೆಚ್ಚು ಜನ ಸೇರಿದ್ದರು. ಬಲಪಂಥೀಯ ಪಕ್ಷಗಳ ಸದಸ್ಯರಲ್ಲಿ ಹೆಸರಾಂತ ವಕೀಲರು ಇದ್ದರು. ಆದರೆ ಪಂಪಾಪತಿ ಅವರು ಒಟ್ಟು ೩೫ ಜನ ಸದಸ್ಯರ ಆಧಾರದ ಮೇಲೆ ೨೪ ಜನ ಅವಿಶ್ವಾಸದ ನಿರ್ಣಯದ ಪರ ಸಹಿ ಹಾಕಿದರೆ ಮಾತ್ರ ಒಪ್ಪಿಕೊಳ್ಳುವುದಾಗಿ ಸ್ಪಷ್ಟಪಡಿಸಿದರು. ಆದರೆ ಹಾಲಿ ಇರುವ ೩೩ ಜನರಲ್ಲಿ ೨೨ ಜನ ಸಹಿ ಹಾಕಿದರೆ ಅವಿಶ್ವಾಸ ನಿರ್ಣಯ ಮಂಡಿಸಲು ಬರುತ್ತದೆ ಎಂದು ಕಾನೂನು ಪುಸ್ತಕಗಳನ್ನು ತಂದು ವಿರೋಧಿಗಳು ವಾದಿಸಿದರು. ಆದರೆ ಈ ಕಾನೂನು ಪಂಡಿತರ ವಾದಗಳನ್ನೆಲ್ಲಾ ತಳ್ಳಿಹಾಕಿದ ಪಂಪಾಪತಿ ಅವರು ಒಟ್ಟು ಎಂದರೆ ಅರ್ಥ ವೇನು ? ನಗರಸಭಾ ಸದಸ್ಯರ ಒಟ್ಟೋ ಅಥವಾ ಹಾಜರಿರುವ ಸದಸ್ಯರ ಒಟ್ಟೋ ಎಂದು ಪ್ರಶ್ನಿಸಿ ಇದನ್ನು ಸರ್ಕಾರ ನಿರ್ಧರಿಸಲಿ ಎಂದು ಸವಾಲು ಹಾಕಿದರು.

ಕೊನೆಗೆ ವಿಭಾಗೀಯ ಕಮೀಷನರ್‌ವರೆಗೆ ಈ ವಿವಾದ ಹೋಗಿ ಅವರು ಪಂಪಾಪತಿ ಅವರ ವಾದವನ್ನು ಎತ್ತಿಹಿಡಿದರು. ಆಗ ರಾಜ್ಯದ ಪ್ರಮುಖ ಪತ್ರಿಕೆಗಳು "ಆ ಒಟ್ಟು ಈ ಒಟ್ಟು ಪಂಪಾಪತಿ ಪಟ್ಟು" ಎಂಬ ಶೀರ್ಷಿಕೆ ಅಡಿಯಲ್ಲಿ ಮುಖಪುಟದ ಸುದ್ದಿಯಲ್ಲಿ ಪ್ರಕಟಿಸಿದವು. ಮುಂದೆ ಪಂಪಾಪತಿ ಅವರು ೧೯೭೮-೮೩-೮೫ ಹೀಗೆ ಮೂರು ಬಾರಿ ರಾಜ್ಯ ವಿಧಾನಸಭೆಗೆ ಚುನಾಯಿತರಾಗಿ ಬಂದು ಶ್ರೇಷ್ಠ ಸಂಸದೀಯ ಪಟು ಎಂದು ಹೆಸರು ಮಾಡಿದರು. ದಾವಣಗೆರೆ ಕ್ಷೇತ್ರವನ್ನು ಸಿಪಿಐಗೆ ಬಿಟ್ಟುಕೊಡಬಾರದೆಂದು ಅಲ್ಲಿನ ಕಾಂಗ್ರೆಸ್‌ನ ಘಟಾನುಘಟಿಗಳು ಅಂದಿನ ಮುಖ್ಯಮಂತ್ರಿ ದೇವರಾಜ ಅರಸ್ ಅವರ ಬಳಿ ನಿಯೋಗ ತೆಗೆದುಕೊಂಡು ಬಂದಾಗ ಅದಕ್ಕೆ ಸೊಪ್ಪು ಹಾಕದ ದೇವರಾಜ ಅರಸರು ಪಂಪಾಪತಿ ಗೆದ್ದರೆ ಜನರಿಗೆ ಒಳ್ಳೆಯದಾಗುತ್ತದೆ, ಅವರ ಪರವಾಗಿ ಪ್ರಚಾರ ಮಾಡಿ ಎಂದು ಬೈದು ಕಳಿಸಿದರು.

ಪಂಪಾಪತಿ ಬರೀ ಕಾರ್ಮಿಕ ನಾಯಕರಾಗಿರಲಿಲ್ಲ. ನಗರಸಭೆ ಕೆಲಸ ಮುಗಿಸಿ ರಾತ್ರಿ ೮ ಗಂಟೆಗೆ ಅಶೋಕ ರಸ್ತೆಯ ಕಮ್ಯುನಿಸ್ಟ್ ಪಕ್ಷದ ಕಚೇರಿಗೆ ಬಂದು ಕಾರ್ಯಕರ್ತರ ಸಮಸ್ಯೆಗಳನ್ನು ಆಲಿಸುತ್ತಿದ್ದ ಅವರ ಬಳಿ ನಗರದ ಕೌಟುಂಬಿಕ ವಿವಾದಗಳು ಬರುತ್ತಿದ್ದವು. ಕಾರ್ಮಿಕ ಕುಟುಂಬಗಳ ಗಂಡ ಹೆಂಡತಿಯರಲ್ಲಿ ಜಗಳವಾಗಿ ಅವು ಪಾರ್ಟಿ ಆಫೀಸಿಗೆ ಬಂದಾಗ ಪಂಪಣ್ಣ ಅವರು ದಂಪತಿಗೆ ಬುದ್ಧಿ ಹೇಳಿ ಒಂದುಗೂಡಿಸಿ ಕಳುಹಿಸುತ್ತಿದ್ದರು. ಇದೆಲ್ಲ ಮುಗಿಸಿ ರಾತ್ರಿ ೧೨ ಗಂಟೆಗೆ ಮನೆಗೆ ಹೋಗುತ್ತಿದ್ದರು.

ಕಾರ್ಮಿಕರ ಬೇಡಿಕೆಗಳಿಗಾಗಿ ಹಲವಾರು ಬಾರಿ ಅನ್ನ ಸತ್ಯಾಗ್ರಹ, ಸುದೀರ್ಘ ಕಾಲದ ನಿರಶನ ನಡೆಸಿದ ಪರಿಣಾಮವಾಗಿ ಪಂಪಣ್ಣ ಅವರ ಆರೋಗ್ಯ ಕೆಡುತ್ತಲೇ ಬಂತು. ಆದರೂ ಅವರ ಕ್ರಿಯಾಶೀಲತೆ ಕಡಿಮೆ ಆಗಲಿಲ್ಲ. ದಾವಣಗೆರೆಯಲ್ಲಿ ಪ್ರಗತಿಪಂಥ ಸಾಹಿತ್ಯ ಸಮ್ಮೇಳನವನ್ನು ನಡೆಸಲು ನಿರಂಜನ ಮತ್ತು ಕಟ್ಟೀಮನಿಯವರು ಸೂಚಿಸಿದಾಗ ಅದನ್ನು ಯಶಸ್ವಿಯಾಗಿ ನಡೆಸಿದ ಪಂಪಾಪತಿ ಅವರು ಅದಕ್ಕೆ ರಷ್ಯಾದಿಂದ ಕನ್ನಡ ತಿಳಿದಿದ್ದ ಲೇಖಕ ದಾಷ್ಕೋ ಹಾಗೂ ದೆಹಲಿಯಿಂದ ಖ್ಯಾತ ಬರಹಗಾರ ಭೀಷ್ಮ ಸಾಹನಿ ಅವರನ್ನು ಕರೆಸಿದ್ದರು.

ಪಂಪಾಪತಿ ಅವರಲ್ಲಿ ಲೋಪದೋಷಗಳು ಇರಲಿಲ್ಲವೆಂದಲ್ಲ. ಮನುಷ್ಯ ಸಹಜವಾದ ದೌರ್ಬಲ್ಯಗಳು ಅವರಿಗೂ ಇದ್ದವು. ತಮ್ಮ ಕೆಲಸಕ್ಕಾಗಿ ಬರುತ್ತಿದ್ದ ಜನರ ಮೇಲೆ ತುಂಬಾ ರೇಗಿ ಒರಟಾಗಿ ಮಾತನಾಡುತ್ತಿದ್ದರು. ಸಾಂಪ್ರದಾಯಿಕ ಚೌಕಟ್ಟನ್ನು ಮೀರಿ ಹೊರಗೆ ಬರಲು ಅವರಿಗೆ ಸಾಧ್ಯವಾಗಲಿಲ್ಲ. ಜಾತಿ ಮತದಲ್ಲಿ ನಂಬಿಕೆ ಇರದಿದ್ದರೂ ಅಂತರ್ಜಾತಿ ಮದುವೆಗಳನ್ನು ಬೆಂಬಲಿಸುವ ರಿಸ್ಕ್ ತೆಗೆದುಕೊಳ್ಳುತ್ತಿರಲಿಲ್ಲ. ಭೌತಿಕವಾದವನ್ನು ಪ್ರತಿಪಾದಿಸುವ ಬಳಗಕ್ಕೆ ಸೇರಿದ್ದರೂ ಪರಮಾತ್ಮನಲ್ಲಿ ಅವರಿಗೆ ಅಚಲವಾದ ಶ್ರದ್ಧೆ ಇತ್ತು. ಹೀಗಾಗಿ ದಾವಣಗೆರೆಯ ಕಮ್ಯುನಿಸ್ಟ್ ಪಕ್ಷ ಸೈದ್ಧಾಂತಿಕ ಸ್ಪರ್ಶವನ್ನು ಪಡೆಯಲೇ ಇಲ್ಲ. ಆದರೂ ಪಕ್ಷದ ಸಭೆಗಳಲ್ಲಿ ತಪ್ಪುಗಳನ್ನು ಗಮನಕ್ಕೆ ತಂದರೆ ಪಂಪಾಪತಿ ತಿದ್ದಿಕೊಳ್ಳುತ್ತಿದ್ದರು. ಬಹುಶಃ ಈ ತಪ್ಪುಗಳಿಗೆ ಸೂಕ್ತ ಮಾರ್ಗದರ್ಶನದ ಅಭಾವವೂ ಇದಕ್ಕೆ ಕಾರಣವಿರಬಹುದು.

ಇಂಥ ಪಂಪಾಪತಿ ಅವರು ಈಗ ನಮ್ಮ ನಡುವೆ ಇಲ್ಲ. ಆದರೆ ಅವರು ನೀಡಿದ ಸ್ಫೂರ್ತಿ ಚಿರಂತನವಾಗಿದೆ. ಅವರ ಬದುಕೆ ಅಲ್ಲಿನ ಕಾರ್ಮಿಕ ಚಳವಳಿಗೆ ದಾರಿದೀಪವಾಗಿದೆ.

**ಶಶಿಕಲಾ ಬೆಳಗಲಿ**
ಎಲ್.ಎಫ್.೧೭/೬, ಬಿ.ಡಿ.ಎ. ಫ್ಲ್ಯಾಟ್ಸ್
ಬಿ.ಟಿ.ಎಂ. ಲೇ ಔಟ್, ಬೆಂಗಳೂರು




## ಮನೆಯೊಡೆಯ

೧

ಎಂದೋ ಒಮ್ಮೆ –
ಇಲ್ಲೊಬ್ಬ ಮನೆಯೊಡೆಯನಿದ್ದ.
ಮನೆಯ ಮುಂದೊಂದು
ಹೂದೋಟ ಬೇಕೆಂದುಕೊಂಡ.
ಸುತ್ತ ಮುತ್ತೆಲ್ಲ ಜಾಲಾಡಿದ.
ಕಸ ಗುಡಿಸಿದ, ಮಣ್ಣಗೆದ,
ಎಲ್ಲೆಲ್ಲಿಂದಲೋ ಹೂ ಗಿಡಗಳನ್ನು ತಂದ
ಬೆಳೆಸಿದ ಹೀಗೊಂದು ಕೈತೋಟವನ್ನು.
ಗಮ್ಮನೆ ಬೀರಿದ ಸುವಾಸನೆಯಿಂದ,
ಪುಷ್ಟಿಯಾಯ್ತು ಒಂದು ಜೇನುಗೂಡು.



೨

ಕಾಲ ಸರಿದಂತೆ –
ಮನೆಯೊಡೆಯ ಮುದುಕನಾಗಿದ್ದಾನೆ.
ಕಸುವಿಲ್ಲ ಮೈಯಲ್ಲಿ –
ಹೂಗಿಡಗಳನ್ನು ಆರೈಕೆ ಮಾಡುವುದಕ್ಕೆ;
ನೀರೆರೆಯುವುದಕ್ಕೆ.
ಆದರೂ
ಅಲ್ಲೊಂದು ಇಲ್ಲೊಂದು ಹೂಗಳಿವೆ.
ಮಕರಂದವಿಲ್ಲದೆ
ಜೇನುಗೂಡು ಛಿದ್ರವಾಗಿದೆ.
ಮಧುಪಾತ್ರೆ ಕರಡಿಯ ಪಾಲಾಗಿದೆ.

೩

ಈಗಿಲ್ಲಿ –
ಮುದುಕ ಸತ್ತುಹೋಗಿದ್ದಾನೆ.
ಹೊಸ ಮನೆಯೊಡೆಯ ಬಂದಿದ್ದಾನೆ.
ತೋಟದಲ್ಲಿ –
ಮಲ್ಲಿಗೆ ಮೊಗ್ಗು ಬಿಡುವುದಿಲ್ಲ,
ಗುಲಾಬಿಯಲ್ಲಿ ಪಕಳೆಗಳೇ ಇಲ್ಲ.
ಮತ್ತೊಂದು ಹೂದೋಟ,
ಮನೆಯೊಡೆಯನಿಗೆ ಬೇಕಾಗಿಲ್ಲ.
ಆದರೂ
ವಟಗುಟ್ಟುವಿಕೆ ಮಾತ್ರ ನಿಂತಿಲ್ಲ,
ಇಲ್ಲಿ ಹೂಗಳು ಅರಳಿದ್ದವೆಂದು !

**ಅರವಿಂದ ಚೊಕ್ಕಾಡಿ**
ಕಮಲದೀಪ, ಕೆಳ್ಳೂರು ಕ್ರಾಸ್ ರಸ್ತೆ, ಕಾರ್ಕಳ-೫೭೪ ೧೦೪

**ಜೂನ್** ೨೧, ೨೦೦೨ಕ್ಕೆ ಪಶ್ಚಿಮ ಬಂಗಾಳದ ಎಡರಂಗ ಸರ್ಕಾರ ಅಸ್ತಿತ್ವಕ್ಕೆ ಬಂದು ೨೫ ವರ್ಷಗಳಾದವು. ಎಡಪಕ್ಷಗಳ ಒಂದು ಒಕ್ಕೂಟವು ಸತತವಾಗಿ ಆರು ಬಾರಿ ಮೂರನೇ ಎರಡರಷ್ಟು ಸ್ಥಾನಗಳನ್ನು ವಿಧಾನಸಭಾ ಚುನಾವಣೆಯಲ್ಲಿ ಪಡೆದು ಭಾರತದಲ್ಲೇ ಏಕೆ, ವಿಶ್ವದಲ್ಲೇ ಒಂದು ಅಪೂರ್ವ ಚರಿತ್ರಾರ್ಹ ದಾಖಲೆಯನ್ನು ನಿರ್ಮಿಸಿದೆ; ವಿವಿಧ ರಂಗಗಳಲ್ಲೂ ಇಡೀ ದೇಶದಲ್ಲಿ ತನ್ನದೇ ಆದ ಛಾಪನ್ನು ಒತ್ತಿದೆ. ಈ ಸಂದರ್ಭದಲ್ಲಿ ಇತ್ತೀಚೆಗೆ ತಾನೆ ಬೆಂಗಳೂರಿಗೆ ಬಂದಿದ್ದ ಪಶ್ಚಿಮ ಬಂಗಾಳ ಸರ್ಕಾರದ ಉನ್ನತ ಶಿಕ್ಷಣ ಸಚಿವ ಪ್ರೊ. ಸತ್ಯಸಾಧನ ಚಕ್ರವರ್ತಿಯವರನ್ನು ಬೆಂಗಳೂರಿನ ಆಚಾರ್ಯ ಪಾಠಶಾಲಾ ಸಂಜೆ ಕಾಲೇಜಿನ ಅಧ್ಯಾಪಕರುಗಳಾದ ಟಿ. ವೆಂಕಟೇಶ ಮೂರ್ತಿ, ಟಿ. ಶ್ರೀನಿವಾಸ ಮೂರ್ತಿ, ಜೆ. ವಿಜಯಕುಮಾರ್ ಮತ್ತು ತಿಪಟೂರಿನ ಪಲ್ಲಾಗಟ್ಟೆ ಅಡವಪ್ಪ ಕಾಲೇಜಿನ ಅಧ್ಯಾಪಕ ಎಚ್. ಸಿ. ಜಗದೀಶ್ ಅವರುಗಳು ಭೇಟಿ ಮಾಡಿ ಪಶ್ಚಿಮ ಬಂಗಾಳದ ಉನ್ನತ ಶಿಕ್ಷಣ ಸ್ಥಿತಿಗತಿಗಳ ಬಗ್ಗೆ ಚರ್ಚಿಸಿದರು. ಸಂದರ್ಶನದ ಆಯ್ದ ಭಾಗಗಳನ್ನು 'ಹೊಸತು'ವಿಗಾಗಿ ಪ್ರೊ॥ ಟಿ. ವೆಂಕಟೇಶ ಮೂರ್ತಿ ಸಿದ್ಧಗೊಳಿಸಿಕೊಟ್ಟಿದ್ದಾರೆ.

**ಜೆ. ವಿಜಯ ಕುಮಾರ್:** ನೀವು ಸತತವಾಗಿ ಮೂರನೇ ಅವಧಿಗೆ ಪಶ್ಚಿಮ ಬಂಗಾಳ ಸರ್ಕಾರದ ಉನ್ನತ ಶಿಕ್ಷಣ ಸಚಿವರಾಗಿರುವುದಕ್ಕೆ ಕಾರಣವೇನು? ಒಬ್ಬನೇ ವ್ಯಕ್ತಿ ಮೂರು ಅಥವಾ ನಾಲ್ಕು ಅವಧಿಗಳ ಕಾಲ ಒಂದೇ ಖಾತೆಯಲ್ಲಿ ಸಚಿವರಾಗಿ ಮುಂದುವರಿಯುವುದು ಒಳ್ಳೆಯದೇ ?



ಪಶ್ಚಿಮ ಬಂಗಾಳದ ಉನ್ನತ ಶಿಕ್ಷಣ ಸಚಿವರೊಂದಿಗೆ ಸಂದರ್ಶನ

# ಉನ್ನತ ಶಿಕ್ಷಣ: 25 ವರ್ಷಗಳಲ್ಲಿ ಪಶ್ಚಿಮ ಬಂಗಾಳದ ಛಾಪುಗಳು

**ಸತತವಾಗಿ ಮೂರನೇ ಬಾರಿಗೆ ಪಶ್ಚಿಮ ಬಂಗಾಳ ಸರ್ಕಾರದ ಉನ್ನತ ಶಿಕ್ಷಣ ಸಚಿವರಾಗಿ ಸೇವೆ ಸಲ್ಲಿಸುತ್ತಿರುವ ಪ್ರೊ. ಸತ್ಯಸಾಧನ ಚಕ್ರವರ್ತಿಯವರದು ಅಪರೂಪದ ವ್ಯಕ್ತಿತ್ವ. ೧೯೩೩ರಲ್ಲಿ ಕಲ್ಕತ್ತದಲ್ಲಿ ಜನಿಸಿದ ಶ್ರೀ ಚಕ್ರವರ್ತಿಯವರು ತಮ್ಮ ಸ್ನಾತಕೋತ್ತರ ಶಿಕ್ಷಣದ ಬಳಿಕ ಕಲ್ಕತ್ತೆಯ ಹೆಸರಾಂತ ಈಶ್ವರಚಂದ್ರ ವಿದ್ಯಾಸಾಗರ ಕಾಲೇಜಿನಲ್ಲಿ ರಾಜಕೀಯಶಾಸ್ತ್ರದ ಅಧ್ಯಾಪಕರಾಗಿ, ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. ಅಧ್ಯಾಪನ ವೃತ್ತಿಯ ಜೊತೆಗೇ ಕಾಲೇಜು ಅಧ್ಯಾಪಕರ ಚಳವಳಿಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು ೧೯೭೮-೮೦ರ ಅವಧಿಗೆ ಬಹುಶಃ ದೇಶದಲ್ಲೇ ಅತಿ ದೊಡ್ಡದಾದ ೯೦೦೦ ಸದಸ್ಯ ಬಲವುಳ್ಳ ಪಶ್ಚಿಮ ಬಂಗಾಳ ಕಾಲೇಜು ಮತ್ತು ವಿಶ್ವವಿದ್ಯಾಲಯ ಅಧ್ಯಾಪಕರ ಸಂಘದ ಪ್ರಧಾನ ಕಾರ್ಯದರ್ಶಿಯಾಗಿ ಪ್ರಭಾವಯುತವಾಗಿ ಸೇವೆ ಸಲ್ಲಿಸಿದ್ದಾರೆ. ಅಧ್ಯಾಪನ ವೃತ್ತಿಯಲ್ಲಿದ್ದುಕೊಂಡೇ ೧೯೮೦ರಿಂದ ೮೪ರವರೆಗೆ ಲೋಕಸಭೆಗೆ ಸಿಪಿಐ(ಎಂ) ಪಕ್ಷದಿಂದ ಆರಿಸಿ ಬಂದು ಲೋಕಸಭೆಯಲ್ಲಿ ಆ ಪಕ್ಷದ ಉಪನಾಯಕರಾಗಿಯೂ ಸೇವೆ ಸಲ್ಲಿಸಿದ್ದಾರೆ. ಲೋಕಸಭೆಯಲ್ಲಿ ಇವರು ಕಾರ್ಯ ನಿರ್ವಹಿಸುತ್ತಿದ್ದ ವೈಖರಿಯಿಂದಾಗಿ ೧೯೮೩ರಲ್ಲಿ ಆಲ್ಜೀರಿಯಾದಲ್ಲಿ ಜರುಗಿದ ಆಫ್ರೋ – ಏಶಿಯಾದ ಶಾಂತಿ ಮತ್ತು ಬೆಳವಣಿಗೆ ಸಮ್ಮೇಳನಕ್ಕೆ ತೆರಳಿದ ಭಾರತದ ನಿಯೋಗದ ಸದಸ್ಯರಾಗಿದ್ದುದಷ್ಟೇ ಅಲ್ಲದೆ ಆ ಸಮ್ಮೇಳನವನ್ನುದ್ದೇಶಿಸಿ ಭಾರತದ ಪರವಾಗಿ ಮಾತನಾಡಲು ಅಂದಿನ ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರು ಇವರನ್ನು ಆರಿಸಿದ್ದು ಪ್ರೊ. ಸತ್ಯಸಾಧನ ಚಕ್ರವರ್ತಿಯವರ ಹೆಗ್ಗಳಿಕೆ. ಅಲ್ಲಿ ಇವರು ಮಾಡಿದ ಭಾಷಣದಿಂದ ಪುಳಕಗೊಂಡ ಆಲ್ಜೀರಿಯಾದ ಅಂದಿನ ಅಧ್ಯಕ್ಷರು ಇವರನ್ನು ತಮ್ಮ ಮನೆಗೆ ಉಪಾಹಾರಕ್ಕೆ ಆಹ್ವಾನಿಸಿದ್ದನ್ನು ಪ್ರೊ. ಚಕ್ರವರ್ತಿ ಸಂತೋಷದಿಂದ ಸ್ಮರಿಸಿಕೊಳ್ಳುತ್ತಾರೆ. ಅದೇ ವರ್ಷ ಉತ್ತರ ಕೊರಿಯಾ ಸರ್ಕಾರದ ಆಹ್ವಾನದ ಮೇರೆಗೆ ಅಲ್ಲಿಗೆ ಭೇಟಿ. ೧೯೮೧-೮೫ರವರೆಗೆ ಅಖಿಲ ಭಾರತ ವಿಶ್ವವಿದ್ಯಾಲಯ ಮತ್ತು ಕಾಲೇಜು ಅಧ್ಯಾಪಕರ ಸಂಘಗಳ ಒಕ್ಕೂಟದ (AIFUCTO) ರಾಷ್ಟ್ರೀಯ ಕಾರ್ಯದರ್ಶಿಯಾಗಿ ಸೇವೆ. ಆಂಗ್ಲ ಮತ್ತು ಬಂಗಾಳಿ ಭಾಷೆಗಳಲ್ಲಿ ರಾಜಕೀಯ ಶಾಸ್ತ್ರ, ತತ್ವಶಾಸ್ತ್ರ, ಬಂಗಾಳಿ – ಸಂಸ್ಕೃತ ಹಾಗೂ ಆಂಗ್ಲ ಸಾಹಿತ್ಯದ ಬಗೆಗೆ ನಿರರ್ಗಳವಾಗಿ ಮಾತನಾಡಬಲ್ಲರು. ಚಾರಣದಲ್ಲಿ ಆಸಕ್ತಿ, ಉತ್ತಮ ವಾಗ್ಮಿ, ಸರಳ ಹಾಗೂ ಸ್ನೇಹಮಯ ಜೀವನಕ್ಕೆ ಹೆಸರಾದವರು.**

*– ಟಿ. ವೆಂಕಟೇಶ ಮೂರ್ತಿ*

**ಸಚಿವರು :** ನಾನು ಯಶಸ್ವಿಯಾಗಿ ಕಾರ್ಯ ನಿರ್ವಹಿಸಿರುವುದರಿಂದ ಅದೇ ಖಾತೆಯನ್ನು ನನಗೆ ಕೊಡಲಾಗಿದೆಯೆಂದು ಭಾವಿಸುತ್ತೇನೆ. ಎಲ್ಲಿಯವರೆಗೆ ಒಬ್ಬ ವ್ಯಕ್ತಿ ತನ್ನ ಸ್ವಂತ ಹಿತಾಸಕ್ತಿಗೋಸ್ಕರ ಸಚಿವನಾಗಿರದೆ ರಾಜ್ಯದ ಬೆಳವಣಿಗೆಗಾಗಿ ಕಾರ್ಯ ನಿರ್ವಹಿಸುತ್ತಾನೋ ಅಲ್ಲಿಯವರೆಗೂ ಅವನು ಎಷ್ಟು ಅವಧಿಗೆ ಬೇಕಾದರೂ ಒಂದೇ ಖಾತೆಯಲ್ಲಿ ಸೇವೆ ಸಲ್ಲಿಸುವುದರಲ್ಲಿ ಯಾವ ತಪ್ಪಾಗಲಿ, ಅಪಾಯವಾಗಲಿ ಇಲ್ಲ. ಈ ಕಾರಣ ದಿಂದಾಗಿಯೇ ಶ್ರೀ. ಜ್ಯೋತಿ ಬಸುರವರು ಸತತವಾಗಿ ಐದು ಬಾರಿ ನಮ್ಮ ರಾಜ್ಯದ ಮುಖ್ಯಮಂತ್ರಿಯಾಗಿದ್ದುದು. ಹಾಗೆಯೇ ಸತತವಾಗಿ ಆರನೇ ಬಾರಿಗೆ ಶ್ರೀ. ಕಾಂತಿ ಬಿಶ್ವಾಸ್ ಅವರು ನಮ್ಮ ರಾಜ್ಯದ ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸಚಿವರಾಗಿ ಮುಂದುವರಿಯುತ್ತಿರುವುದು.

**ಟಿ. ವೆಂಕಟೇಶ ಮೂರ್ತಿ:** ಪಶ್ಚಿಮ ಬಂಗಾಳ ಸರ್ಕಾರ ಶಿಕ್ಷಣಕ್ಕೆ ತನ್ನ ಬಜೆಟ್‌ನಲ್ಲಿ ಎಷ್ಟು ಹಣವನ್ನು ಮೀಸಲಿಟ್ಟಿದೆ ? ಪಶ್ಚಿಮ ಬಂಗಾಳದಲ್ಲಿ ಕಾಲೇಜುಗಳ ಸಂಖ್ಯೆ ಎಷ್ಟು ?

**ಸಚಿವರು :** ೧೯೭೬-೭೭ರಲ್ಲಿ ಬಜೆಟ್‌ನಲ್ಲಿ ಶೇ.೧೨ ರಷ್ಟು ಹಣ ಶಿಕ್ಷಣಕ್ಕಾಗಿ ಮೀಸಲಾಗಿತ್ತು. ೨೦೦೦ – ೦೧ರ ವೇಳೆಗೆ ಅದು ಶೇ. ೨೫ಕ್ಕೆ ಏರಿತು. ನಮ್ಮ ರಾಜ್ಯದಲ್ಲಿ ಸರ್ಕಾರಿ ಮತ್ತು ಖಾಸಗಿ ಅನುದಾನಿತ ಕಾಲೇಜುಗಳ ಒಟ್ಟು ಸಂಖ್ಯೆ ೪೦೦. ಇವುಗಳಲ್ಲಿ ೩೧ ಕಾಲೇಜುಗಳನ್ನು ಜಿಲ್ಲಾ ಪರಿಷತ್‌ಗಳು ನಡೆಸುತ್ತವೆ.

**ಎಚ್. ಸಿ. ಜಗದೀಶ್ :** ಅನುದಾನ ಪಡೆಯದೇ ಇರುವ ಕಾಲೇಜುಗಳೆಷ್ಟು ?

**ಸಚಿವರು :** ಅಂತಹ ಕಾಲೇಜುಗಳು ನಮ್ಮಲ್ಲಿಲ್ಲ.

**ಜೆ. ವಿ. ಕು :** ಖಾಸಗಿ ಕಾಲೇಜುಗಳ ಮೇಲಿನ

ಹತೋಟಿ ಆಡಳಿತ ಮಂಡಳಿಗಳದ್ದೆಷ್ಟು ? ಸರ್ಕಾರದ್ದೆಷ್ಟು ?

**ಸಚಿವರು** : ಸರ್ಕಾರ ಖಾಸಗಿ ಕಾಲೇಜುಗಳ ಆಡಳಿತ ಮಂಡಳಿಯ ಸ್ವರೂಪವನ್ನು ನಿರ್ಧರಿಸುತ್ತದೆ. ಈಗಿನ ನಿಯಮಾವಳಿಗಳ ಪ್ರಕಾರ ಪ್ರತಿ ಆಡಳಿತ ಮಂಡಳಿಯಲ್ಲಿ ೧೧ ಮಂದಿ ಇರುತ್ತಾರೆ. ಇವರಲ್ಲಿ ನಾಲ್ವರು ಶಿಕ್ಷಕರು, ಇಬ್ಬರು ಶಿಕ್ಷಕೇತರರು, ಒಬ್ಬ ವಿದ್ಯಾರ್ಥಿ(ಎಲ್ಲರೂ ಚುನಾಯಿತರಾದವರು), ಇಬ್ಬರು

**ಟಿ. ವೆಂಕಟೇಶ ಮೂರ್ತಿ**

ವಿಶ್ವವಿದ್ಯಾಲಯದ ಮತ್ತು ಇಬ್ಬರು ಸರ್ಕಾರದ ಪ್ರತಿನಿಧಿಗಳಿರುತ್ತಾರೆ. (ಯಾವುದೇ ಸಚಿವರಿಗಾಗಲಿ, ವಿಧಾನಸಭಾ ಸದಸ್ಯರಿಗಾ ಗಲಿ ಇಲ್ಲಿ ಸ್ಥಾನವಿಲ್ಲ.) ಇವರೆಲ್ಲ ಸೇರಿ ಅಧ್ಯಕ್ಷರು ಹಾಗೂ ಕಾರ್ಯದರ್ಶಿ ಮತ್ತಿತರ ಪದಾಧಿಕಾರಿಗಳನ್ನು ಚುನಾಯಿ ಸುತ್ತಾರೆ. ಯಾವುದೇ ಒಬ್ಬ ವ್ಯಕ್ತಿಯ ಹೆಸರಿನಲ್ಲಿ ಕಾಲೇಜಿನ ಆಸ್ತಿಪಾಸ್ತಿಯಿರುವುದಿಲ್ಲ. ಸರ್ಕಾರ ಶೇ.೧೦೦ರಷ್ಟು ಅನುದಾನ (ಗ್ರಂಥಾಲಯಕ್ಕೆ, ಪ್ರಯೋಗಾಲಯಗಳಿಗೆ, ವೇತನ ಇತ್ಯಾದಿಗಳಿಗೆ) ನೀಡುತ್ತದೆ.

**ಟಿ. ವೆಂ. ಮೂರ್ತಿ**: ನಿಮ್ಮಲ್ಲಿ ಎಷ್ಟು ಜನ ಸಚಿವರು ಅಥವಾ ವಿಧಾನಸಭಾ ಸದಸ್ಯರು ತಮ್ಮದೇ ಆದ ಕಾಲೇಜುಗಳನ್ನು ಹೊಂದಿದ್ದಾರೆ?

**ಸಚಿವರು** : ಒಬ್ಬರೂ ಇಲ್ಲ.

**ಟಿ. ಶ್ರೀನಿವಾಸಮೂರ್ತಿ**: ವಿರೋಧ ಪಕ್ಷಗಳವರು ?

**ಸಚಿವರು** : ಯಾವುದೇ ಪಕ್ಷದ ರಾಜಕಾರಣಿಗೂ ಒಂದು ಶಿಕ್ಷಣ ಸಂಸ್ಥೆಯನ್ನು ಮಂಜೂರು ಮಾಡಲಾಗುವುದಿಲ್ಲ.

**ಎಚ್. ಸಿ. ಜಗದೀಶ್**: ಕಾರಣವೇನು ?

**ಸಚಿವರು** : ಕಾರಣ ಸ್ಪಷ್ಟವಾಗಿದೆ. ಜನಹಿತಕ್ಕಾಗಿ, ರಾಜ್ಯದ ಏಳಿಗೆಗಾಗಿ ದುಡಿಯುತ್ತೇವೆಂದು ಹೇಳುವ



*ಸಚಿವರೊಡನೆ ಸಂಭಾಷಣೆಯಲ್ಲಿ ಪ್ರೊ|| ಟಿ. ವೆಂಕಟೇಶ ಮೂರ್ತಿ*

ರಾಜಕಾರಣಿಗಳಿಗೆ ತಮ್ಮದೇ ಆದ, ಸ್ವಂತ ಶಿಕ್ಷಣ ಸಂಸ್ಥೆಗಳೇಕೆ ಬೇಕು ? ಶಿಕ್ಷಣದ ಸಂಪೂರ್ಣ ಜವಾಬ್ದಾರಿ ರಾಜ್ಯ ಸರ್ಕಾರದ್ದು. ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರ ಕೆಲವು ಕಾಲೇಜುಗಳಿರುವುದು (ಸಂವಿಧಾನಾತ್ಮಕವಾಗಿ) ನಿಜ.

**ಟಿ. ಶ್ರೀ. ಮೂರ್ತಿ**: ಪಶ್ಚಿಮ ಬಂಗಾಳ ಸರ್ಕಾರ ಸಾಂಪ್ರದಾಯಿಕ ಕೋರ್ಸುಗಳಿಗೆ ನೀಡುವ ಆದ್ಯತೆ ಎಷ್ಟು? ವೃತ್ತಿಪರ ಕೋರ್ಸುಗಳಿಗೆ ನೀಡುವ ಆದ್ಯತೆ ಎಷ್ಟು ?

**ಸಚಿವರು** : ನಮ್ಮ ಸರ್ಕಾರ ಸಾಂಪ್ರದಾಯಿಕ ಕೋರ್ಸುಗಳಿಗೆ ಶೇ.೯೦ರಷ್ಟು ಆದ್ಯತೆ ನೀಡುತ್ತಿದೆ. ಈಗೀಗ ವೃತ್ತಿಪರ ಶಿಕ್ಷಣದ ಕಡೆಗೂ ಗಮನ ಹರಿಸುತ್ತಿದೆ. ಆದರೆ ವೃತ್ತಿಪರ ಶಿಕ್ಷಣ ಎಂದರೆ ವೈದ್ಯಕೀಯ ಮತ್ತು ಎಂಜಿನಿಯರಿಂಗ್ ಶಿಕ್ಷಣವೆಂದಷ್ಟೇ ಅಲ್ಲ. Performing Artsಗಾಗಿಯೇ ಒಂದು ವಿಶ್ವವಿದ್ಯಾನಿಲಯ ಸ್ಥಾಪನೆಯಾಗಿದೆ. ಇತ್ತೀಚೆಗೆ ಪಶ್ಚಿಮ ಬಂಗಾಳ ಕಾನೂನು ವಿಜ್ಞಾನ ವಿಶ್ವವಿದ್ಯಾಲಯವನ್ನು (West Bengal University of Judicial Sciences) ಸ್ಥಾಪಿಸಲಾಗಿದೆ. ಸದ್ಯಕ್ಕೆ ವರ್ಷಕ್ಕೆ ೧೦,೦೦೦ ಎಂಜಿನಿಯರಿಂಗ್ ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡಲಾಗುತ್ತಿದೆ. ವಿವಿಧ Management ಕೋರ್ಸುಗಳೂ ಪ್ರಾರಂಭವಾಗಿವೆ.

**ಜಿ. ವಿ. ಕು** : ಪಶ್ಚಿಮ ಬಂಗಾಳದಿಂದ ಕರ್ನಾಟಕದಂಥ ರಾಜ್ಯಗಳಿಗೆ ವಿದ್ಯಾರ್ಥಿಗಳು ವೃತ್ತಿಪರ ಶಿಕ್ಷಣ ಪಡೆಯಲು ವಲಸೆ ಬರುತ್ತಿದ್ದಾರೆ. ನಿಮ್ಮಲ್ಲೇ ಏಕೆ ಇವರನ್ನೆಲ್ಲ ಉಳಿಸಿಕೊಳ್ಳಬಾರದು ?

**ಸಚಿವರು** : ನಮ್ಮ ಅಗತ್ಯಕ್ಕೆ ತಕ್ಕಷ್ಟು ವೃತ್ತಿಪರ ಕಾಲೇಜುಗಳನ್ನು ಹೊಂದಿದ್ದೇವೆ. ಡೊನೇಷನ್, ಕ್ಯಾಪಿಟೇಷನ್ ಫೀಗಳನ್ನು ನೀಡಿ ಶಿಕ್ಷಣ ಪಡೆಯಲು ಸಾಧ್ಯವಾಗುವ ಶ್ರೀಮಂತರ ಮಕ್ಕಳು ಮಾತ್ರ ನಮ್ಮ ರಾಜ್ಯದಿಂದ ಹೊರಗೆ ಹೋಗುತ್ತಿದ್ದಾರೆ. ಬಡವರ ಕೈಗೂ ಎಟುಕುವಂಥ ಶಿಕ್ಷಣಕ್ಕೆ ನಮ್ಮ ಆದ್ಯತೆ.

**ಟಿ. ಶ್ರೀ. ಮೂರ್ತಿ** : ಕಾಲೇಜು ಅಧ್ಯಾಪಕರಿಗೆ ಮೀಸಲಾತಿ ಸೌಲಭ್ಯ ಎಷ್ಟಿದೆ ?

**ಸಚಿವರು** : ಸಂವಿಧಾನಾತ್ಮಕವಾಗಿ ಹಾಗೂ ಯು. ಜಿ. ಸಿ. (ವಿಶ್ವವಿದ್ಯಾನಿಲಯ ಧನಸಹಾಯ ಆಯೋಗ) ನಿಯಮಾವಳಿಗನುಸಾರವಾಗಿ ಮೀಸಲಾತಿಯನ್ನು ನೀಡಲಾಗುತ್ತಿದೆ.

**ಎಚ್. ಸಿ. ಜಗದೀಶ್**: ನಿರುದ್ಯೋಗಿ ಪದವೀಧರರ ಕಡೆಗೆ ಸರ್ಕಾರ ಗಮನ ಹರಿಸಿದೆಯೇ ?

**ಸಚಿವರು** : ಸದ್ಯಕ್ಕೆ ಅಂತಹವರಿಗೆ ಮಾಸಿಕ ೧೦೦ ರೂ. ನಿರುದ್ಯೋಗ ಭತ್ಯೆ ನೀಡಲಾಗುತ್ತಿದೆ.

**ಟಿ. ವೆಂ. ಮೂರ್ತಿ**: ನಿಮ್ಮ ವಿಶ್ವವಿದ್ಯಾಲಯಗಳ ವೈಶಿಷ್ಟ್ಯತೆ ಏನು ?

**ಸಚಿವರು** : ವಿಶ್ವವಿದ್ಯಾಲಯಗಳಿಗೆ ಸಂಪೂರ್ಣ ಸ್ವಾಯತ್ತತೆಯನ್ನು ನೀಡಿರುವುದು. ನಮ್ಮೆಲ್ಲ ವಿಶ್ವವಿದ್ಯಾಲಯಗಳಲ್ಲೂ ಚುನಾಯಿತ ಕುಲಪತಿ (Vice – Chancellor)ಗಳಿದ್ದಾರೆ.

**ಜಿ. ವಿ. ಕು** : ಆಶ್ಚರ್ಯ! ಕುಲಪತಿಗಳನ್ನು ಹೇಗೆ ಚುನಾಯಿಸಲಾಗುತ್ತದೆ ?

**ಸಚಿವರು** : ಕಲ್ಕತ್ತ ವಿಶ್ವವಿದ್ಯಾಲಯದ ಸೆನೇಟ್ ಮೊದಲು ಮೂರು ಮಂದಿಯ ಪಟ್ಟಿಯನ್ನು ತಯಾರಿಸುತ್ತದೆ. ಅವರಲ್ಲೇ ಒಬ್ಬರನ್ನು ನಂತರ ಕುಲಪತಿಯನ್ನಾಗಿ ಚುನಾಯಿಸುತ್ತದೆ. ಇದೇ ಮಾದರಿಯಲ್ಲಿ ಉಳಿದ ವಿಶ್ವವಿದ್ಯಾಲಯಗಳ Courtಗಳು ತಮ್ಮ ಕುಲಪತಿಗಳನ್ನು ಚುನಾಯಿಸುತ್ತವೆ.

**ಟಿ. ವೆಂ. ಮೂರ್ತಿ** : ವಿಶ್ವವಿದ್ಯಾಲಯಗಳಲ್ಲಿ ನಿಮ್ಮ ಹಸ್ತಕ್ಷೇಪವೆಷ್ಟಿದೆ ?

**ಸಚಿವರು** : ಸ್ವಲ್ಪವೂ ಇಲ್ಲ. ರಾಜ್ಯದ ಉನ್ನತ ಶಿಕ್ಷಣ ಸಚಿವನಾಗಿದ್ದೂ ವಿಶ್ವವಿದ್ಯಾಲಯಗಳ ಘಟಿಕೋತ್ಸವಗಳಲ್ಲಿಯೂ ಸಹ ನಾನು ಭಾಗವಹಿಸುವುದಿಲ್ಲ.

**ಜಿ. ವಿ. ಕು** : ಕಡೆಯ ಪ್ರಶ್ನೆ. ಇತ್ತೀಚಿನ ವರ್ಷಗಳಲ್ಲಿ ರಾಜ್ಯ ಸರ್ಕಾರಗಳು ಶಿಕ್ಷಣ ಸಂಸ್ಥೆಗಳಿಗೆ ಅನುದಾನ ನೀಡುವುದನ್ನು ನಿಲ್ಲಿಸಿ ಸಂಪೂರ್ಣ ಖಾಸಗೀಕರಣವನ್ನು ಉತ್ತೇಜಿಸುತ್ತಿವೆ. ನಿಮ್ಮ ಸರ್ಕಾರದ ನಿಲುವೇನು?

**ಸಚಿವರು** : ಅನುದಾನ ನಿಲ್ಲಿಸುವ ಪ್ರಶ್ನೆಯೇ ಇಲ್ಲ. ನೂತನವಾಗಿ ಪ್ರಾರಂಭವಾಗುವ ಶಿಕ್ಷಣ ಸಂಸ್ಥೆಗಳಿಗೂ ಶೇ.೧೦೦ರಷ್ಟು ಅನುದಾನ ನಿಡಲಾಗುತ್ತಿದೆ. ಆದರೆ ಅಗತ್ಯವಿರುವಷ್ಟು ಶಾಲಾ ಕಾಲೇಜುಗಳನ್ನು ಮಾತ್ರ ಪ್ರಾರಂಭಿಸಲಾಗುತ್ತಿದೆ. ❑



*ಎಡದಿಂದ ಬಲಕ್ಕೆ : ಎಚ್. ಸಿ. ಜಗದೀಶ್, ಟಿ. ವೆಂಕಟೇಶ ಮೂರ್ತಿ, ಪ್ರೊ. ಸತ್ಯಸಾಧನ ಚಕ್ರವರ್ತಿ, ಜಿ. ವಿಜಯಕುಮಾರ್, ಟಿ. ಶ್ರೀನಿವಾಸಮೂರ್ತಿ*

# ಅಭಿವೃದ್ಧಿಯ ಕೇಸರೀಕರಣ



***ಮರ್ಸಿಡಿಸ್ ಬೆಂಜ್ ಕಾರು ಅಭಿವೃದ್ಧಿಯಲ್ಲವೆಂದು ಜೋಶಿಯವರು ಅಪ್ಪಣೆ ಕೊಡಿಸುತ್ತಾರೆ. ಹಾಗಾದರೆ ರಥಯಾತ್ರೆ ಅಭಿವೃದ್ಧಿಯೋ ? ಶಿಲಾ ಪೂಜ್ಯವು ಅಭಿವೃದ್ಧಿಯೋ ? ದುಡಿಮೆ-ಬೆವರು-ಕಣ್ಣೀರು-ರಕ್ತ ಕುರಿತಂತೆ ಅಸಹ್ಯ ಪಟ್ಟುಕೊಳ್ಳುವ ಸನಾತನವಾದಿ ಜನರು ಅಭಿವೃದ್ಧಿ ಕುರಿತಂತೆ ಮಾತನಾಡುವುದನ್ನು ನಿಲ್ಲಿಸಬೇಕು.***

**ಡಾ॥ ಟಿ. ಆರ್. ಚಂದ್ರಶೇಖರ**

**ಕೇ**ಂದ್ರ ಸರ್ಕಾರದ ಮಾನವ ಸಂಪನ್ಮೂಲ ಅಭಿವೃದ್ಧಿ ಸಚಿವರಾದ ಡಾ॥ ಮುರಳಿ ಮನೋಹರ ಜೋಶಿಯವರು ಶಾಲಾ ಪಠ್ಯ ಮತ್ತು ಶಾಲಾ ಪುಸ್ತಕಗಳ ಕೇಸರೀಕರಣ ಯೋಜನೆಯ ನಂತರ ಇದೀಗ ಯು.ಎನ್.ಡಿ.ಪಿ.ಯು ಪ್ರಕಟಿಸುತ್ತಿರುವ ಮಾನವ ಅಭಿವೃದ್ಧಿ ವರದಿ ಹಾಗೂ ಅದರಲ್ಲಿನ ಮಾನವ ಅಭಿವೃದ್ಧಿ ಸೂಚ್ಯಂಕ ಕುರಿತಂತೆ ಟೀಕೆ ಮಾಡುವುದರ ಮೂಲಕ ಅಭಿವೃದ್ಧಿಯನ್ನು ಕೇಸರೀಕರಣಗೊಳಿಸುವ ಕಾರ್ಯಕ್ಕೆ ಕೈಹಾಕಿದಂತೆ ಕಾಣುತ್ತದೆ. ಅಭಿವೃದ್ಧಿಯಲ್ಲಿ 'ದೇಹ-ಮನಸ್ಸು-ಬುದ್ಧಿಶಕ್ತಿ-ಜೀವಾತ್ಮ'ಗಳು ಮುಖ್ಯವೇ ವಿನಾ ಅಕ್ಷರ - ಆರೋಗ್ಯ - ಆಹಾರ - ಆಶ್ರಯ-ಆದಾಯಗಳಲ್ಲವೆಂದು ತಮ್ಮ ಒಂದು ಮೀಮಾಂಸೆಯನ್ನು ಮಂಡಿಸಿದ್ದಾರೆ. ವೈದಿಕಶಾಹಿ ನೆಲೆಯಲ್ಲಿ ಇದಕ್ಕಿಂತ ಭಿನ್ನವಾದ ಅಭಿವೃದ್ಧಿಯ ನಿರ್ವಚನವನ್ನು ಬಯಸುವುದು ಮೂರ್ಖತನವೆನ್ನುವುದು ಬೇರೆ ಮಾತು. ಆದರೆ ಜೋಶಿಯವರ ವಾದಸರಣಿಯನ್ನು ಸುಲಭವಾಗಿ ತಳ್ಳಿಹಾಕಲು ಸಾಧ್ಯವಿಲ್ಲ.

ಜೋಶಿಯವರು ಪದಾರ್ಥವಾದಿ ಬೆಳವಣಿಗೆ ಹಾಗೂ ಅಪರಾಧಗಳ ತೀವ್ರತೆ ನಡುವೆ ಅನುಲೋಮ ಸಂಬಂಧವನ್ನು ಗುರುತಿಸುತ್ತಾರೆ. ಎಲ್ಲಿ ಪದಾರ್ಥವಾದಿ ಬೆಳವಣಿಗೆ-ಲೌಕಿಕ ಸಮೃದ್ಧತೆ ಉನ್ನತವಾಗಿರುವುದೋ ಅಲ್ಲಿ ಅಪರಾಧಗಳ ತೀವ್ರತೆ ಅಧಿಕವಾಗಿರುತ್ತದೆ (ಅಂದರೆ, ನಮ್ಮಲ್ಲಿ ಅಪರಾಧದ ಪ್ರಮಾಣ ಇನ್ನೂ ಸಾಲದು !!). ಎಲ್ಲಿ ಪರಮಾರ್ಥವು ಉನ್ನತವಾಗಿರುತ್ತದೋ ಅಲ್ಲಿ ಅಪರಾಧಗಳು ಕಡಿಮೆಯಾಗಿರುತ್ತವೆ. ಇದು ಜೋಶಿಯವರ ಅಭಿವೃದ್ಧಿ ಸಂಬಂಧಿ ಸಮೀಕರಣ. ಪದಾರ್ಥ ಮತ್ತು ಪರಮಾರ್ಥಗಳು ಪರಸ್ಪರ ವಿರೋಧವೆಂಬುದು ಜೋಶಿಯವರ ಅಭಿವೃದ್ಧಿ ಮೀಮಾಂಸೆಯ ಮುಖ್ಯ ಆಶಯವಾಗಿದೆ. ಪದಾರ್ಥ ಮತ್ತು ಪರಮಾರ್ಥಗಳು ಪರಸ್ಪರ ವಿರೋಧವೆಂದು ವೈದಿಕಶಾಹಿ ಮಾತ್ರ ಹೇಳಬಲ್ಲದು. ಈ ದೇಶದ ದುಡಿಯುವ ಜನರ ದುಡಿಮೆ ಸಂಸ್ಕೃತಿಯ ಪ್ರಾಥಮಿಕ ಪರಿಚಯವಿರುವವರೆಲ್ಲರಿಗೂ ಪದಾರ್ಥ-ಪರಮಾರ್ಥ ಇವೆರಡೂ ಬೇರೆ ಬೇರೆಯಲ್ಲವೆಂಬುದು ಗೊತ್ತಿದೆ. ಅಂಬಿಗರ ಚೌಡಯ್ಯನೆಂಬ ಶರಣ ೧೨ನೇ ಶತಮಾನದಲ್ಲಿ 'ದೇಹಾರಕ್ಕೆ ಆಹಾರವೇ ನಿಚ್ಚಣಿಕೆ' ಯೆಂದು ಹೇಳುತ್ತಾನೆ. ಮುಂದುವರಿದು 'ದೇಹಾರವ ಮಾಡುತ್ತ ಆಹಾರವನ್ನಿಕ್ಕದಿದ್ದರೆ' ಅಲ್ಲಿ ಪರಮಾರ್ಥವಿಲ್ಲವೆಂದು ಹೇಳುತ್ತಾನೆ. ಈ ದೇಶದಲ್ಲಿ ಅನಾದಿಕಾಲದಿಂದಲೂ ಶೂದ್ರ-ದಲಿತ ಸಂಸ್ಕೃತಿ ಪ್ರತಿಪಾದಿಸಿಕೊಂಡು ಬಂದಿರುವ ತತ್ವಜ್ಞಾನವೆಂದರೆ 'ಪದಾರ್ಥ ಪ್ರಾಥಮಿಕ, ಪರಮಾರ್ಥ ಆನುಷಂಗಿಕ.' ಆಯ್ದಕ್ಕಿ ಲಕ್ಕಮ್ಮ, ಮೋಳಿಗೆ ಮಹಾದೇವಮ್ಮ, ನುಲಿಯ ಚಂದಯ್ಯ ಮುಂತಾದ ದುಡಿಮೆ ಸಂಸ್ಕೃತಿಯ ಪ್ರತಿಪಾದಕರಿಗೆ ಪದಾರ್ಥ-ಪರಮಾರ್ಥಗಳು ಬೇರೆ ಬೇರೆಯಾಗಿ ಕಾಣಲಿಲ್ಲ. ಪದಾರ್ಥದಿಂದಲೇ ಪರಮಾರ್ಥವನ್ನು ಕಾಣಬೇಕೆಂಬುದನ್ನು ನಮ್ಮ ಸಮಾಜದ ದುಡಿಮೆ ಸಂಸ್ಕೃತಿಯು ಪ್ರತಿಪಾದಿಸಿಕೊಂಡುಬಂದಿದೆ.

ಜೋಶಿಯವರ ಅಭಿವೃದ್ಧಿ ಮೀಮಾಂಸೆಯನ್ನು ಒಪ್ಪುವುದಾದರೆ, ಪರಮಾರ್ಥವನ್ನೇ ಬೀಜ ಮಂತ್ರವನ್ನಾಗಿ ಮಾಡಿಕೊಂಡಿರುವ ಪಕ್ಷವೇ ಅಧಿಕಾರದಲ್ಲಿರುವ ಗುಜರಾತ್‌ನಲ್ಲಿ ರಕ್ತಪಾತವೇಕೆ ನಡೆಯಿತು ? ಮಹಿಳೆಯರನ್ನು ಮಕ್ಕಳನ್ನು ಆಯ್ದು-ಆಯ್ದು ಅತ್ಯಾಚಾರವೆಸಗಿ ಕೊಚ್ಚಿ ಕೊಂದುಹಾಕಿದ್ದು ಏಕೆ ? ಪರಮಾರ್ಥಕ್ಕೆ ಶಸ್ತ್ರಾಸ್ತ್ರಗಳು ಬೇಕೇ ? ಪರಮಾರ್ಥವನ್ನು ಬೋಧಿಸುವ ಜನರೇಕೆ ವಿದ್ವೇಷದ ಭಾಷೆಯನ್ನಾಡುತ್ತಿದ್ದಾರೆ ? ಹಿಂಸೆ-ಹತ್ಯಾಕಾಂಡಗಳ ದಳ್ಳುರಿಯಲ್ಲಿ ಬೆಂದುಹೋಗುತ್ತಿರುವ ಗುಜರಾತ್ ಲೌಕಿಕವಾಗಿ ಸಮೃದ್ಧಿಯನ್ನು ಸಾಧಿಸಿಕೊಂಡಿರುವ ರಾಜ್ಯವೇನೂ ಅಲ್ಲ!

**ಮಾನವ ಅಭಿವೃದ್ಧಿ ಮತ್ತು ಪರಮಾರ್ಥ ಸಾಧನೆ**

ಮೆಹಬೂಬ್-ಉಲ್-ಹಕ್ ಮತ್ತು ಅಮರ್ತ್ಯ ಸೆನ್ ರೂಪಿಸಿರುವ 'ಮಾನವ ಅಭಿವೃದ್ಧಿ' ವಿಚಾರ ಪ್ರಣಾಳಿಕೆಯಲ್ಲಿನ 'ಮಾನವ' ಎಂಬ ಗುರಿಯನ್ನು ಜೋಶಿಯವರು ತಪ್ಪಾಗಿ ಅರ್ಥಮಾಡಿಕೊಂಡಿರುವಂತೆ ಕಾಣುತ್ತದೆ. ಇಲ್ಲಿ ಹಕ್-ಸೆನ್‌ರವರು ಸಚ್ಚಾರಿತ್ಯ - ಸನ್ನಡತೆಗಳನ್ನು ಕಟ್ಟುವ ಕೆಲಸ ಮಾಡುತ್ತಿಲ್ಲ. ಸಮಾಜದಲ್ಲಿ ಹರಿದುಬರುವ ಅವಕಾಶಗಳನ್ನು ತನ್ನದಾಗಿಸಿಕೊಳ್ಳುವ ಜನರ ಸಾಮರ್ಥ್ಯವನ್ನು ಇಲ್ಲಿ ಹಕ್-ಸೆನ್‌ರವರು 'ಮಾನವ ಅಭಿವೃದ್ಧಿ'ಯೆಂದು ಕರೆದಿದ್ದಾರೆ. 'ಅವಕಾಶಗಳ ವರ್ಧನೆ' ಮತ್ತು ವರ್ಧಿತ ಅವಕಾಶಗಳ 'ಧಾರಣೆ'ಗಳನ್ನು ಇಲ್ಲಿ ಅಭಿವೃದ್ಧಿಯೆಂದು ಕರೆಯಲಾಗಿದೆ. ಜನರ ಧಾರಣ ಶಕ್ತಿಯನ್ನು ನಿರ್ಧರಿಸುವ ಸಂಗತಿಗಳೆಂದರೆ ಅಕ್ಷರ ಜ್ಞಾನ, ಆರೋಗ್ಯ ಭಾಗ್ಯ, ಆಹಾರದ ಭದ್ರತೆ ಮುಂತಾದವು. ಇದು ಮಾನವ ಅಭಿವೃದ್ಧಿ. ಇಲ್ಲಿ ಅಭಿವೃದ್ಧಿಯೆನ್ನುವುದು 'ಸಾಧನ'ವೂ ಹೌದು ಮತ್ತು 'ಸಾಧ್ಯ'ವೂ ಹೌದು.

ಜೋಶಿಯವರು ಹೇಳುವ ಸಚ್ಚಾರಿತ್ಯಶೀಲ ಸಂಪನ್ನತೆಯೆಂಬುದು ಶೂನ್ಯದಲ್ಲಿ ಸಂಭವಿಸುವ ಸಂಗತಿಯಲ್ಲ. ಅದು ಒಂದು ಸಾಮಾಜಿಕ ಚೌಕಟ್ಟಿನಲ್ಲಿ, ಆರ್ಥಿಕ-ರಾಜಕೀಯ ಸಂದರ್ಭದಲ್ಲಿ ಸಂಭವಿಸುವ ಒಂದು ಗುಣ. ಹಸಿವು, ಬಡತನ, ನಿರುದ್ಯೋಗ, ಅಜ್ಞಾನಗಳು ತುಂಬಿರುವ ಸಾಮಾಜಿಕ ಸಂದರ್ಭದಲ್ಲಿ ಸಚ್ಚಾರಿತ್ಯಶೀಲ ಸಂಪನ್ನತೆ ಬಗ್ಗೆ ಮಾತನಾಡುವುದು ತುಂಬಾ ಅಪ್ರಸ್ತುತ. ಪರಮಾರ್ಥಕ್ಕೆ ಮಾನವ ಅಭಿವೃದ್ಧಿಯೇ ಮೂಲವಾಗಿದೆ. ದುಡಿಯುವ ಮಂದಿಗೆ ಅನ್ನ ಬೇಕು, ನೀರು ಬೇಕು, ಸೂರು ಬೇಕು, ಜೀವಕ್ಕೆ ಭದ್ರತೆ ಬೇಕು. ಅವರಿಗೆ ಜಪಮಣಿ ಬೇಡ, ತ್ರಿಶೂಲ-ಇಟ್ಟಿಗೆಗಳು ಬೇಡ. ಏಕೆಂದರೆ ಅವುಗಳಿಂದ ಹಸಿವು ಹಿಂಗುವುದಿಲ್ಲ.

**ವೈದಿಕ ಪ್ರಣೀತ ಅಭಿವೃದ್ಧಿ ವಿಚಾರ ಪ್ರಣಾಳಿಕೆ**

ಇಂದು ಕೇಂದ್ರದಲ್ಲಿ ಸರ್ಕಾರವನ್ನು ನಡೆಸುತ್ತಿರುವ ಮಂದಿಗೆ ದುಡಿಯುವ ಜನರ ನಾಡಿ ಮಿಡಿತದ ಅನುಭವವಾಗುತ್ತಿಲ್ಲ. ಹಸಿವು, ಬಡತನ, ಬರಗಾಲ, ನಿರುದ್ಯೋಗಗಳಿಂದ ಜನರು ನರಳುತ್ತಿದ್ದರೆ ಅಧಿಕಾರದಲ್ಲಿರುವ ಜನರು ಕ್ಷಿಪಣಿಗಳ ಬಗ್ಗೆ, ಪರಮಾಣು ಬಾಂಬಿನ ಬಗ್ಗೆ, ದೇವಾಲಯ ನಿರ್ಮಾಣದ ಬಗ್ಗೆ, ಜ್ಯೋತಿಷ್ಯ ಮತ್ತು ಯಜ್ಞ-ಯಾಗಗಳ ಬಗ್ಗೆ ಮಾತನಾಡುತ್ತಿದ್ದಾರೆ. ಕೋಟ್ಯಾಂತರ ಜನರು ತಲೆಯ ಮೇಲೊಂದು ಸೂರಿಲ್ಲದೆ ಬಿಸಿಲು-ಮಳೆ-ಗಾಳಿಗೆ ತತ್ತರಿಸುತ್ತಿದ್ದರೆ ಅಧಿಕಾರದ ಸೂತ್ರ ಹಿಡಿದವರಿಗೆ 'ಶಿಲಾನ್ಯಾಸ' ಮುಖ್ಯವಾಗಿಬಿಟ್ಟಿದೆ.

ಬಡತನ ನಿವಾರಣೆ ಬಗ್ಗೆ, ಹಸಿವಿನ ಹಾಹಾಕಾರದ ಬಗ್ಗೆ ಕೇಂದ್ರ ಸರ್ಕಾರದ ಒಬ್ಬನೇ ಒಬ್ಬ ಮಂತ್ರಿಯೂ ಬಾಯಿ ಬಿಡುತ್ತಿಲ್ಲ. ಬಡತನ ನಿವಾರಣಾ ಕಾರ್ಯಕ್ರಮಗಳ ಮಂತ್ರಿಯಾದ ಅನಂತಕುಮಾರರು ಎಂದೂ ಬಡತನದ ಬಗ್ಗೆ ಯೋಚನೆ ಮಾಡಿಲ್ಲ. ಅವರಂತೂ ಬಡತನವನ್ನು ಇನ್ನೊಂದಷ್ಟು ಜನ್ಮಗಳಲ್ಲಿ ಅನುಭವಿಸುವ ಅಗತ್ಯವಿಲ್ಲದಷ್ಟು ಕಮಾಯಿಸಿದ್ದಾರೆ ಎನ್ನಲಾಗುತ್ತಿದೆ. ಈ ಜನರ ತಂತ್ರ-ಕುತಂತ್ರಗಳೆಲ್ಲವೂ ಸದ್ಯದ ಅಧಿಕಾರವನ್ನು ರಕ್ಷಿಸಿಕೊಳ್ಳುವುದರ ಮತ್ತು ಮುಂದೆ ಅಧಿಕಾರ ಪಡೆದುಕೊಳ್ಳುವುದರ ಬಗ್ಗೆ ಕ್ರಿಯಾಶೀಲವಾಗಿದೆ.

ಗುಜರಾತಿನ ಪಾಪ ತೊಳೆದುಕೊಳ್ಳಲು ಅಲ್ಲ

ಸಂಖ್ಯಾತರೊಬ್ಬರನ್ನು ರಾಷ್ಟ್ರಪತಿಯನ್ನಾಗಿ ಮಾಡಲಾಗಿದೆ. ಮತ್ತೊಬ್ಬ ಅಲ್ಪಸಂಖ್ಯಾತ ಕೋಮಿಗೆ ಸೇರಿದವರನ್ನು ಸಂಯುಕ್ತ ರಂಗದ ಸಂಚಾಲಕನನ್ನಾಗಿ ಮಾಡಲಾಗಿದೆ. ದೇಶದಲ್ಲಿ ಶೂದ್ರರ ಮತಗಳಿಗೆ ಲಗ್ಗೆ ಹಾಕಲು ಶೂದ್ರರನ್ನು ಪಕ್ಷದ ಅಧ್ಯಕ್ಷರನ್ನಾಗಿ ಮಾಡಲಾಗುತ್ತಿದೆ. ದಲಿತರ ಮನವೊಲಿಸಲು ಅವರನ್ನು ಮುಖ್ಯಮಂತ್ರಿಯನ್ನಾಗಿಸಲಾಗುತ್ತಿದೆ. ಇವೆಲ್ಲವೂ ವೈದಿಕ ಪ್ರಣೀತ ಅಭಿವೃದ್ಧಿ ವಿಚಾರ ಪ್ರಣಾಳಿಕೆಯನ್ನು ಪ್ರತಿಷ್ಠಾಪಿಸಲು ನಡೆಸುತ್ತಿರುವ ಹುನ್ನಾರವಾಗಿದೆ. ಅಧಿಕಾರದಲ್ಲಿರುವ ಪಕ್ಷದ ವಕ್ತಾರರೆಲ್ಲರೂ ಮಾತಿನಲ್ಲಿ ಮನೆ ಕಟ್ಟುವ ಮಲ್ಲರಾಗಿದ್ದಾರೆ. ಚುನಾವಣೆ ಬಗ್ಗೆ ಏನೆಲ್ಲ ಕಸರತ್ತು - ಕರಾಮತ್ತುಗಳನ್ನು ನಡೆಸುವ ಜನರು ಬಡವರ - ದುಡಿಯುವ ಜನರ ಬವಣೆ ಬಗ್ಗೆ ಸೊಲ್ಲೆತ್ತುತ್ತಿಲ್ಲ. ಮಾತೆತ್ತಿದರೆ 'ಯಾತ್ರೆ' ಕೈಗೊಳ್ಳುವ ಈ ಜನ ಅಕ್ಷರ ಸಂಸ್ಕೃತಿಯ ಪ್ರಸಾರದ ಬಗ್ಗೆ, ನೀರಿನ ಸಂವರ್ಧನೆ ಬಗ್ಗೆ, ರೈತರ ಕಣ್ಣೀರೊರೆಸುವ ಬಗ್ಗೆ, ದಲಿತರ ಸ್ವಾಭಿಮಾನದ ಬಗ್ಗೆ ಯಾವುದೇ 'ಯಾತ್ರೆ' ಕೈಗೊಳ್ಳುವುದಿಲ್ಲ, ಜಾಥಾ ಸಂಘಟಿಸುವುದಿಲ್ಲ. ಈ ದೇಶದ ೩೦ ಕೋಟಿ ಜನರ ಹಸಿವು-ಬಡತನ-ಅಪೌಷ್ಟಿಕತೆ, ಆಹಾರದ ಅಭದ್ರತೆಗಳನ್ನು ತೊಡೆದುಹಾಕದೆಯೇ ಸಚ್ಚಾರಿತ್ರ್ಯ ಶೀಲ ಸಂಪನ್ನತೆಯನ್ನು ಸಾಧಿಸಲು ಜೋಶಿ ಹೊರಟಿದ್ದಾರೆ. ಈ ಜನರಿಗೆ ಅಕ್ಷರ-ಆರೋಗ್ಯ - ಆಹಾರ - ಆಶ್ರಯ - ಆದಾಯಗಳಿಗಿಂತ ಗೌರವ ಯಾತ್ರೆ - ರಥಯಾತ್ರೆ, ತ್ರಿಶೂಲ ಹಂಚಿಕೆ, ಇಟ್ಟಿಗೆ - ಶಿಲಾಪೂಜೆಗಳು ಮುಖ್ಯವಾಗಿಬಿಟ್ಟಿವೆ.

ಹಸಿವಿನ ಭಾಷೆ ಅರ್ಥವಾಗದ, ಬಡವರ ಬವಣೆಯ ಕೂಗನ್ನು ಕೇಳಿಸಿಕೊಳ್ಳಲಾಗದ, ಜಪ - ತಪ - ಯಜ್ಞ - ಯಾಗ - ಕರ್ಮಕಾಂಡಗಳ ಭಾಷೆಯನ್ನಾಡುವ, ದೂರದರ್ಶನದಲ್ಲಿ ಮೊದ್ದು ಮಣಿಗಳಂತೆ - ಮುದ್ದು ಗಿಣಿಗಳಂತೆ ಒಂದೇ ಪಾಠವ ನೊಪ್ಪಿಸುವ ಜನರಿಗೆ ಮಾನವೀಯ ಮೌಲ್ಯಗಳೇ ಅಭಿವೃದ್ಧಿಯೆಂದು ಹೇಳುವ ಹಕ್ಕಿಲ್ಲ. ಹಸಿವಿನಿಂದ ನರಳುತ್ತಿರುವವರ ಮುಂದೆ ದೇಶವು ಪುರಾತನವಾದುದು, ಸಂಸ್ಕೃತಿ ಉನ್ನತವಾದುದು, ಪರಮಾರ್ಥವೇ ಅಭಿವೃದ್ಧಿ, ಹಿಂಸೆಯಿಂದ ಜನರು ಸಾಯುತ್ತಿರುವುದು ಇದೇ ಮೊದಲಲ್ಲ ಎಂದೆಲ್ಲ ಬೊಗಳೆ ಬಿಡುವ ಜನರು ನಿಜಕ್ಕೂ ಬಡವರಿಗೆ ಅವಮಾನ ಮಾಡುತ್ತಿದ್ದಾರೆ.

ಬೆವರು, ಕಣ್ಣೀರು, ರಕ್ತ ಹರಿಸಿ ದುಡಿಯುತ್ತಿರುವ ಮಂದಿಯ ಬಾಳನ್ನು ಮಾರುಕಟ್ಟೆಯ ಮರ್ಜಿಗೆ ವಹಿಸಿಕೊಟ್ಟು ಜೋಶಿಯವರ ಪಡೆಯು ಸಚ್ಚಾರಿತ್ರ್ಯ, ಸನ್ನಡತೆ, ಸನ್ಮಾರ್ಗಗಳ ಉಪದೇಶದಲ್ಲಿ ನಿರತವಾಗಿದೆ. ಈ ದೇಶದಲ್ಲಿ ಕೃಷಿಮಂತ್ರಿಯೊಬ್ಬರಿದ್ದಾರೆ ಎಂಬುದು ಜನರಿಗೆ ತಿಳಿಯಬೇಕಾದರೆ ಬರಗಾಲ ಉಂಟಾಗಬೇಕಾಯಿತು. ಎಲ್ಲ ಕೊಳ್ಳೆ ಹೋದ ಮೇಲೆ ದಿಡ್ಡಿಯ ಬಾಗಿಲು ಹಾಕುವವರಂತೆ ಇದೀಗ ಕೇಂದ್ರದ ಕೃಷಿ ಮಂತ್ರಿಗಳು ಬಾಯಿ ತೆರೆಯುತ್ತಿದ್ದಾರೆ. ಈ ಸರ್ಕಾರದ ಮುಖವಾಣಿಗಳಾದ ಪ್ರಮೋದ್ ಮಹಾಜನ್, ಅರುಣ್ ಜೈಟ್ಲಿ, ಸುಷ್ಮಾ ಸ್ವರಾಜ್, ಅರುಣ್ ಶೌರಿ, ಅದ್ವಾನಿ, ವೆಂಕಯ್ಯ ಮುಂತಾದವರು ನಮ್ಮ ಸಮಾಜದ ಯಾವ ವರ್ಗದ ಭಾಷೆಯನ್ನಾಡುತ್ತಿದ್ದಾರೆ? ಇವರಾರೂ ಬಡತನ - ಹಸಿವು - ನಿರುದ್ಯೋಗಗಳ ಬಗ್ಗೆ ಮಾತನಾಡುವುದಿಲ್ಲ. ಮರ್ಸಿಡಿಸ್ ಬೆಂಜ್ ಕಾರು ಅಭಿವೃದ್ಧಿಯಲ್ಲವೆಂದು ಜೋಶಿಯವರು ಅಪ್ಪಣೆ ಕೊಡಿಸುತ್ತಾರೆ. ಹಾಗಾದರೆ ರಥಯಾತ್ರೆ ಅಭಿವೃದ್ಧಿಯೋ? ಶಿಲಾಪೂಜ್ಯವು ಅಭಿವೃದ್ಧಿಯೋ? ದುಡಿಮೆ - ಬೆವರು - ಕಣ್ಣೀರು - ರಕ್ತ ಕುರಿತಂತೆ ಅಸಹ್ಯ ಪಟ್ಟುಕೊಳ್ಳುವ ಸನಾತನವಾದಿ ಜನರು ಅಭಿವೃದ್ಧಿ ಕುರಿತಂತೆ ಮಾತನಾಡುವುದನ್ನು ನಿಲ್ಲಿಸಬೇಕು. ಜೋಶಿಯವರಿಗೆ ಮಾನವ ಅಭಿವೃದ್ಧಿ ಅರ್ಥವಾಗುವುದಿಲ್ಲ. ಅಭಿವೃದ್ಧಿಯ ಕೇಸರೀಕರಣಕ್ಕೆ ಜೋಶಿಯವರು ಕೈಹಾಕದಿರುವುದು ಒಳ್ಳೆಯದು.


**ಡಾ|| ಟಿ. ಆರ್. ಚಂದ್ರಶೇಖರ**

ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ

ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಆಕಾಶಗಂಗೆಯ ವೈಭವ

ಆಕಾಶಗಂಗೆ ಎಂಬುದು ಆಕಾಶದಲ್ಲಿ ಹರಿಯುವ ನದಿ. ಅದರ ಸೌಂದರ್ಯ ಅನುಭವಿಸಿಯೇ ಅರಿಯಬೇಕಾದದ್ದು. ''ಗಗನಂ ಗಗನೋಪಮಂ'' ಎಂದ ಹಾಗೆ. ಅದರ ದಿವ್ಯ ಸೌಂದರ್ಯವನ್ನು ಅನುಭವಿಸಿ ಇಟ್ಟ ಹೆಸರೇ ಆಕಾಶಗಂಗೆ. ಈ ತಿಂಗಳು ಅದರ ಸೊಬಗನ್ನು ಅರಿಯಲು ಸುವರ್ಣಾವಕಾಶ. ವರುಣನ ಕೃಪೆ ಇರಬೇಕು ಎಂದು ಮೂಗೆಳೆಯದಿರಿ. ಅದು ಇರುವುದರಿಂದಲೇ ಈ ಸೊಬಗನ್ನು ನೋಡಿ ಆನಂದಿಸಿ, ಅದಕ್ಕೊಂದು ಅನುಪಮ ಹೆಸರನ್ನು ಇಡುವುದೂ ಸಾಧ್ಯವಾಗಿದೆಯಲ್ಲವೇ ? ಅಪೂರ್ವವಾದೊಂದು ಸಂಜೆ ಮೋಡಗಳು ಬಿಡುವು ಮಾಡಿಕೊಟ್ಟಾಗ ತಲೆ ಎತ್ತಿ ನೋಡುವುದನ್ನು ಮರೆಯದಿರಿ. ಆ ಒಂದು ಅದ್ಭುತ ದೃಶ್ಯ ನಿಮ್ಮನ್ನು ಬೆರಗು ಮಾಡುವುದು. ನೆನಪಿನಂಗಳದಲ್ಲಿ ಅಚ್ಚಳಿಯದಾಗುವುದು. ಸೆಪ್ಟೆಂಬರ್ ಮೊದಲವಾರ ಚಂದ್ರನ ಗೈರು ಹಾಜರಿಯಲ್ಲಿ ನಿಮ್ಮ ಪ್ರಯತ್ನ ಆರಂಭಿಸಿ. ನೆತ್ತಿಯಿಂದ ಸ್ವಲ್ಪ ದಕ್ಷಿಣಕ್ಕೆ ವೃಶ್ಚಿಕವಿದೆ. ದಕ್ಷಿಣಕ್ಕೆ ತಿರುಗಿ ನಿಂತು, ಸ್ವಲ್ಪ ತಲೆ ಎತ್ತಿದರೆ ಸಾಕು – ಚೇಳಿನ ಆಕಾರ ಸ್ಫುಟವಾಗಿ ಕಾಣುತ್ತದೆ. ಇದರ ಪಕ್ಕದ್ದೇ ಧನು. ರಂಗೋಲಿಯೊಂದರ ಕೆಳಭಾಗವನ್ನು ಒರೆಸಿದಂತೆ ಕಾಣುವ ವಿನ್ಯಾಸ. ದುರ್ಬೀನು, ದೂರದರ್ಶಕವಿದ್ದವರು ಈ ಭಾಗವನ್ನು ಕೂಲಂಕಷವಾಗಿ ಗಮನಿಸಿ. ಚುಕ್ಕೆಯಂತೆ ಕಾಣುವ ನಕ್ಷತ್ರಗಳ ಸಂಖ್ಯೆ ಅಗಣಿತ. ಚುಕ್ಕೆಯಂತಿರದ ಕಾಯಗಳೂ ಇಲ್ಲಿ ಸಮೃದ್ಧವಾಗಿವೆ – ನೆಬ್ಯುಲಗಳು, ನಕ್ಷತ್ರ ಗುಚ್ಛಗಳು ಹೀಗೆ. ಇದು ಆಕಾಶಗಂಗೆಯ ಕೇಂದ್ರಭಾಗ. ನಕ್ಷತ್ರಗಳ ದಟ್ಟಣೆ ಹೆಚ್ಚು, ಊದಿನಕಡ್ಡಿಯತ್ತ ನೋಡಿದಾಗ ಹೊಗೆ ಹೆಚ್ಚು; ಅದರ ಪಕ್ಕ ಆಚೀಚೆ ಹೊಗೆ ಇರುತ್ತದೆ; ಆದರೆ ಕಡಿಮೆ. ಇದೇ ರೀತಿ ಆಕಾಶಗಂಗೆಯ ಕೇಂದ್ರದತ್ತ ನಕ್ಷತ್ರಗಳು ಹೆಚ್ಚು; ಇತರ ಭಾಗಗಳಲ್ಲಿ

ಉತ್ತರ

ದಕ್ಷಿಣ

*ಈ ನಕ್ಷೆ ೧೫ನೇ ತಾರೀಖಿಗೆ ಅನ್ವಯವಾಗುವುದಾದರೂ, ಚಂದ್ರ, ಶುಕ್ರ, ಬುಧಗಳ ಹೊರತಾಗಿ ತಿಂಗಳುದ್ದಕ್ಕೂ ಉಪಯೋಗಿಸಬಹುದು*

ಕಡಿಮೆ. ಉದಾಹರಣೆಗೆ ಪಶ್ಚಿಮದತ್ತ ಕಣ್ಣು ಹಾಯಿಸಿ. ಕೋರೈಸುವ ಶುಕ್ರ. ಅದರ ಸನಿಹ ಚಿತ್ತಾನಕ್ಷತ್ರ; ಇದರ ಹೊರತಾಗಿ ನಕ್ಷತ್ರಗಳಿಗೆ ಕೊರತೆ ಎಂದೇ ಎನ್ನಬಹುದು. ಆಕಾಶಗಂಗೆಯ ಒಂದು ಭಾಗ ದಕ್ಷಿಣ ದಿಗಂತದ ಅಂಚಿನಲ್ಲಿ ಕಾಣುವ ಕಿನ್ನರ (ಸೆಂಟಾರಸ್) ಮತ್ತು ತ್ರಿಶಂಕು (ಕ್ರಕ್ಸ್) ಮೂಲಕ ಹಾಯುತ್ತದೆ. ಆಗ್ನೇಯ ದಿಕ್ಕಿನ ದಿಗಂತದ ಅಂಚಿನಲ್ಲಿ ಇರುವ ಇವನ್ನು ಗುರುತಿಸುವುದು ಕಷ್ಟವೇ ಆಗುವುದು. ಆಕಾಶಗಂಗೆಯ ಇನ್ನೊಂದು ಭಾಗ ಪೂರ್ವದತ್ತ ಹೊರಟಿದೆ. ಈ ಚಾಚಿಕೆಯನ್ನು ಗುರುತಿಸಲು ಮೈಲುಗಲ್ಲುಗಳು ಬೇಕಲ್ಲವೇ ? ಪೂರ್ವದತ್ತ ಕಣ್ಣು ಹಾಯಿಸಿ. ತೆಳು ಮೋಡವಿದ್ದರೂ ಗುರುತಿಸಬಹುದಾದ ಮೂರು ನಕ್ಷತ್ರಗಳ ತ್ರಿಕೋಣವೊಂದು ನಿಮ್ಮನ್ನು ಆಕರ್ಷಿಸುವುದು. ಇದನ್ನು Summer Triangle ಎಂದು ಪಾಶ್ಚಾತ್ಯರು ಕರೆದಿದ್ದಾರೆ. ನಾವು ಶರತ್ ತ್ರಿಕೋಣ ಎಂದು ಕರೆಯೋಣ. ಅಭಿಜಿತ್ (ವೇಗಾ), ದೆನೆಬ್ (ಹಂಸಾಕ್ಷಿ) ಮತ್ತು ಶ್ರವಣ (ಆಲ್ಟೇರ್) ಇವೇ ಆ ಮೂರು ನಕ್ಷತ್ರಗಳು. ಅಭಿಜಿತ್ ಲೈರಾ (ವೀಣಾ) ಎಂಬ ನಕ್ಷತ್ರಪುಂಜಕ್ಕೆ ಸೇರಿದೆ. ದೆನೆಬ್ ಎಂಬುದು ಸಿಗ್ನಸ್ (ರಾಜಹಂಸ)ಗೆ ಸೇರಿದೆ. ಶ್ರವಣ ಎಂಬುದು ಅಕ್ವಿಲಾ (ಗರುಡ) ಎಂಬ ಪುಂಜಕ್ಕೆ ಸೇರಿದೆ. ಆಕಾಶಗಂಗೆಯ ಒಂದು ಭಾಗ ಧನುರಾಶಿಯಿಂದ ಹೊರಟು ಈ ತ್ರಿಕೋಣದ ಮೂಲಕ ಹಾದು ಇನ್ನೂ ಉತ್ತರಕ್ಕೆ ಸಾಗುತ್ತದೆ. ಶ್ರವಣ ಮತ್ತು ಅಭಿಜಿತ್ ಇವೆರಡೂ ನದಿಯ ಆಚೀಚೆ ದಂಡೆಯ ಮೇಲಿವೆ.

ಆಕಾಶಗಂಗೆಯ ಪರಿಚಯಕ್ಕೆ ಇನ್ನೂ ಒಂದು ಮಾರ್ಗವಿದೆ. ಅದೆಂದರೆ ಮಾರ್ಗದರ್ಶಿ ಚಂದ್ರನ ಮೊರೆಹೋಗುವುದು. ಮೊದಲವಾರ ಬೆಳಗಿನ ಜಾವ ಕಾಣುವ ಚಂದ್ರ ಏಳರಂದು ಅಮಾವಾಸ್ಯೆಯ ನಂತರ ಸಂಜೆ ಕಾಣುವುದು. ೯ರಂದು ಶುಕ್ರದ ಜೊತೆಗೂಡುವ ಮುಂದೆ ಸಾಗುತ್ತಾ ೧೧ರಂದು ವೃಶ್ಚಿಕರಾಶಿಯ ಚೇಳಿನ ತಲೆಯ ಆಕಾರದ ಭಾಗದಲ್ಲಿರುವ ಅನುರಾಧಾ ನಕ್ಷತ್ರವನ್ನು ಸಮೀಪಿಸುವುದು. ೧೨ರಂದು ಕೆಂಪು ನಕ್ಷತ್ರ ಜ್ಯೇಷ್ಠಾವನ್ನು ಸಮೀಪಿಸುವುದು. ೧೩, ೧೪ರಂದು ಧನುರಾಶಿಯ ಮೂಲಕ ಹಾಯುವ ಅವಕಾಶವನ್ನು ಬಳಸಿ, ಧನುವನ್ನು ನೀವು ಗುರುತಿಸಿದ್ದು ಸರಿಯೇ ಇಲ್ಲವೇ ಎಂದು ಪತ್ತೆ ಮಾಡಬಹುದು. ೧೫ರಂದು ಶ್ರವಣ ನಕ್ಷತ್ರಕ್ಕೆ ಸ್ವಲ್ಪ ದಕ್ಷಿಣದಲ್ಲಿ ಕಾಣುತ್ತದೆ. ೨೦ರ ಹುಣ್ಣಿಮೆಯಂದು ಆಕಾಶಗಂಗೆಯಿರಲಿ, ಕ್ಷೀಣ ನಕ್ಷತ್ರಗಳನ್ನು ಗುರುತಿಸುವುದೂ ಕಷ್ಟವಾದೀತು.

ಇನ್ನು ಗ್ರಹಗಳ ಬಗ್ಗೆ ತಿಳಿಯೋಣ. ಸಂಜೆ ಪಶ್ಚಿಮದಲ್ಲಿ ಕಂಗೊಳಿಸುವ ಶುಕ್ರ ಏಕಾಂಗಿ ಎನ್ನಬಹುದು. ತಿಂಗಳ ಮೊದಲವಾರ ಚಿತ್ತಾನಕ್ಷತ್ರದ ಸಮೀಪ ಕಾಣುವ ಇದು ಮುಂದೆ (ಪೂರ್ವಕ್ಕೆ) ಸರಿದು ತಿಂಗಳ ಕೊನೆಯ ಹೊತ್ತಿಗೆ ತುಲಾರಾಶಿಯಲ್ಲಿ ಕಾಣುತ್ತದೆ. ತಿಂಗಳ ಮೊದಲಲ್ಲಿ ಸಂಜೆ

**ಡಾ|| ಬಿ. ಎಸ್. ಶೈಲಜಾ**

*೩ನೇ ಸೆಪ್ಟೆಂಬರ್ ಸಂಜೆ ಪಶ್ಚಿಮ ದಿಕ್ಕಿನ ನೋಟ – ಬುಧ, ಶುಕ್ರ, ಚಿತ್ತಾಗಳನ್ನು ಗುರುತಿಸಲು ಒಳ್ಳೆಯ ಅವಕಾಶ*

ಸೂರ್ಯಾಸ್ತವಾದ ಸ್ವಲ್ಪ ಹೊತ್ತು (ಅರ್ಧ-ಮುಕ್ಕಾಲು ಗಂಟೆ) ಬುಧ ನೋಡಲು ಸಿಗುವುದಾದರೂ ಮುಸ್ಸಂಜೆಯ ಸಂಧ್ಯಾ ಪ್ರಕಾಶದಲ್ಲಿ ಕರಗಿಹೋಗುವುದು. ಕ್ರಮೇಣ ದಿಗಂತದ ಅಂಚಿಗೆ ಸರಿದು ತಿಂಗಳ ಕೊನೆಗೆ ಕಾಣದಂತಾಗುವುದು. ೩ರಂದು ಇದನ್ನು ನೋಡಲು ಒಳ್ಳೆಯ ಅವಕಾಶವಿದೆ.

ಚಂದ್ರ ಮತ್ತು ಶುಕ್ರ ಇವುಗಳ ಚಲನೆಯನ್ನು ದಿನದಿನಕ್ಕೆ ಗುರುತು ಹಾಕಿಕೊಳ್ಳಿ. ಅವುಗಳ ಚಲನೆಯ ದಿಕ್ಕು ಹೇಗಿದೆ ಎಂದು ನಿರ್ಧರಿಸಿ. ಕನ್ಯಾದಿಂದ ಪೂರ್ವಕ್ಕೆ ತುಲಾ ಇದೆ; ತುಲಾದಿಂದ ಪೂರ್ವಕ್ಕೆ ವೃಶ್ಚಿಕ; ವೃಶ್ಚಿಕದಿಂದ ಪೂರ್ವಕ್ಕೆ ಧನು – ಹೀಗೆ ರಾಶಿ ಚಕ್ರ ಬಾನಿನ ಹೆದ್ದಾರಿಯಾಗಿದೆ. ಈ ಎರಡೂ ಕಾಯಗಳೂ ಇದೇ ಕ್ರಮದಲ್ಲಿ ಚಲಿಸುವುವು. ಅಂದರೆ ಅವುಗಳ ಚಲನೆ ಪಶ್ಚಿಮದಿಂದ ಪೂರ್ವಕ್ಕೆ ಎಂದಾಯಿತಲ್ಲವೇ ? ಇದನ್ನು ಗಮನಿಸಲು ಭೂಮಿಯ ಭ್ರಮಣೆ (ದೈನಂದಿನ ಚಲನೆ) ನಮಗೆ ಅಡ್ಡಿಯಾಗುತ್ತದೆ. ಪೂರ್ವದಲ್ಲಿ ಉದಯಿಸಿ ಪಶ್ಚಿಮದಲ್ಲಿ ಕಂತುವ ಈ ಚಲನೆ ನಮಗೆ ಕೆಲವೇ ಗಂಟೆಗಳಲ್ಲಿ ಗೋಚರವಾಗುತ್ತದೆ. ಪ್ರತಿ ರಾತ್ರಿ ಅದೇ ಹೊತ್ತಿನಲ್ಲಿ ಶುಕ್ರ, ಚಂದ್ರಗಳ ಸ್ಥಾನ ಗುರುತಿಸಿದಲ್ಲಿ ಅವುಗಳ ವಾಸ್ತವ ಚಲನೆ ವ್ಯಕ್ತವಾಗುತ್ತದೆ.

ಶನಿ ಮತ್ತು ಗುರು ಇವೆರಡೂ ಬೆಳಗಿನ ಜಾವ ಕಾಣುತ್ತವೆ. ಮಧ್ಯರಾತ್ರಿಗೇ ಉದಯಿಸುವ ಶನಿ, ಬೆಳಿಗ್ಗೆ ನೆತ್ತಿಯ ಮೇಲೆ ಕಾಣುತ್ತದೆ. ೧ರಂದು ಚಂದ್ರನ ಪಕ್ಕ ಕಾಣುತ್ತದೆ. ವೃಷಭವನ್ನು ದಾಟಿ ಮಿಥುನವನ್ನು ಪ್ರವೇಶಿಸುತ್ತ ಬೆಳಿಗ್ಗೆ ಸುಮಾರು ಮೂರುಗಂಟೆಯ ವೇಳೆಗೆ ಉದಯಿಸುವ ಗುರು ಕಟಕರಾಶಿಯಲ್ಲಿದೆ. ದುರ್ಬೀನು ಇರುವವರಿಗೆ ಗುರು ಒಳ್ಳೆಯ ನೋಟ ಒದಗಿಸಲಿದೆ. ೧ರಿಂದ ೧೧ರ ಅವಧಿಯಲ್ಲಿ ಯಾವುದೇ ದಿನ ಗುರುಗ್ರಹವನ್ನು ದುರ್ಬೀನಿನಲ್ಲಿ ನೋಡಿದಿರಾದರೆ, ಪಕ್ಕದಲ್ಲೊಂದು ಸುಂದರ ನಕ್ಷತ್ರ ಗುಚ್ಛ ಕಾಣುತ್ತದೆ. ಇದೇ ಪ್ರೆಸಿಪಿ ಎಂಬ ಹೆಸರಿನದು. ೨೨ರಂದು ಅದರ ಮೂರು ಉಪಗ್ರಹಗಳು ಗುಂಪಾಗಿ ಸೇರಿ ಇನ್ನೊಂದು ಸುಂದರ ನೋಟ ಒದಗಿಸುತ್ತವೆ. ಇದನ್ನು ನೋಡಲು ದೂರದರ್ಶಕ ಬೇಕೇ ಬೇಕು.

ಮಂಗಳ ಸುಮಾರು ಐದು ಗಂಟೆಗೆ ಉದಯಿಸುತ್ತದೆಯಾದರೂ ಮುಂಜಾವಿನ ಸಂಧ್ಯಾಪ್ರಕಾಶದಲ್ಲಿ ಅದನ್ನು ಹುಡುಕುವುದು ಕಷ್ಟ. ಅದು ಸಾಕಷ್ಟು ಪ್ರಕಾಶಮಾನವಾಗಿಲ್ಲವಾದದ್ದರಿಂದ ಗುರುತಿಸಲು ಇನ್ನೊಂದು ತಿಂಗಳು ಕಾಯಬೇಕಾಗುವುದು.

ಸೂರ್ಯ ಚಲನೆಯಲ್ಲಿನ ಒಂದು ಘಟ್ಟ ಈ ತಿಂಗಳು ದಾಟಲಿದೆ (ಅಥವಾ ಭೂಮಿ ದಾಟಲಿದೆ ಎನ್ನಬೇಕು). ಸೆಪ್ಟೆಂಬರ್‌ರಂದು ಅದು ಶರದ್ ವಿಷುವ ಬಿಂದುವನ್ನು ದಾಟುತ್ತದೆ. ಅಂದು ಭೂಮಿಯ ಮೇಲಿನ ಎಲ್ಲ ಭಾಗಗಳಲ್ಲೂ ಹಗಲು ರಾತ್ರಿಗಳ ಹಂಚಿಕೆ ಸಮನಾಗಿರುತ್ತದೆ. ಅಂದಿನಿಂದ ಮುಂದಕ್ಕೆ ರಾತ್ರಿಯ ಅವಧಿ ಕ್ರಮೇಣ ಹೆಚ್ಚುತ್ತದೆ.

## ಜಾತಿ ಎಂಬೀ ಪ್ರಜ್ಞೆ



ನನ್ನ ಸರ್ವತೋಮುಖದಲಿ ಸುಳಿಯುವೀ ಜಾತಿ ಪ್ರಜ್ಞೆ
ರಣಹದ್ದಿನ ಬಾಯ್ತಪ್ಪಿ ನೆಲಕ್ಕುರುಳಿದ ಗಿಳಿಗೆ
ಉಪಚರಿಸಿ ಮೈಸವರಿ ಅಯ್ಯೋ ಪಾಪ ಎಂದು
ಹಾಲನ್ನು ಗುಟುಕು ನೀಡುವ ಗಳಿಗೆ
ಕೊಡುವ ಕೈಗೇ ಲಕ್ವ ಹೊಡೆದ ಹಾಗೆ

ಎರಡು ಜೀವದ ನಡುವೆ ಸಂವಾದ ನಡೆದಿರಲು
ಬರುವ ಜಾತಿಯ ಪ್ರಜ್ಞೆ;
ಮುನಿದ ನಲ್ಲೆಯ ಒಲಿಸಿ ರಮಿಸುತ್ತ ಬಿರಿದ ಬಾಳನು ಬೆಸೆದು
ನಲ್ಮೆಯಲಿ ನೆರೆದು ಕರಗುವ ವೇಳೆ
ಮುಚ್ಚಿದ್ದ ಬಾಗಿಲನು ಧಡ್ಡೆಂದು ಒಡೆದಹಾಗೆ

ನಮ್ಮ ನಿಮ್ಮನ್ನೆಲ್ಲ ಆವರಿಸಿಬಿಟ್ಟಿರುವ ಜಾತಿ ಪ್ರಜ್ಞೆ
ನನ್ನ ಮಗು ಆಡುತ್ತ ಆಡುತ್ತ ಜಗುಲಿ ಅಂಚಿಗೆ ತಲುಪಿ
ಉರುಳಿ ಧೊಪ್ಪನೆ ಬೀಳುವಾ ಹೊತ್ತು
ರಕ್ಷಣೆಗೆ ಹಾಯ್ದು ಕೈಯನೇ ಘಟಸರ್ಪ ಹಿಡಿದಹಾಗೆ

ನಮ್ಮ ನಿಮ್ಮೊಳಗಿರುವ ಜಾತಿ ಎಂಬೀ ಪ್ರಜ್ಞೆ
ಮರಣ ಶಯ್ಯೆಯೊಳಿದ್ದು ಉಳಿವ ಆಸೆಯ ಹೊತ್ತು
ಮದ್ದರೆದು ಬಟ್ಟಲಲಿ ಕುಡಿವ ವೇಳೆ
ಹಲ್ಲಿ ಪಿಚ್ಚೆಂದು ಉಚ್ಚೆಯನು ಹೊಯ್ದ ಹಾಗೆ

ಕಾಡು ಹಾದಿಯ ಹಾದು
ಗುರಿಗಡ್ಡ ಹೊಳೆ ಹಾಯಲೆಂದು
ದೋಣಿಯಲಿ ಕಾಲೆತ್ತಿ ಇಡುತ್ತಿರುವಾ ಹೊತ್ತೆ
ಥಟ್ಟನೆ ದೋಣಿ ಚಲಿಸಿಬಿಟ್ಟಾ ಹಾಗೆ
ನಮ್ಮನ್ನೂ ನಿಮ್ಮನ್ನೂ ಕಾಡುತ್ತಿರುವೀ ಜಾತಿಪ್ರಜ್ಞೆ

ವರ್ಷದೊಂದು ಹಬ್ಬಕ್ಕೆ ಹೆಂಡತಿ ಮಕ್ಕಳೊಡನೆ
ದ್ರಾಕ್ಷಿ ಗೋಡಂಬಿ ಯಾಲಕ್ಕಿ ಹಾಲು ಸಕ್ಕರೆ ಹಾಕಿ
ಕೀರನ್ನು ಕುಡಿವೆನೆಂದೆತ್ತಿರುವಾಗ್ಗೆ
ಬಾನಾಮತಿಯ ಹೇಸಿಗೆ ಬಟ್ಟಲಿಗೇ ಬಿದ್ದ ಹಾಗೆ
ಎಲ್ಲೆಲ್ಲೂ ಪೀಡಿಸುವ ಕಡು ಜಾತಿಪ್ರಜ್ಞೆ

ಯು. ಎಸ್. ಶ್ರೀಧರ ಆರಾಧ್ಯ
ಕನ್ನಡ ಉಪನ್ಯಾಸಕ, ಎಸ್.ಡಿ.ಸಿ.ಪಿ.ಯು. ಕಾಲೇಜು
ಮಾದಾಪುರ, ಕೊಡಗು ಜಿಲ್ಲೆ-೫೭೧ ೨೫೧

### ಖಗೋಳ ದಿನಚರಿ

| ತಾರೀಖು | ಘಟನೆ |
| --- | --- |
| ೧ | ಶನಿ ಮತ್ತು ಚಂದ್ರರ ನಡುವಿನ ಕೋನ ಕನಿಷ್ಠ (೨°/೨ ಡಿಗ್ರಿ) ಶುಕ್ರ ಮತ್ತು ಚಿತ್ರಾ ನಡುವಿನ ಕೋನ ಕನಿಷ್ಠ (೧ ಡಿಗ್ರಿ) |
| ೩ | ಬುಧಗ್ರಹದ ಗರಿಷ್ಠ ಎತ್ತರ ಪಶ್ಚಿಮದಲ್ಲಿ (೨೭ ಡಿಗ್ರಿ) ನೋಡಲು ಒಳ್ಳೆಯ ಅವಕಾಶ |
| ೪ | ಗುರು ಮತ್ತು ಚಂದ್ರರ ನಡುವಿನ ಕೋನ ಕನಿಷ್ಠ (೩°/೨ ಡಿಗ್ರಿ) |
| ೬ | ಮಂಗಳ ಮತ್ತು ಚಂದ್ರರ ನಡುವಿನ ಕೋನ ಕನಿಷ್ಠ (೪ಡಿಗ್ರಿ) ನೋಡಲು ಅವಕಾಶವಿಲ್ಲ! |
| ೭ | ಅಮಾವಾಸ್ಯೆ ಬೆಳಿಗ್ಗೆ ೮:೪೦ಕ್ಕೆ |
| ೮ | ಚಂದ್ರ ಪುರಭೂ ಬಿಂದುವಿನಲ್ಲಿ (೩೫೮,೭೪೫ ಕಿ.ಮೀ.) |
| ೧೦ | ಶುಕ್ರ ಮತ್ತು ಚಂದ್ರರ ನಡುವಿನ ಕೋನ ಕನಿಷ್ಠ (೮°) |
| ೧೩ | ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ಮಧ್ಯರಾತ್ರಿಗೆ) |
| ೨೧ | ಹುಣ್ಣಿಮೆ ರಾತ್ರಿ ೭:೨೯ಕ್ಕೆ ನಕುಲ (ಪೆಗಸಸ್)ನ ದಕ್ಷಿಣಕ್ಕೆ ಚಂದ್ರನ ಸ್ಥಾನ. ಪೆಗಸಸ್ ಚೌಕದ ಎರಡು ನಕ್ಷತ್ರಗಳೇ ಉತ್ತರಾಭಾದ್ರ ಮತ್ತು ಪೂರ್ವಾಭಾದ್ರ |
| ೨೩ | ಸೂರ್ಯ ಶರದ್ ವಿಷುವ ಬಿಂದುವನ್ನು ದಾಟುವುದು (ಬೆಳಿಗ್ಗೆ ೯:೨೫ಕ್ಕೆ) |
| ೨೯ | ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ಮಧ್ಯರಾತ್ರಿಗೆ) ಶನಿ ಮತ್ತು ಚಂದ್ರರ ನಡುವಿನ ಕೋನ ಕನಿಷ್ಠ (೩ ಡಿಗ್ರಿ) |

ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಬೆಂಗಳೂರು

# ಶಾಲೆ ಕಲಿಯದೆ ಪ್ರಸಿದ್ಧ ಸಾಹಿತಿಯಾದ ಮ್ಯಾಕ್ಸಿಮ್ ಗೋರ್ಕಿ



**ಫಳ್** ! ಫಳ್ !! ಎಂದು ಗಾಜಿನ ಪಾತ್ರೆ ಒಡೆಯಿತು.

ಧೊಪ್ ! ಧೊಪ್ !! ಎಂದು ಬೆನ್ನಮೇಲೆ ಗುದ್ದು ಬಿತ್ತು.

'ಏನೋ ಗಟ್ಟಿ ಹಿಡಕೊಂಡ ಹೋಗಲಾಕ ಬರೂದಿಲ್ಲ! ಯಾರೂ ಗತಿ ಇಲ್ಲಂತ ಮನಿಯೊಳಗ ಇಟಕೊಂಡರ ಮನಿ ಸಾಮಾನ ಹಾಳ ಮಾಡತೀ !' ಎಂದು ಅಜ್ಜ ಮೊಮ್ಮಗನನ್ನು ಹೊಡೆದು ಬೈದ. 'ಹೋಗ ನೀ ಮನಿ ಬಿಟ್ಟ ಹೋಗ !' ಎಂದು ಗದರಿಸಿದ.

ಅಷ್ಟು ಹೇಳುವುದೇ ತಡ, ಏಳು ವರ್ಷದ ಬಾಲಕ ಮನೆಬಿಟ್ಟು ಓಡಿದ.

ಹೀಗೆ ಮನೆ ತೊರೆದು ಓಡಿದ, ಏಕಾಕಿಯಾದ, ಅನಾಥನಾದ ಬಾಲಕ ಮುಂದೆ ರಶಿಯಾದ ಪ್ರಸಿದ್ಧ ಕಾದಂಬರಿಕಾರನಾದ **ಮ್ಯಾಕ್ಸಿಮ್ ಗೋರ್ಕಿ**. ಮ್ಯಾಕ್ಸಿಮ್ ಗೋರ್ಕಿ ೧೮೬೮ರಲ್ಲಿ ರಶಿಯಾದ ನಿಝ್ನಿ ನಗರದ ಬಡ ಕುಟುಂಬದಲ್ಲಿ ಜನಿಸಿದ. ಮೂಲ ಹೆಸರು ಅಲೆಕ್ಸಿ ಮೆಕ್ಸಿಮೊ ಪೆಶ ಕೊರ್ವ. ಪೆಶಕೊರ್ವ ೪ ವರ್ಷದವನಾಗಿದ್ದಾಗಲೇ ತಂದೆ ತೀರಿ ಕೊಂಡನು. ಬಡ ತಾಯಿ ಮಗುವಿನೊಂದಿಗೆ ತವರು ಮನೆಯಲ್ಲಿರ ತೊಡಗಿದಳು. ಅಜ್ಜ ಮುಂಗೋಪಿ. ಮನೆಯಲ್ಲಿ ಪ್ರೀತಿಯ ಬದಲಾಗಿ ಪೆಟ್ಟು ಬೀಳುತ್ತಿದ್ದವು. ತಾಯಿಯ ಮಮತೆಯಲ್ಲಿ ತೊಂದರೆ ಮರೆಯುತ್ತಿದ್ದ. ಅಲ್ಲದೆ ಅಜ್ಜಿ ಮೊಮ್ಮಗನನ್ನು ಬಹಳೇ ಪ್ರೀತಿಸುತ್ತಿದ್ದಳು. ರಾತ್ರಿ ಮಲಗುವಾಗ ಕಥೆ ಹೇಳುತ್ತ ಮಲಗಿಸುತ್ತಿದ್ದಳು. ಸಮಯ ಸಿಕ್ಕಾಗ ಅಕ್ಷರ ಜ್ಞಾನ ಮಾಡಿಸುತ್ತಿದ್ದಳು.

ಏಳು ವರ್ಷದವನಾದಾಗ ತಾಯಿಯೂ ಅಗಲಿದಳು. ಬಾಲಕ ಏಕಾಕಿಯಾದ. ಅಜ್ಜನ ಕಿರುಕುಳದಿಂದ ಬೇಸತ್ತು ಮನೆ ತೊರೆದ. ಊರ ಹೊರಗಿನ ಹೋಟೆಲಿನಲ್ಲಿ ಕಪ್ಪು-ಬಸಿ ತೊಳೆಯುವ ಕೆಲಸದಲ್ಲಿ ತೊಡಗಿದನು. ಅಲ್ಲಿಯೂ ರಾತ್ರಿ ತಿಂಡಿ ಉಳಿದರೆ ತಿನ್ನುತ್ತಿದ್ದ ಉಳಿಯದಿದ್ದರೆ ಉಪವಾಸ ಮಲಗುತ್ತಿದ್ದ. ಮಲಗಿದಾಗ ಬಿಟ್ಟು ಉಳಿದ ಎಲ್ಲ ಸಮಯದಲ್ಲೂ ಕೈ-ಕಾಲಿಗೆ ಕೆಲಸ ಬೀಳುತ್ತಿದ್ದವು. ಕೆಲಸದಲ್ಲಿ ಏನಾದರೂ ಏರು-ಪೇರಾದರೆ ಹೊಡೆತಗಳನ್ನು ತಿನ್ನಬೇಕಾಗುತ್ತಿತ್ತು.

ಹೋಟಲಲ್ಲಿ ಮೈತುಂಬ ತೊಂದರೆ ಇದ್ದರೂ ಅಲ್ಲಿ ಒಂದು ದೃಷ್ಟಿಯಲ್ಲಿ ಲಾಭವಾಯಿತು. ತಿಂಡಿ ಹಾಕಿಕೊಡುವ ಕಾಗದದ ಚೂರು, ಸುದ್ದಿ ಪತ್ರ ಓದಿ ಅಕ್ಷರ ಜ್ಞಾನ ಬೆಳೆಸಿಕೊಂಡ. ಆಗ ಓದುವ ಹವ್ಯಾಸ ಬೆಳೆಯಿತು. ಆದರೆ ಅಲ್ಲಿಯ ತೊಂದರೆ -ಕಾಟ ಸಹಿಸದೆ ಅಲ್ಲಿಯ ಕೆಲಸ ಬಿಟ್ಟ. ಬೀದಿಯಲ್ಲಿ ಬಿದ್ದ ಕಾಗದ- ಚೂರು, ವರ್ತಮಾನ ಪತ್ರಿಕೆ ಶೇಖರಿಸಿ ಹಳೆಯ ಕಾಗದ ಮಾರುವ ವ್ಯವಹಾರ ಸಾಗಿಸಿದ. ಇದರಿಂದ ಓದುವ ಚಟವೂ ತೀರುತ್ತಿತ್ತು. ಮಾರಿ ಬಂದ ಹಣದಿಂದ ಹೊಟ್ಟೆಯೂ ತುಂಬುತ್ತಿತ್ತು. ಅಲ್ಲಲ್ಲಿ ತಿರುಗುತ್ತಿರುವಾಗ ಪರಿಚಿತರಾದವರಿಂದ ಪುಸ್ತಕ ಕೇಳಿ ತೆಗೆದುಕೊಂಡು ಓದಿ ತಿರುಗಿಸುತ್ತಿದ್ದ. ಒಂದು ಸಲ ಒಬ್ಬರಿಗೆ ಪುಸ್ತಕ ಬೇಡಿದ. ಅವರು ಕೊಡಲೊಪ್ಪಲಿಲ್ಲ. ಕೈಕಾಲು ಬಿದ್ದು ಬಹಳಷ್ಟು ನಮ್ರತೆಯಿಂದ ಬೇಡಿದ. ಕೊನೆಗೆ ಅವರು 'ಕೊಡುವೆ, ಆದರೆ ಬೇಗನೆ ತಂದುಕೊಡಬೇಕು. ಹೊಲಸು ಮಾಡಬಾರದು' ಎಂದು ಕರಾರು ಹಾಕಿದರು. ಅಲೆಕ್ಸಿ ಕರಾರು ಒಪ್ಪಿ ಪುಸ್ತಕ ಪಡೆದ. ಅವನು ಊರ ಹೊರಗೆ ಜೋಪಡಿ ಕಟ್ಟಿಕೊಂಡು ಇರುತ್ತಿದ್ದ. ರಾತ್ರಿಯಲ್ಲಿಯೇ ಚಿಮಣಿಯ ಬೆಳಕಿನಲ್ಲಿ ಪೂರ್ತಿ ಓದಿ ಮುಗಿಸಿದ. ತಲೆದಿಂಬಾಗಿ ಇಟ್ಟುಕೊಂಡು ಮಲಗಿದ. ರಾತ್ರಿಯಲ್ಲಿ ಜಿಟಿ ಮಳೆ ಆರಂಭವಾಯಿತು. ಜೋಪಡಿ ಸೋರಿ ಇಳಿದ ನೀರಿನಿಂದ ಪುಸ್ತಕ ತೊಯ್ದಿತ್ತು.

ಮರುದಿನ ಏಳುತ್ತಲೇ ತೊಯ್ದ ಪುಸ್ತಕ ಕಂಡು ಗಾಬರಿಯಾದ. ನಂತರ ಬಿಸಿಲಲ್ಲಿ ಒಣಗಿಸಿದ. ಮಧ್ಯಾಹ್ನದಲ್ಲಿ ಸಂಕೋಚದಿಂದಲೇ ಪುಸ್ತಕ ತಿರುಗಿ ಕೊಡಲು ಹೋದನು. ಪುಸ್ತಕ ಕೊಟ್ಟವನು ಪುಸ್ತಕ ಮುದ್ದೆಯಾಗಿರುವುದನ್ನು ಕಂಡು ಸಿಟ್ಟು ಬೆಂಕಿಯಾದನು. 'ನಾನು ನಿನಗೆ ಮೊದಲೇ ಕೊಡುವುದಿಲ್ಲವೆಂದು ಹೇಳಿದ್ದೆ. ಆದರೂ ನೀನು ಸರಿಯಾಗಿ ತಂದು ಕೊಡುವೆನೆಂದು ಹೇಳಿದ್ದೆ. ನೋಡು ಪುಸ್ತಕ ಎಷ್ಟು ಹೊಲಸಾಗಿದೆ. ಈ ಪುಸ್ತಕ ನನಗೆ ಬೇಡ. ಇದರ ಕಿಮ್ಮತ್ತು ಕೊಟ್ಟುಹೋಗು' ಎಂದ.

'ಅಣ್ಣಾ, ಆ ಹಣವಿದ್ದರೆ ನಾನೆಲ್ಲಿ ಈ ಪುಸ್ತಕ ಕೇಳುತ್ತಿದ್ದೆ'. ಪುಸ್ತಕದ ಒಡೆಯ ಸಿಟ್ಟು ಬೆಂಕಿಯಾಗಿ ಪುಸ್ತಕವನ್ನು ಮುಖದ ಮೇಲೆ ಎಸೆದು, 'ಈ ಪುಸ್ತಕದ ಬೆಲೆಯಲ್ಲಿ ಒಂದು ತಿಂಗಳು ದುಡಿಯಬೇಕು. ನಿನಗೆ ಊಟಕ್ಕೆ ಮಾತ್ರ ಕೊಡಲಾಗುವುದು. ಪುಸ್ತಕದ ಕಿಮ್ಮತ್ತೇ ಕೂಲಿ' ಎಂದ.

ಅಲೆಕ್ಸಿ ಅವನ ಮಾತನ್ನು ಕೇಳಿ ಹಿಗ್ಗಿ ಒಪ್ಪಿದ. ಏಕೆಂದರೆ ಒಂದು ತಿಂಗಳ ಊಟದ ಚಿಂತೆಯಾದರೂ ತಪ್ಪಿತು. ಮೇಲಾಗಿ ಪುಸ್ತಕ ನನ್ನದಾಗುವುದು. ಬೇರೆ ಪುಸ್ತಕ ಓದಲೂ ಸಿಗುವುವು ಎಂದು.

ಹೀಗೆ ಒಂದು ತಿಂಗಳು ಅವರು ಹೇಳಿದ ಕೆಲಸ-ಬೊಗಸೆ ಮಾಡುತ್ತ ಅಲ್ಲಿಯ ಪುಸ್ತಕ ಓದುತ್ತ ಅಲ್ಲದೆ ಬೇರೆಯವರಿಂದಲೂ ಪುಸ್ತಕ ಕಡ ತಂದು ಓದುತ್ತ ಕಾಲ ಕಳೆದ. ಈ ಸಮಯದಲ್ಲಿ ಅವನು ರಶಿಯಾದ ಪ್ರಸಿದ್ಧ ಲೇಖಕರಾದ ತುರ್ಗನೆವ್, ಪುಷ್ಕಿನ್, ಬಲ್ಝಾಕ, ಫ್ಲಾಬೆಯರ, ಗೊಗೊಲ ಮುಂತಾದವರ ಪುಸ್ತಕ ಓದಿ ಮುಗಿಸಿದ. ಅವನ ಜೀವನದಲ್ಲಿ ದುಃಖವೇ ತುಂಬಿದ್ದರೂ ಓದುವುದರಲ್ಲಿಯೇ ಮರೆಯುತ್ತಿದ್ದ, ಆನಂದ ಪಡೆಯು ತ್ತಿದ್ದ. ಒಮ್ಮೊಮ್ಮೆ ಜುಗುಪ್ಸೆಯಿಂದ 'ಇದ್ದೇನು !' ಎಂದು ಆತ್ಮಹತ್ಯೆ ಮಾಡಿ ಕೊಳ್ಳುವ ವಿಚಾರ ಉದಿಸುತ್ತಿದ್ದರೂ ಪುಸ್ತಕಗಳಿಂದ ಹೊಸ ಪ್ರೇರಣೆ ದೊರೆಯುತ್ತಿತ್ತು. ಅವುಗಳಿಂದ ಸಾಹಸ- ಸಹನಶೀಲತೆ ಮೈಗೂಡುತ್ತಿತ್ತು. ನಂತರ ಒಬ್ಬ ರದ್ದೀ ಕಾಗದ ಮಾರುವವನ ಗೆಳೆತನವಾಯ್ತು. ಬೇಕರಿಯಲ್ಲಿ ಕೆಲಸ ಸಿಕ್ಕಿತು. ಅದರಿಂದ ಹೊಟ್ಟೆ ತುಂಬುತ್ತಿತ್ತು. ಕಾಗದ ಮಾರುವವನಿಂದ ಪುಸ್ತಕ ಪಡೆದು ಓದಿ ಕೊಡುತ್ತ ನೆತ್ತಿ ತುಂಬಿಸಿಕೊಂಡ. ಬೀದಿಯಲ್ಲಿ- ಗುಡಿಸಲಲ್ಲಿ ಇರುತ್ತ ಹೆಂಡ ಕುಡಿಯುವವರ, ಜೂಜಾಟಗಾರರ, ದಗಾ ಕೋರರ ಗೆಳೆತನ ಮಾಡಿದರೂ ಚಟಗಳಿಂದ ದೂರ ಇರುತ್ತಿದ್ದ. ಹೀಗೆಯೇ ಒಬ್ಬ ಸಾಹುಕಾರನ ಮನೆಯ ಕಾವಲುಗಾರನಾಗಿ ಮನೆ ಕಾಯುತ್ತಿದ್ದಾಗ – ಪಕ್ಕದ ಮನೆಯಲ್ಲಿ ಕಳುವಾ ಯಿತು. ಇವನೇ ಕಳ್ಳನೆಂದು ಅವರು ಆಪಾದಿಸಿದರು. ಬಡತನ, ದಿಕ್ಕಿಲ್ಲದ ತಿರುಗಾಟ ಕಂಡು ಇವನೇ ಕಳ್ಳನಿರ ಬಹುದೆಂದು ಜೇಲಿಗೆ ಕಳುಹಿಸಿ ದರು. ಜೇಲಿನಲ್ಲೂ ಓದುವ ಹವ್ಯಾಸ ಉಳ್ಳವರ ಗೆಳೆತನ ವಾಯಿತು. ಶಿಕ್ಷೆ ಅನುಭವಿಸಿ ಬಿಡುಗಡೆ ಹೊಂದಿದ ಮೇಲೆ ಲೇಖನ ಬರೆಯತೊಡಗಿದ. ಇವನ ಲೇಖನ ಕಂಡು ನಾವಿಕ ನೊಬ್ಬ ತನ್ನ ಸ್ಟೀಮರದಲ್ಲಿ ಕೆಲಸಕ್ಕಿಟ್ಟುಕೊಂಡ. ಅಲ್ಲಿ ಅಡುಗೆ ಮಾಡುವ ಬಾಣಸಿಗನು ಇವನ ಜಾಣ್ಮೆ ಕಂಡು ತನ್ನ ಪರಿಚಿತ ವಕೀಲನಲ್ಲಿ ಕಾರಕೂನ ಕೆಲಸ ಕೊಡಿಸಿದ. ಅಲ್ಲಿದ್ದಾಗ ಇವನ ಜನಜಾಗೃತಿ ಮೂಡಿಸುವ ಲೇಖನ ಕಂಡು ಕ್ರಾಂತಿಕಾರಿ ದಳ ಇವನ ಪರಿಚಯ ಮಾಡಿಕೊಂಡಿತು. ದಳದೊಡನೆ ಕೂಡಿ ದೇಶ-ವಿದೇಶಗಳ ಯಾತ್ರೆ ಮಾಡಿದ. ೧೮೯೬ರಲ್ಲಿ ಮದುವೆ ಮಾಡಿಕೊಂಡು ಸಂಸಾರ ಸಾಗಿಸುತ್ತ ಉಳಿದ ವೇಳೆಯಲ್ಲಿ ಕಥೆ

*೪೫ನೇ ಪುಟಕ್ಕೆ*

> ಮಕ್ಕಳ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆ ನೀಡಿದ ಮಾನ್ಯ ಶ್ರೀ 'ಸಿಸು' ಸಂಗಮೇಶ ಅವರು ತೀರಿ ಕೊಳ್ಳುವ ಮುನ್ನ 'ಹೊಸತು' ಪತ್ರಿಕೆಗೆ ಕಳಿಸಿದ್ದ ಲೇಖನವನ್ನಿಲ್ಲಿ ಪ್ರಕಟಿಸಲಾಗುತ್ತಿದೆ. ಈ ಪರಿಚಯಾತ್ಮಕ ಲೇಖನ ಬರೆದುಕೊಟ್ಟಿದ್ದ ಶ್ರೀಯುತರಿಗೆ ಪತ್ರಿಕೆ ಆಭಾರಿಯಾಗಿದೆ ಮತ್ತು ಅವರಿಗೆ ಗೌರವ ಸಲ್ಲಿಸುತ್ತದೆ. *-ಸಂ*

# ಪ್ರಭುತ್ವಗಳ ಸುಳಿಯಲ್ಲಿ ಸತಿ

ರಾಜ ಪ್ರಭುತ್ವ ಮತ್ತು ಧಾರ್ಮಿಕ ಪ್ರಭುತ್ವದ ಹೊಸ ಹೊಸ ಪ್ರಯೋಗಗಳಿಗೆ ತುತ್ತಾದವರಲ್ಲಿ ಮಹಿಳೆಯರ ಸಂಖ್ಯೆಯೂ ಕಡಿಮೆಯೇನಿಲ್ಲ. ಇದಕ್ಕೆ ಉತ್ತಮ ಉದಾಹರಣೆಯೆಂದರೆ ಸತಿ ಪದ್ಧತಿ. ಸಹಗಮನ ಮತ್ತು ಅನುಗಮನ ಇದರ ಎರಡು ರೂಪಗಳು. ಈ ಪದ್ಧತಿಗಳು ಅತ್ಯಂತ ಕ್ರೂರವಾಗಿದ್ದು ಹೆಣ್ಣಿನ ಬದುಕನ್ನೇ ಪ್ರಶ್ನಿಸುವ ಸ್ವರೂಪದ್ದಾಗಿದ್ದವು. ಪತಿಯು ಸತ್ತಾಗ ಆತನ ಶವದ ಜೊತೆಯಲ್ಲಿಯೇ ಚಿತೆಯೇರುವುದು ಸಹಗಮನವಾದರೆ ಪತಿಯು ಎಲ್ಲೋ ದೂರದ ಊರಿನಲ್ಲಿ ಮಡಿದ ಸುದ್ದಿ ಕೇಳಿ ಪ್ರಾಣ ಬಿಡುವುದು ಅನುಗಮನ ಪದ್ಧತಿ. ಬದುಕಿನುದ್ದಕ್ಕೂ ಸಮಾಜದಲ್ಲಿ ಅಧೀನಳಾಗಿಯೇ ಉಳಿದ ಮಹಿಳೆ ಸಾವಿನಲ್ಲೂ ಅಸಹಜ ಅಂತ್ಯವನ್ನು ಕಾಣಬೇಕಾಗಿ ಬರುತ್ತಿದ್ದುದು ಮಹಿಳೆಯ ಬದುಕಿನ ದುರಂತವಾಗಿ ಕಂಡು ಬರುತ್ತದೆ. ಗಂಡ ತಾನು ಸತ್ತಾಗ ತನ್ನ ಹೆಂಡತಿ ಇನ್ನೊಬ್ಬರ ವಶವಾಗಬಾರದೆಂಬ ಸ್ವಾರ್ಥ ಮತ್ತು ಅಸೂಯೆ ಆರಂಭದಲ್ಲಿ ಈ ಪದ್ಧತಿಗೆ ಕಾರಣವಾಗಿದ್ದಂತೆ ಕಂಡು ಬರುತ್ತದೆ. ಆದರೆ ಕ್ರಮೇಣ ಅದಕ್ಕೊಂದು ಧಾರ್ಮಿಕ ಚೌಕಟ್ಟನ್ನು ನಿರ್ಮಿಸಿ ವೈಭವೀಕರಿಸಲಾಯಿತು. ಸತಿ ಪದ್ಧತಿಯ ಹಿಂದಿರುವ ಉದ್ದೇಶಗಳು ಹಲವಾರು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ವೈಯಕ್ತಿಕ ಪ್ರತಿಷ್ಠೆ, ಮಾನರಕ್ಷಣೆ, ವಿಧವೆಯ ನಿಕೃಷ್ಟ ಜೀವನ, ಪುರುಷನ ಸ್ವಾರ್ಥ, ಸಮಾಜದ ಪ್ರತಿಷ್ಠೆ, ಸಂಪತ್ತನ್ನು ಕಬಳಿಸುವ ಸಂಚು ಮುಂತಾದವು.

ಸತಿ ಪದ್ಧತಿಯ ಹುಟ್ಟಿಗೆ ಕಾರಣವಾದ ಎಲ್ಲ ಅಂಶಗಳು ಅಂದಿನ ಸಾಮಾಜಿಕ ರಚನೆಯನ್ನು ಸೂಚಿಸುತ್ತವೆ. ಅರಸ ಕೇಂದ್ರಿತ ವ್ಯವಸ್ಥೆ, ಪಿತೃಪ್ರಧಾನ ಕೌಟುಂಬಿಕ ರಚನೆ, ಪುರುಷ ಪ್ರಧಾನ ಸಮಾಜ ಹಾಗೂ ಪುರೋಹಿತಶಾಹಿಯ ಪ್ರವೇಶ ಇವೆಲ್ಲವೂ ಒಂದಲ್ಲ ಒಂದು ರೀತಿಯಲ್ಲಿ ಸತಿ ಪದ್ಧತಿಯನ್ನು ಪೋಷಿಸಿಕೊಂಡು ಬಂದ ವ್ಯವಸ್ಥೆಗಳೇ ಆಗಿವೆ. ಪರಲೋಕದ ಕಲ್ಪನೆಯನ್ನು ಹುಟ್ಟು ಹಾಕಿ ಆ ಹಿನ್ನೆಲೆಯಿಂದ ಸತಿ ಹೋಗುವುದನ್ನು ಸಮರ್ಥಿಸಿಕೊಳ್ಳಲಾಯಿತು. ಗಂಡನ ಮರಣದ ನಂತರ ಆತನ ಹೆಂಡತಿ ಸಹಗಮನ ಇಲ್ಲವೇ ಅನುಗಮನದ ಮೂಲಕ ಮಹಾಸತಿ ಯಾಗುತ್ತಿದ್ದಳು. ಈ ರೀತಿ ವ್ಯವಸ್ಥೆಯ ದೌರ್ಜನ್ಯಕ್ಕೆ ಒಳಪಟ್ಟು ಆತ್ಮಹತ್ಯೆ ಮಾಡಿಕೊಳ್ಳುವ ಮಹಿಳೆಯರನ್ನು ಅಂದಿನ ಸಮಾಜ ಮಹಾಸತಿಗಳೆಂದು ವೈಭವೀಕರಿಸಿತು. ಈ ಕುರಿತಾಗಿ ಜನಪದ ಗೀತೆಗಳು ಹುಟ್ಟಿಕೊಂಡವು. ಅವುಗಳನ್ನು ಮಹಾಸತಿ ಜನಪದ ಗೀತೆಗಳು ಅಥವಾ ಮಾಸ್ತಿ ಜನಪದ ಗೀತೆಗಳು ಎನ್ನುವ ಹೆಸರಿನಿಂದ ಕರೆಯಲಾಗಿದೆ. ಮಹಾಸತಿಯ ನೆನಪಿಗಾಗಿ ಮಾಸ್ತಿಕಲ್ಲುಗಳನ್ನು ನಿರ್ಮಿಸಲಾಯಿತು. ಸತಿ ಹೋಗುವುದು ಒಂದು ನಂಬಿಕೆಯ, ಆಚರಣೆಯ ವಸ್ತುವಾಗಿಯೂ ಪರಿವರ್ತನೆಗೊಂಡಿತು. ಇದರಿಂದಾಗಿ ಹೆಣ್ಣು ಯಾವ ಕಾರಣಕ್ಕಾಗಿ ಸತಿಹೋದಳು ಎನ್ನುವ ಪ್ರಶ್ನೆಗೆ ಉತ್ತರಗಳು ಸುಲಭವಾಗಿ ಸಿಗುವುದಿಲ್ಲ. ಇಂಥ ವಿವರಣೆಗಳು ಚರಿತ್ರೆಯಲ್ಲಿ ಮೌನ ವಹಿಸಿವೆ. ಅದೇ ರೀತಿ ಮಹಾಸತಿಯ ಚಾರಿತ್ರಿಕ ವಿವರಗಳು ಮರೆಯಾಗುತ್ತಿವೆ. ಆತ್ಮಹತ್ಯೆ ಮಾಡಿಕೊಳ್ಳುವ ಮೊದಲು ಸ್ತ್ರೀಯೊಬ್ಬಳು ಅನುಭವಿಸುವ ಮಾನಸಿಕ ಹಿಂಸೆ, ವೇದನೆ, ಅಂದಿನ ಸಮಾಜ ಮುಂತಾದ ವಾಸ್ತವ ವಿಚಾರಗಳು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುವುದೇ ಇಲ್ಲ. ಕೇವಲ ಮಾಸ್ತಿ ಆಚರಣೆಯಷ್ಟೇ ಪ್ರಾಮುಖ್ಯತೆಯನ್ನು ಪಡೆದು ಕೊಂಡಿತು.

ಮಹಾಸತಿಯ ಬಗೆಗಿನ ಆಚರಣೆ, ಹಬ್ಬ, ಐತಿಹ್ಯ ಮುಂತಾದ ವಿವರಗಳನ್ನು ಗುರುತಿಸುವ ಸಂದರ್ಭದಲ್ಲಿ ಅವು ಮುಖ್ಯವಾಗಿ ನಾಯಕ, ಗೊಲ್ಲ, ಗೌಡ ಹಾಗೂ ಕೆಲವು ಬಾರಿ ಅಸ್ಪೃಶ್ಯರೆಂದು ಕರೆಯಿಸಿಕೊಂಡ ಜನರಲ್ಲಿಯೇ ಉಳಿದುಬಂದಿರುವುದನ್ನು ಕಾಣಬಹುದಾಗಿದೆ. ಮಾಸ್ತಿ ಗೀತೆಗಳನ್ನು ಹಾಡುವವರೂ ಈ ವರ್ಗಕ್ಕೆ ಸೇರಿದವರೇ ಆಗಿದ್ದಾರೆ. ಮಾಸ್ತಿ ಜನಪದ ಗೀತೆಗಳಲ್ಲಿ

> **ಮಾಸ್ತಿ ಮರಣದ ಬಗ್ಗೆ ಹೆಚ್ಚಿನ ಮಾಹಿತಿ ನೀಡುವುದು ಶಾಸನಗಳು ಮಾತ್ರ. ಮಾಸ್ತಿ ಶಾಸನಗಳು ನೀಡುವ ಮಾಹಿತಿ ವಾಸ್ತವಾಂಶಗಳಿಂದ ದೂರವಿದ್ದರೂ ಅಂಕಿಅಂಶಗಳ ದೃಷ್ಟಿಯಿಂದ ಅಧ್ಯಯನಕಾರರಿಗೆ ಸಹಾಯಕವಾಗುತ್ತವೆ. ಚರಿತ್ರೆಯ ಯಾವ ಯಾವ ಅವಧಿಗಳಲ್ಲಿ ಸತಿ ಘಟನೆಗಳು ಸಂಭವಿಸಿದವು ಎನ್ನುವ ವಿವರ ಶಾಸನಗಳಿಂದ ತಿಳಿದುಬರುತ್ತದೆ. ಅಂಥ ಕೆಲವು ಸತಿ ಘಟನೆಗಳನ್ನು ಉದಾಹರಣೆಗಳನ್ನಾಗಿ ಇಲ್ಲಿ ನೀಡಲಾಗಿದೆ.**

ಮಹಾಸತಿ ಮದುವೆಯ ಸಿದ್ಧತೆಯಿಂದ ಹಿಡಿದು, ಮದುವೆಯ ವಿವರ ಗಂಡನಾದವನು ಹೋರಾಟಕ್ಕೆ ಹೋಗುವುದು, ಅವನ ಸಾವು, ಮಾಸ್ತಿಯ ಕೊಂಡದ ಸಿದ್ಧತೆಗಳು ಬಂಧು-ಬಳಗ ನೆರೆದು ಶೋಕಿಸುವುದು, ಮಾಸ್ತಿ ಕೊಂಡಕ್ಕೆ ಬೀಳುವುದು ಮುಂತಾದ ವಿವರಗಳಿರುತ್ತವೆ. ಈ ವಿವರಗಳು ಮೇಲ್ನೋಟಕ್ಕೆ ಘಟನೆಯ ಬೆಳವಣಿಗೆಯ ಸ್ವರೂಪವನ್ನು ಪರಿಚಯಿಸುವಂತೆ ಕಂಡು ಬಂದರೂ, ಹೆಣ್ಣಿನ ದಹನಕ್ಕೆ ಕಾರಣವಾದ ಪ್ರಭುತ್ವ ಸಂಸ್ಕೃತಿಯ ನಡೆವಳಿಕೆಗಳು ಹಾಗೂ ನಂಬಿಕೆಗಳ ವಿರುದ್ಧ ಸ್ಪಷ್ಟವಾದ ಭಾವವೊಂದು ಪ್ರಕಟಗೊಂಡಿರುವುದು ಕಂಡು ಬರುತ್ತದೆ. ಮಾಸ್ತಿ ಜನಪದ ಗೀತೆಗಳು ನೇರವಾಗಿ ಸತಿ ಪದ್ಧತಿಯನ್ನು ವಿರೋಧಿಸುವಂತೆ ಕಂಡುಬರುವುದಿಲ್ಲ. ಆದರೆ ಬಂಧುಗಳು ಸಹಗಮನ ಮಾಡಬೇಡವೆಂದು ಸತಿಯನ್ನು ಕೇಳಿಕೊಳ್ಳುವುದು, ಸಂಕಟಪಡುವುದು, ಅಸಹಾಯಕತೆಯ ವೇದನೆ ಮುಂತಾದವು ಸ್ವಲ್ಪಮಟ್ಟಿಗೆ ಈ ರೀತಿಯಾಗಿ ಆಲೋಚನೆ ಮಾಡುವಂತೆ ಮಾಡುತ್ತವೆ.

ಬದುಕಿದ್ದಾಗ ಗಂಡನಿಗೆ ಅಧೀನಳಾಗಿದ್ದವಳು ಸಹಗಮನವಾದ ಮೇಲೆ ಗಂಡನನ್ನೇ ಮೆಟ್ಟಿನಿಲ್ಲುವ ಶಕ್ತಿಶಾಲಿ ದೇವತೆಯಾಗಿ ರೂಪುಗೊಳ್ಳುವುದು ನಿಜವಾಗಿಯೂ ಕುತೂಹಲಕಾರಿಯಾದ ಅಧ್ಯಯನವಾಗಿದೆ. ಮಾಸ್ತಿ ಗೀತೆಗಳಲ್ಲಿ ಈ ಅಂಶವನ್ನು ಕಾಣಬಹುದಾಗಿದೆ. ಮಹಾಸತಿಯನ್ನು ಅತಿಮಾನುಷ ವ್ಯಕ್ತಿ, ದೇವತೆಗೆ ಸಮಾನಳಾಗಿ ಕಾಣಲಾಗುತ್ತದೆ. ಕರ್ನಾಟಕದ ಹಲವಾರು ಪ್ರದೇಶಗಳಲ್ಲಿ ಮಾಸ್ತಿಕಲ್ಲು, ಮಾಸ್ತಿಗುಡಿಗಳನ್ನು ಪೂಜಿಸುವುದನ್ನು ಇಂದಿಗೂ ಕಾಣಬಹುದಾಗಿದೆ. ಮಾಸ್ತಿ ಗೀತೆಗಳಲ್ಲಿ ಮಾಸ್ತಿಯು ಒಂದು ಮಾತೃದೇವತೆ ಎನ್ನುವ ಆಶಯವಿದೆ. ಆಚರಣೆಯಲ್ಲೂ ಈ ಅಂಶವನ್ನು ಕಾಣಬಹುದು. ಹೆಣ್ಣಿನ ಬಗೆಗಿನ ನಂಬಿಕೆಗಳು ಬದಲಾಗುವ ದೈವತ್ವಕ್ಕೇರಿಸುವ ಪ್ರಕ್ರಿಯೆಗಳ ಹಿಂದಿನ ಶಕ್ತಿ ಯಾವುದೆಂದು ಊಹಿಸುವುದು ಕಷ್ಟದ ಕೆಲಸವಲ್ಲ. ಆದರೂ ಈ ಬದಲಾವಣೆಗಳಿಗೆ ಒಪ್ಪಿಗೆ ಸಿಕ್ಕಿರುವುದು, ಸಮಾಜ ಮಾನ್ಯ ಮಾಡಿರುವುದು, ಯಾವುದೇ ಸಾಮಾಜಿಕ ಧಾರ್ಮಿಕ ಆಂದೋಲನಗಳು ನಡೆದರೂ ಯಥಾಸ್ಥಿತಿಯಲ್ಲಿ ಮುಂದುವರಿದುಕೊಂಡು ಬಂದಿರುವುದು ಇವೆಲ್ಲವೂ ಹಲವಾರು ಪ್ರಶ್ನೆಗಳನ್ನು ಹುಟ್ಟು ಹಾಕುತ್ತವೆ. ಇದು ವೈದಿಕ ಸಂಸ್ಕೃತಿಗಿಂತ ಭಿನ್ನವಾದದ್ದು ಅಥವಾ ಪೂರಕವಾದದ್ದು ಎನ್ನುವ ಸರಳೀಕೃತ ವ್ಯಾಖ್ಯಾನದಿಂದ ಯಾವುದೇ ತೀರ್ಮಾನವನ್ನೂ ತೆಗೆದುಕೊಳ್ಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ಮಾಸ್ತಿ ಗೀತೆಗಳು ಹುಟ್ಟಿಕೊಂಡಿರುವುದು ಸಾಂಪ್ರದಾಯಕ ಸಮಾಜ ವ್ಯವಸ್ಥೆಯ ಮಧ್ಯದಿಂದ. ಅವು ಈ ವ್ಯವಸ್ಥೆಯನ್ನು ವಿರೋಧಿಸಲೂ ಸಾಧ್ಯವಾಗದ ಅದೇ ರೀತಿ ಪರವಾಗಿಯೂ ನಿಲ್ಲಲಾಗದ ಸ್ಥಿತಿಯಲ್ಲಿ ರಚನೆಗೊಂಡಿವೆ. ಸ್ಪಷ್ಟವಾದ ಮಾತುಗಳಲ್ಲಿ ಯಾವ ಪ್ರತಿಕ್ರಿಯೆಗಳೂ ಸಿಗುವುದಿಲ್ಲ. ಆದರೆ ಹೆಣ್ಣೊಬ್ಬಳು ಸಜೀವ ದಹನ ಹೊಂದುವ ಬಗೆಗಿನ ಅನುಕಂಪವನ್ನು ಈ ಗೀತೆಗಳಲ್ಲಿ ಕಾಣಬಹುದಾಗಿದೆ.

ಮಹಾಸತಿಯರ ಸ್ಮಾರಕಗಳಾಗಿ ಮಾಸ್ತಿಕಲ್ಲುಗಳನ್ನು ನಿಲ್ಲಿಸಲಾಯಿತು. ಅದೊಂದು ಕರ್ತವ್ಯ ಎನ್ನುವ ರೀತಿಯಲ್ಲಿ ಸತಿಹೋದವಳಿಗೆ ಸಹಜವಾಗಿಯೇ ಮಾಸ್ತಿಕಲ್ಲುಗಳನ್ನು ನಿಲ್ಲಿಸಲಾಗುತ್ತಿತ್ತು ಎನ್ನುವ ವಿವರಣೆ ಹೆಚ್ಚು ಒಪ್ಪಿತವಾದಂತೆ ಕಂಡುಬರುತ್ತದೆ. ಏಕೆಂದರೆ ಹೆಣ್ಣು ಸಹಾ ತನ್ನ ಹಕ್ಕಿನ ಬದಲಾಗಿ ಕರ್ತವ್ಯದ ಬಗೆಗೆ ಚಿಂತಿಸಬೇಕಾಗಿತ್ತು. ಸಮಾಜದಲ್ಲಿ ಶೋಷಣೆಗೊಳಪಟ್ಟವರೆಲ್ಲರೂ ತಮ್ಮ ಹಕ್ಕುಗಳ ಬಗ್ಗೆ ಮಾತನಾಡಬಾರದು; ಕೇವಲ ಕರ್ತವ್ಯಗಳನ್ನಷ್ಟೇ ನಿಭಾಯಿಸಬೇಕೆನ್ನುವುದು ಸಂಪ್ರದಾಯಬದ್ಧ ಸಮಾಜದ ನಿಯಮವಾಗಿತ್ತು. ಮಾಸ್ತಿಕಲ್ಲುಗಳನ್ನು ನೆಡುವುದು ಸಹ ಒಂದು ಆಚರಣೆಯಾಗಿತ್ತು. ಇದು ಸಹಗಮನ ಆಚರಣೆಯ ಒಂದು ಅಂಗವಾಗಿಯೇ ಬೆಳೆದುಕೊಂಡು ಬಂತು. ಮಾಸ್ತಿಕಲ್ಲುಗಳನ್ನು ಹಾಕಿಸುತ್ತಿದ್ದರ ಉದ್ದೇಶಗಳ ಕುರಿತಾಗಿ ಶಾಸನಗಳು ಹೇಳುತ್ತವೆ. ಮಹಾಸತಿಯಾದವಳ ಮೇಲಿನ ಪ್ರೀತಿಯಿಂದ ಅವಳ ಹೆಸರು ಶಾಶ್ವತವಾಗಿರಲಿ ಎಂಬ ಕಾರಣಕ್ಕಾಗಿ ಶ್ರೇಯಸ್ಸು ದೊರೆಯಲೆಂಬ ಉದ್ದೇಶದಿಂದ ಮುಂತಾದ

ಕೆ. ಮೋಹನಕೃಷ್ಣ ರೈ

ವಿವರಣೆಗಳು ಶಾಸನಗಳಲ್ಲಿವೆ. ಇಲ್ಲಿರುವ ಲೌಕಿಕ ಮತ್ತು ಧಾರ್ಮಿಕ ಉದ್ದೇಶಗಳು ಪ್ರಶ್ನಾರ್ಹವಾಗಿದ್ದು, ಪೂರ್ವಾಗ್ರಹಪೀಡಿತವಾದದ್ದು ಎನ್ನುವುದಂತೂ ಸ್ಪಷ್ಟ. ಸ್ವರ್ಗದ ಕಲ್ಪನೆಯೂ ಈ ಹಿನ್ನೆಲೆಯಿಂದಲೇ ಬಂತು. ಮಾಸ್ತಿಕಲ್ಲುಗಳನ್ನು ನೆಡುವುದು ಅಂದಿದ್ದ ಸಾಮಾಜಿಕ-ಧಾರ್ಮಿಕ ವ್ಯವಸ್ಥೆಯನ್ನು ಮುಂದುವರಿಸಿಕೊಂಡು ಹೋಗುವ ಉದ್ದೇಶಕ್ಕಾಗಿ ಎನ್ನುವ ವಾದವೂ ಈ ಸಂದರ್ಭದಲ್ಲಿ ಹುಟ್ಟಿಕೊಳ್ಳುತ್ತದೆ. ಕೆಳವರ್ಗದ ಜನರು ಈ ರೀತಿಯ ಧಾರ್ಮಿಕ ರಾಜಕೀಯವನ್ನು ಗುರುತಿಸಿಕೊಳ್ಳುವಲ್ಲಿ ವಿಫಲರಾದರು. ಏಕೆಂದರೆ ಸಾಮಾಜಿಕ ರಚನೆ ಕೆಳವರ್ಗದ ಜನರಿಗೆ ನ್ಯಾಯ ದೊರಕಿಸಿಕೊಡುವ ಇಲ್ಲವೇ ಅವರು ಆ ರೀತಿಯಲ್ಲಿ ಚಿಂತನೆ ನಡೆಸುವ ವಿಧಾನವೇ ತಪ್ಪು ಎಂಬುದಾಗಿ ತೀರ್ಮಾನಿಸಿತ್ತು.

ಮಾಸ್ತಿ ಮರಣದ ಬಗ್ಗೆ ಹೆಚ್ಚಿನ ಮಾಹಿತಿ ನೀಡುವುದು ಶಾಸನಗಳು ಮಾತ್ರ. ಮಾಸ್ತಿ ಶಾಸನಗಳು ನೀಡುವ ಮಾಹಿತಿ ವಾಸ್ತವಾಂಶಗಳಿಂದ ದೂರವಿದ್ದರೂ ಅಂಕಿಅಂಶಗಳ ದೃಷ್ಟಿಯಿಂದ ಅಧ್ಯಯನಕಾರರಿಗೆ ಸಹಾಯಕವಾಗುತ್ತವೆ. ಚರಿತ್ರೆಯ ಯಾವ ಯಾವ ಅವಧಿಗಳಲ್ಲಿ ಸತಿ ಘಟನೆಗಳು ಸಂಭವಿಸಿದವು .ಎನ್ನುವ ವಿವರ ಶಾಸನಗಳಿಂದ ತಿಳಿದುಬರುತ್ತದೆ. ಅಂಥ ಕೆಲವು ಸತಿ ಘಟನೆಗಳನ್ನು ಉದಾಹರಣೆಗಳನ್ನಾಗಿ ಇಲ್ಲಿ ನೀಡಲಾಗಿದೆ. ಹೆಗ್ಗಡೆ ತೊಮ್ಮನೆಂಬವನು ಯುದ್ಧದಲ್ಲಿ ಮಡಿದಾಗ ಅವನ ಮಡದಿ ಬಳಕ್ಕ ಸಹಗಮನ ಮಾಡಿಕೊಂಡಳು. ಬಿದಿಯಣ್ಣನ ಮಡದಿ ಜಕ್ಕಬ್ಬೆ ಮಹಾಸತಿಯಾದಳು. ಬೋಗಾರ ಕರಡಿಸೆಟ್ಟಿಯ ಮಡದಿ ನಾಗಮ್ಮ ಚಿತಾ ಪ್ರವೇಶ ಮಾಡಿದಳು. ನವಲೆನಾಡ ಏಚನನ್ನು ದಾಯಾದಿಗಳು ಕೊಂದಾಗ ಆ ಸುದ್ದಿಯನ್ನು ದೂರದಿಂದಲೇ ಕೇಳಿ ದೇಕಬ್ಬೆ ಅಗ್ನಿ ಪ್ರವೇಶ ಮಾಡಿದಳು. ರುದ್ರಗೌಡನ ಪತ್ನಿ ಅಗ್ನಿಪ್ರವೇಶ ಮಾಡಿದಳು. ಈ ಮುಂತಾದ ಅನೇಕ ಶಾಸನಗಳು ಸಿಗುತ್ತವೆ. ಇವು ಅಂದು ನಡೆದ ಸತಿಘಟನೆಗಳ ವಿವರಗಳನ್ನು ನೀಡುತ್ತವೆಯೇ ಹೊರತು ಅದಕ್ಕೆ ಕಾರಣವಾದ ವ್ಯವಸ್ಥೆಯ ಕುರಿತು ಮಾತೆತ್ತುವುದಿಲ್ಲ. ಇದರಿಂದಾಗಿ ಸತಿಪದ್ಧತಿಯನ್ನು ಮಾನವನ ಬದುಕಿನಲ್ಲಿ ಸಹಜವಾಗಿಯೇ ಸಂಭವಿಸುವ ಇತರ ಘಟನೆಗಳಂತೆ ಪರಿಗಣಿಸಿರಬೇಕೆಂದು ತಿಳಿದುಬರುತ್ತದೆ. ಅದೊಂದು ಸಾಮಾಜಿಕ ಪಿಡುಗು, ಅಪರಾಧ ಎನ್ನುವ ಭಾವನೆ ಎಲ್ಲೂ ವ್ಯಕ್ತವಾದಂತೆ ಕಂಡುಬರುವುದಿಲ್ಲ. ಆದರೆ ಮಾಹಿತಿಯ ದೃಷ್ಟಿಯಿಂದ ಶಾಸನಗಳು ಮುಖ್ಯವಾಗುತ್ತವೆ.

ಸತಿ ಹೋಗುವುದನ್ನು ತಡೆಯುವ ಪ್ರಯತ್ನಗಳು ನಡೆಯುತ್ತಿದ್ದುದರ ಬಗ್ಗೆ ಸ್ವಲ್ಪಮಟ್ಟಿನ ಮಾಹಿತಿಯನ್ನು ಮಾಸ್ತಿ ಜನಪದ ಗೀತೆಗಳು ಮತ್ತು ಶಾಸನಗಳು ನೀಡುತ್ತವೆ. ಆದರೆ ಇದನ್ನೇ ಆಧಾರವನ್ನಾಗಿಟ್ಟುಕೊಂಡು ಸತಿ ಪದ್ಧತಿಗೆ ಬಲವಾದ ವಿರೋಧವಿತ್ತು ಎಂಬುದಾಗಿ ವಾದಿಸಲು ಸಾಧ್ಯವಾಗುವುದಿಲ್ಲ. ಸತಿ ಪದ್ಧತಿಗೆ ಪೂರಕವಾದ ಪರಿಕರಗಳನ್ನು ಅಂದಿನ ಸಮಾಜ ಸೃಷ್ಟಿಸಿತ್ತು. ಆದ್ದರಿಂದ ಕೇವಲ ಅನುಕಂಪ, ಸಂಕಟ, ಅಸಹಾಯಕತೆ ಇವಷ್ಟೇ ಮಾಸ್ತಿ ಗೀತೆಗಳಲ್ಲಿ ಅಥವಾ ಶಾಸನಗಳಲ್ಲಿ ಪ್ರಕಟವಾಗುತ್ತಿತ್ತು. ಇದು ಸತಿ ಹೋಗುವುದನ್ನು ತಡೆಯುವಷ್ಟು ಸಾಮರ್ಥ್ಯ ಹೊಂದಿರಲಿಲ್ಲ. ತಂದೆ, ತಾಯಿ, ಬಂಧುಗಳ ವಿರೋಧದ ಮಧ್ಯೆಯೂ ಹೆಣ್ಣೊಬ್ಬಳು ಬೆಂಕಿಯನ್ನು ಪ್ರವೇಶಿಸುತ್ತಿದ್ದಳು ಎನ್ನುವುದು ಅಂದಿನ ಸಾಮಾಜಿಕ ವ್ಯವಸ್ಥೆಯ ಭೀಕರತೆಯನ್ನು ಸೂಚಿಸುವ ಅಂಶವಾಗಿ ಕಂಡುಬರುತ್ತದೆ. ಆದರೆ ಇದನ್ನೇ ಭಾರತೀಯ ಸ್ತ್ರೀಯರು ಧೈರ್ಯವಂತರು, ತ್ಯಾಗದ ಸಂಕೇತಗಳು ಇವೇ ಮುಂತಾದ ಮಾತುಗಳಿಂದ ವರ್ಣಿಸುವ ಜನರೂ ಇದ್ದಾರೆ. ಆದರೆ ಸತಿ ಹೋಗುವುದು ಯಾವುದೇ ಆದರ್ಶವೂ ಅಲ್ಲ, ತ್ಯಾಗವೂ ಅಲ್ಲ. ಅದೊಂದು ಪೂರ್ವನಿಯೋಜಿತ ಸಿದ್ಧಾಂತಗಳು ಹುಟ್ಟು ಹಾಕಿದ ದುಷ್ಟ ಸಂಕೀರ್ಣ ಸಾಮಾಜಿಕ ವ್ಯವಸ್ಥೆ. ಈ ವ್ಯಾಖ್ಯಾನದ ಉದ್ದೇಶ ಸತಿ ಹೋದ ಸ್ತ್ರೀಯರನ್ನು ಅಗೌರವಿಸುವುದಲ್ಲ, ಬದಲಾಗಿ ಅವರೆಲ್ಲರೂ ಧಾರ್ಮಿಕ ಪ್ರಭುತ್ವ, ರಾಜ ಪ್ರಭುತ್ವ ಹಾಗೂ ಪುರುಷ ಪ್ರಭುತ್ವಗಳಿಂದ ಮೋಸಕ್ಕೊಳಗಾದವರು ಎನ್ನುವುದೇ ಆಗಿದೆ.

**ಕೆ. ಮೋಹನ್‌ಕೃಷ್ಣ ರೈ**
ಉಪನ್ಯಾಸಕ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಕನಸೇ ನೀನಾಗಿರು....

ಈ ಸಂಜೆ ಸರಿದ ಮೇಲೆ,
ಕತ್ತಲೆಯ ತೆರೆ ಕತ್ತರಿಸಲು
ಪುಟ್ಟ ಪಣತಿಯ ಹಚ್ಚಿಟ್ಟು ಕೂತಿರುವೆ.
ನೀ ಬರುವ ಗಳಿಗೆಯಾದರೂ
ಇಲ್ಲಿ ಬೆಳಕಿರಲೆಂದು !
ಸುರಿವ ನಿನ್ನ ನೆತ್ತರಿನ
ಬಣ್ಣ ತೊಡಲು ಕಾದು ಕೂತಿದೆ
ಹೊಸೆದ ಬಿಳಿ ಬತ್ತಿ ಗೆಳೆಯಾ
ನನ್ನ ಕಂಗಳಲ್ಲೀಗ ಕೆಂಪಿನ
ಹೊರತು ಬೇರೆ ಬಣ್ಣಗಳಿಲ್ಲ !

ನೀನು ತರಬಹುದಾದ
ಮಲ್ಲಿಗೆಯ ಧ್ಯಾನಿಸಿ
ಪುಳಕಗೊಂಡಿದೆ ಈ ನೀಳ ಜಡೆ.
ಎದೆಯ ತಟ್ಟೆಯ ತುಂಬ
ಕನಸ-ತಾರೆಗಳು, ಹಚ್ಚಿಟ್ಟ
ನೂರು ನೆನಪಿನ ದೀಪಗಳು.
ಸಾಕು,
ವೀರ ಅಭಿಮನ್ಯುವಿನ ಎದೆಗೆ ನಾಟಿದ
ಕೂರಂಬುಗಳು ಕೊರೆದ ಗಾಯಗಳ
ಸಾಕ್ಷ್ಯ ತೋರಿಸಬೇಡ.
ನಾನು ಉತ್ತರೆಯಲ್ಲ;
ರಕ್ತ ತಿಲಕವ ಹಣೆಗಿಟ್ಟು
ಕಣ್ಣೀರು ಕುದಿಸುತ್ತ
ಹರಕೆ ತೊಡಲು !



ಕೇಳು ಗೆಳೆಯಾ,
ಹೊಯ್ದಾಡುವ ಈ ಪುಟ್ಟ
ದೀಪವೇ ಸಾಕ್ಷಿ
ನನ್ನೊಳಗಿನ ತಾಕಲಾಟಗಳಿಗೆ.
ನೂರಾರು ಹಣೆಗಳ ಬರಿದು ಮಾಡಿ
ಸಾವಿರಾರು ಕಂದಮ್ಮಗಳ ತಬ್ಬಲಿಯಾಗಿಸಿ
ನನ್ನ ಹಣೆಗೆ ಕುಂಕುಮವಿಡಲು
ಈ ನನ್ನ ಮಡಿಲ ತುಂಬಲು
ಗೆಲುವಿನ ಪದಕ ತೊಟ್ಟು ಬಾ
ಎಂದು ಹಾರೈಸಲೇ ?

ನೀ ಬಂದಾಗ,
ನಿನ್ನ ಹರವಾದ ಎದೆಯೊಳಗೆ
ಮುಖ ಹುದುಗಿಸಿ ಮೈ ಮರೆತೇನೆಂದರೆ,
ಅಲ್ಲಿ, ಆ ನರ-ನರಗಳಲ್ಲಿ
ನೆತ್ತರಿನ ಬದಲು ಯಾರದೋ
ಕಣ್ಣೀರು ಹರಿದಂತೆ ಭಾಸ !
ಸಂಜೆ ಬೆಳಕಿನ ಆಣೆ
ಎಲ್ಲ ಹೇಳಿದ್ದೇನೆ.
ಹೌದು, ಈಗನಿಸುತ್ತಿದೆ,
ಸದಾ ನೀ ನನ್ನ ಕನಸಲ್ಲೇ ಇರು,
ಕನಸೇ ನೀನಾಗಿರು,
ಈ ಪುಟ್ಟ ಪಣತಿಯೇ ಸಾಕ್ಷಿ
ನಿನ್ನ ನಿರೀಕ್ಷೆಯಲ್ಲೇ
ನಾ ಜೀವಂತವಾಗುಳಿವೆ !

ವಿಭಾ ತಿರಕಪಡಿ
ಕುಟಸವಗಲ್ಲಿ, ಮಹಾಲಿಂಗಪುರ-೫೮೭ ೩೧೨

# ರಾಷ್ಟ್ರ ವಿಭಜನೆಗೆ ಯಾರು ಕಾರಣ?

**ಭಾ**ರತದ ವಿಭಜನೆಗೆ ಯಾರು ಕಾರಣ ? ರಾಷ್ಟ್ರ ಇಬ್ಭಾಗಗೊಂಡು ಅರ್ಧ ಶತಮಾನ ಗತಿಸಿದ ನಂತರ ಮತ್ತೆ ಈ ಬಗ್ಗೆ ಜಿಜ್ಞಾಸೆ ಆರಂಭವಾಗಿದೆ. ಚರಿತ್ರೆಯ ಅರಿವಿಲ್ಲದವರು ತಲೆಗೊಂದು ಮಾತಾಡುತ್ತ ಬಂದಿದ್ದರೂ ಹಗಲಿನಷ್ಟು ನಿಚ್ಚಳವಾಗಿರುವ ಸತ್ಯವನ್ನು ಮರೆಮಾಚಲು ಸಾಧ್ಯವಾಗಿಲ್ಲ. ವಿಭಜನೆಗೆ ಮಹ್ಮದ್ ಆಲಿ ಜಿನ್ನಾ ಕಾರಣ ಎಂಬ ಸಿದ್ಧ ಉತ್ತರ ಎಲ್ಲರ ಬಾಯಿಯಿಂದಲೂ ಬರುತ್ತದೆ. ಇನ್ನು ಕೆಲ ಗೋಡ್ಸೆವಾದಿಗಳು ಮಹಾತ್ಮಾ ಗಾಂಧೀಜಿಯೇ ಇದಕ್ಕೆಲ್ಲ ಕಾರಣ ಎಂದು ದೂರಿ ನಾಥೂರಾಮ ಮಾಡಿದ್ದನ್ನು ಸಮರ್ಥಿಸಿಕೊಳ್ಳುತ್ತಾರೆ. ಇಂದಿನ ಪೀಳಿಗೆಗೆ ವಾಸ್ತವ ಸಂಗತಿ ಗೊತ್ತಿಲ್ಲ. ಗೊತ್ತಿದ್ದ ಅನೇಕರು ಈಗ ಬದುಕಿಲ್ಲ. ಹೀಗಾಗಿ ಆಗ ಏನು ನಡೆಯಿತೆಂಬುದನ್ನು ಕರಾರುವಾಕ್ಕಾಗಿ ಹೇಳುವವರು ಯಾರಿದ್ದಾರೆ ?



ಸ್ವಾತಂತ್ರ್ಯ ಹೋರಾಟವನ್ನು ಕಣ್ಣಾರೆ ಕಂಡ, ಮಾತ್ರವಲ್ಲ ಅದರಲ್ಲಿ ಸಕ್ರಿಯವಾಗಿ ಪಾಲ್ಗೊಂಡಿದ್ದ ಬೆರಳೆಣಿಕೆಯಷ್ಟಾದರೂ ಜನ ನಮ್ಮ ನಡುವೆ ಇದ್ದಾರೆ. ಅಂಥವರಲ್ಲಿ ಕ್ಯಾಪ್ಟನ್ ಲಕ್ಷ್ಮಿ ಸೆಹಗಲ್ ಒಬ್ಬರು. ೮೭ ವರ್ಷಗಳ ಹಿಂದೆ ಮದ್ರಾಸಿನಲ್ಲಿ ಜನಿಸಿ ಚಿಕ್ಕ ವಯಸ್ಸಿನಲ್ಲೇ ತಾಯಿಯೊಂದಿಗೆ ಸ್ವಾತಂತ್ರ್ಯ ಆಂದೋಲನ, ವಿದೇಶಿ ವಸ್ತ್ರ ದಹನದಂಥ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡಿದ್ದ ಲಕ್ಷ್ಮಿ ನಂತರ ಎಂ.ಬಿ.ಬಿ.ಎಸ್. ಪದವಿ ಸಂಪಾದಿಸಿ ನೇತಾಜಿ ಸುಭಾಷ್ ಚಂದ್ರಬೋಸ್ ಅವರ ಭಾರತೀಯ ರಾಷ್ಟ್ರೀಯ ಸೇನೆ (ಐಎನ್ಎ)ಯನ್ನು ಸೇರಿದರು. ಇವರ ಅರ್ಪಣಾ ಮನೋಭಾವವನ್ನು ಗುರುತಿಸಿದ ನೇತಾಜಿ ಇವರನ್ನು ಆಜಾದ್ ಹಿಂದ್ ಸೇನೆಯ ಝಾನ್ಸಿರಾಣಿ ರೆಜಿಮೆಂಟ್‌ನ ಕ್ಯಾಪ್ಟನ್ ಎಂದು ನೇಮಕ ಮಾಡಿದರು. ೧೯೪೩ರಲ್ಲಿ ಸುಭಾಷ್‌ರ ಆಜಾದ್ ಹಿಂದ್ ಸರ್ಕಾರದಲ್ಲಿ ಇವರು ಸದಸ್ಯರಾಗಿದ್ದರು.

ಇಂಥ ಕ್ಯಾಪ್ಟನ್ ಲಕ್ಷ್ಮಿ ರಾಷ್ಟ್ರಪತಿ ಚುನಾವಣೆಗೆ ಎಡಪಕ್ಷಗಳ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದರು. ಅವರು ಬೆಂಗಳೂರಿಗೆ ಬಂದಿದ್ದಾಗ ಅವರನ್ನು ಕಾಣುವ ಅವಕಾಶ ದೊರಕಿತು. ಬಾಲಬ್ರೂಯಿಯಲ್ಲಿ ತಂಗಿದ್ದ ಅವರನ್ನು ಕಾಣಲು ಹೋದಾಗ ನಗುಮುಖದಿಂದಲೇ ಸ್ವಾಗತಿಸಿದರು. ಅವರನ್ನು ಕಾಣಲು ಮಹಿಳೆಯರ ದೊಡ್ಡ ದಂಡೇ ಅಲ್ಲಿಗೆ ಬಂದಿತ್ತು. ಈ ಗದ್ದಲದ ನಡುವೆ ಮಾತಾಡಿದಾಗ ಬೇಸರಿಸಿಕೊಳ್ಳದೆ ಹಸನ್ಮುಖದಿಂದಲೇ ಇವರು ಉತ್ತರಿಸಿದರು. ಗುಜರಾತ್ ವಿದ್ಯಮಾನಗಳ ಬಗ್ಗೆ ತೀವ್ರ ಆತಂಕಗೊಂಡಿದ್ದ ಅವರು ಸಂಘ ಪರಿವಾರದ ಹುನ್ನಾರಗಳನ್ನು ವಿಫಲಗೊಳಿಸಬೇಕಾಗಿದೆ ಎಂದು ಹೇಳಿದರು.

ಸ್ವತಂತ್ರ, ಸ್ವಾವಲಂಬಿ ಭಾರತ ಮಾತ್ರವಲ್ಲ ಜಾತ್ಯತೀತ ಭಾರತವನ್ನು ಕಟ್ಟಲು ನಾನು ಸುಭಾಷ್‌ರ ಆಜಾದ್ ಹಿಂದ್ ಪಡೆಯನ್ನು ಸೇರಿದೆ. ನೇತಾಜಿ ನನಗೆ ತುಂಬ ಪ್ರೋತ್ಸಾಹ ನೀಡಿದರು. ಅವರ ಪಡೆಯಲ್ಲಿ ಎಲ್ಲ ಜಾತಿ ಮತಕ್ಕೆ ಸೇರಿದ ಜನರಿದ್ದರು. ಆದರೆ ಈ ಭಾರತ ಇಂದೇನಾಗಿದೆ ? ಸ್ವಾತಂತ್ರ್ಯದ ಐದು ದಶಕಗಳ ನಂತರವೂ ಗುಜರಾತ್‌ನಂಥ ಹತ್ಯಾಕಾಂಡ ನಡೆಯುತ್ತದೆ ಅಂದರೆ ಅರ್ಥವೇನು ? ವಿಭಜನೆ ಕಾಲದಲ್ಲಿ ದೇಶ, ಧರ್ಮದ ಆಧಾರದಲ್ಲಿ ಹೋಳಾದಂತೆ ಗುಜರಾತ್ ಹಿಂದೂ-ಮುಸ್ಲಿಂ ಎಂದು ಇಬ್ಭಾಗವಾಗಿದೆ ಎಂದು ಅವರು ಹೇಳಿದರು. ರಾಷ್ಟ್ರ ವಿಭಜನೆಯಿಂದಲೇ ಈ ಉಪಖಂಡದಲ್ಲಿ ಕೋಮು ವೈಷಮ್ಯ ತೀವ್ರಗೊಂಡಿತು. ಮಹ್ಮದ್ ಆಲಿ ಜಿನ್ನಾ ಅವರೇ ಇದಕ್ಕೆ ಕಾರಣವಾಗಿರುವುದರಿಂದ ಮುಸಲ್ಮಾನರ ಬಗ್ಗೆ ಹಿಂದೂಗಳಲ್ಲಿ ಸಂಶಯದ ಬೀಜ

**ಸನತ್‌ಕುಮಾರ ಬೆಳಗಲಿ**

ಮೊಳಕೆಯೊಡೆದಿದೆ ಎಂದಾಗ ಈ ಆರೋಪವನ್ನು ಸ್ಪಷ್ಟವಾಗಿ ನಿರಾಕರಿಸಿದ ಲಕ್ಷ್ಮಿ ಸೆಹಗಲ್ 'ಧರ್ಮದ ಆಧಾರ ದಲ್ಲಿ ರಾಷ್ಟ್ರ ವಿಭಜನೆಗೆ ಜಿನ್ನಾ ಮಾತ್ರ ಕಾರಣವಲ್ಲ, ಆರ್.ಎಸ್.ಎಸ್. ಸಹ ಕಾರಣ' ಎಂದರು. 'ರಾಷ್ಟ್ರೀಯ ಸ್ವಯಂಸೇವಕ ಸಂಘದ ಸೈದ್ಧಾಂತಿಕ ಸ್ಫೂರ್ತಿಯಾದ ವಿನಾಯಕ ದಾಮೋದರ ಸಾವರ್ಕರ್ ಅವರೇ ಮೊದಲು ವಿಭಜನೆಯ ವಿಷ ಬೀಜ ಬಿತ್ತಿದರು' ಎಂದು ಸ್ಪಷ್ಟವಾಗಿ ಹೇಳಿದರು.

೧೯೨೩ರಲ್ಲೇ ಸಾವರ್ಕರರು 'ಹಿಂದುತ್ವ' ಎಂಬ ಶಬ್ದವನ್ನು ಬಳಕೆಗೆ ತಂದರು. ಅದೇ ಹೆಸರಿನ ಪುಸ್ತಕ ಬರೆದರು. ಸಾವರ್ಕರ್ ಅವರು ಮಂಡಿಸಿದ ದ್ವಿರಾಷ್ಟ್ರ ನಿರ್ಮಾಣ ಸಿದ್ಧಾಂತವನ್ನು ಇತರ ಆರ್.ಎಸ್.ಎಸ್. ನಾಯಕರಾದ ಬಿ.ಎಸ್. ಮೂಂಜೆ, ಭಾಯಿ ಪರಮಾನಂದ, ಸ್ವಾಮಿ ಶ್ರದ್ಧಾನಂದ, ಮಾಳವೀಯ ಮುಂತಾದವರು ಬೆಂಬಲಿಸಿದ್ದರು – ಎಂದು ಹಿರಿಯ ಪತ್ರಕರ್ತ ಖುಷ್‌ವಂತ್ ಸಿಂಗ್ ಅವರು ತಮ್ಮ ಇತ್ತೀಚಿನ ಲೇಖನದಲ್ಲಿ ವಿಶ್ಲೇಷಿಸಿದ್ದಾರೆ. ಭಾರತದ ಜನತೆ ಬ್ರಿಟಿಷ್ ಸಾಮ್ರಾಜ್ಯಶಾಹಿ ವಿರುದ್ಧ ಹೋರಾಟದ ರಣರಂಗದಲ್ಲಿರುವಾಗ ರಾಷ್ಟ್ರೀಯ ಸ್ವಯಂ ಸೇವಕ ಸಂಘದವರು ಸ್ವಾತಂತ್ರ್ಯ ಆಂದೋಲನದಲ್ಲಿ ಪಾಲ್ಗೊಳ್ಳದೆ ವಿದೇಶಿ ಆಳರಸರೊಂದಿಗೆ ಶಾಮೀಲಾಗಿದ್ದರೆಂಬುದು ಬರೀ ಆರೋಪವಾಗಿಲ್ಲ.



ವಿ. ಡಿ. ಸಾವರ್ಕರ್

ಮಹಾತ್ಮಾ ಗಾಂಧೀಜಿ ಅವರ ನೇತೃತ್ವದಲ್ಲಿ ನಡೆದ ಅಹಿಂಸಾತ್ಮಕ ಹೋರಾಟ, ಭಗತ್‌ಸಿಂಗ್ ಅವರ ನೇತೃತ್ವದಲ್ಲಿ ಎಡಪಂಥೀಯರು ಒಡ್ಡಿದ ಕ್ರಾಂತಿಕಾರಿ ಪ್ರತಿರೋಧ, ನೌಕಾಪಡೆಗಳ ದಂಗೆ, ನೇತಾಜಿ ಸುಭಾಷ್ ಚಂದ್ರ ಬೋಸ್‌ರ ಆಜಾದ್ ಹಿಂದ್ ಸೇನೆಯ ಗರ್ಜನೆ ಇವೆಲ್ಲವುಗಳ ಪರಿಣಾಮವಾಗಿ ಬ್ರಿಟಿಷ್ ಸಾಮ್ರಾಜ್ಯಶಾಹಿ ಈ ದೇಶದಿಂದ ತೊಲಗಿತು. ಆಗ ಗಾಂಧೀಜಿ ಜೊತೆಗಿದ್ದವರು ಕಾಂಗ್ರೆಸ್ಸಿನೊಂದಿಗೆ ಸೇರಿದರು. ಸುಭಾಷ್, ಭಗತ್ ಸಿಂಗ್ ಅವರ ಒಡನಾಡಿಗಳಾಗಿದ್ದವರು ಕಮ್ಯುನಿಸ್ಟ್ ಪಕ್ಷದೊಂದಿಗೆ ತಮ್ಮನ್ನು ಗುರುತಿಸಿಕೊಂಡರು. ಆದರೆ ಸ್ವಾತಂತ್ರ್ಯ ಆಂದೋಲನದಲ್ಲಿ ಪಾಲ್ಗೊಂಡ ಯಾವೊಬ್ಬ ವ್ಯಕ್ತಿಯೂ ಆರ್.ಎಸ್.ಎಸ್.-ಜನಸಂಘದ ಜೊತೆ ಸೇರಿಕೊಳ್ಳಲಿಲ್ಲ.

ಬ್ರಿಟಿಷರು ದೇಶದಿಂದ ತೊಲಗಿದ ನಂತರ ಈ ದೇಶದಲ್ಲಿ ಮುಸ್ಲಿಂ ವಿರೋಧಿ, ಹಿಂದೂ ಮತಾಂಧತೆ ಭುಗಿಲೆದ್ದಿತು. ಹಿಂದಿನ ಮೊಗಲ ಅರಸರ ಕಾಲದಲ್ಲಿ ಹಿಂದೂಗಳಿಗೆ ಆದ ಅಪಮಾನ, ದೇವಾಲಯಗಳ ಭಗ್ನ, ಜಿಜಿಯ ತೆರಿಗೆ – ಇವುಗಳನ್ನೆಲ್ಲ ಭಾವೋದ್ರೇಕದ ನೆಲೆಯಲ್ಲಿ ಹೇಳಲಾರಂಭಿಸಲಾಯಿತು. ಮುಸ್ಲಿಂ ದಾಳಿಕೋರರ ವಿರುದ್ಧ ಹೋರಾಡಿದ ಪೃಥ್ವಿರಾಜ್ ಚೌಹಾಣ್, ಶಿವಾಜಿ ಮುಂತಾದವರನ್ನು ರಾಷ್ಟ್ರೀಯ ವೀರರೆಂದು ವೈಭವೀಕರಿಸಲಾಯಿತು. ಆದರೆ ವಾಸ್ತವಿಕವಾಗಿ ಶಿವಾಜಿ ಅಂಥವರು ಆರ್.ಎಸ್.ಎಸ್. ಮಾದರಿಯ ಮುಸ್ಲಿಂ ದ್ವೇಷಿಯಾಗಿರಲಿಲ್ಲ ಎಂಬುದು ಗಮನಾರ್ಹ ಸಂಗತಿಯಾಗಿದೆ.

ಮೊಗಲ್ ಆಡಳಿತವನ್ನೇ ಆಧಾರವಾಗಿಟ್ಟುಕೊಂಡು ಸಾವರ್ಕರ್ 'ಹಿಂದುತ್ವ' ಸಿದ್ಧಾಂತ ರೂಪಿಸಿದರು. ಈ ಸಿದ್ಧಾಂತ ರೂಪಿಸಲು ಅವರಿಗೆ ಪ್ರೇರಣೆಯಾಗಿದ್ದು ಜರ್ಮನಿಯ ಅಡಾಲ್ಫ್ ಹಿಟ್ಲರ್. ಜನಾಂಗ ಪರಿಶುದ್ಧತೆಯ ಹೆಸರಿನಲ್ಲಿ ಹಿಟ್ಲರ್ ಅಲ್ಲಿ ನಡೆಸಿದ ಯೆಹೂದಿಗಳ ಸಂಹಾರ ಕಾರ್ಯಕ್ರಮದಿಂದ ಸ್ಫೂರ್ತಿ ಪಡೆದು ಬಂದ ಡಾ|| ಮೂಂಜೆ ಜರ್ಮನಿಯಿಂದ ವಾಪಸು ಬರುವಾಗ ಹಿಟ್ಲರ್ ಮುಸಲೋನಿಗಳ ನಾಜಿ ಹಾಗೂ ಫ್ಯಾಸಿಸ್ಟ್ ಸಿದ್ಧಾಂತಗಳನ್ನು ಎರವಲು ತಂದರು. ಹೀಗೆ ಇಲ್ಲಿ ವ್ರಣವಾಗಿ ಬೆಳೆದಿರುವ 'ಹಿಂದುತ್ವ' ಎಂಬುದು ಈ

ನೆಲದಲ್ಲಿ ಹುಟ್ಟಿದ್ದಲ್ಲ, ಅದು ಜರ್ಮನಿಯಿಂದ ಇಲ್ಲಿಗೆ ಆಮದಾಗಿ ಬಂದದ್ದು. ಅದನ್ನೇ ಆಧಾರವಾಗಿಟ್ಟುಕೊಂಡು ದ್ವಿರಾಷ್ಟ್ರ ಸಿದ್ಧಾಂತ ರೂಪಿಸಲ್ಪಟ್ಟಿತು.

ಭಾರತ ಹಿಂದೂಗಳ ರಾಷ್ಟ್ರ, ಇದು ಹಿಂದುಗಳ ಪಿತೃಭೂಮಿ, ಹಿಂದುಗಳ ಪವಿತ್ರ ಭೂಮಿ, ಹಿಂದೂ ಯಾತ್ರಾಸ್ಥಳಗಳಿರುವುದು ಇಲ್ಲಿಯೇ. ಇದರರ್ಥ, ಮೆಕ್ಕಾಕ್ಕೆ ಹೋಗುವ ಮುಸಲ್ಮಾನರು, ವ್ಯಾಟಿಕನ್ ಮೇಲೆ ನಿಷ್ಠೆಯಿರುವ ಕ್ರೈಸ್ತರು ಈ ದೇಶದವರಲ್ಲ ಎಂಬುದು ಸಾವರ್ಕರ್ ಸಿದ್ಧಾಂತ. ಸಾವರ್ಕರ್ ದೃಷ್ಟಿಯಲ್ಲಿ ಜೈನ, ಬೌದ್ಧ ಹಾಗೂ ಸಿಖ್ ಧರ್ಮಗಳು ಭಾರತೀಯ ಮೂಲದ ಧರ್ಮಗಳು. ಮುಸ್ಲಿಂ ಹಾಗೂ ಕ್ರೈಸ್ತರು ಈ ದೇಶದವರಲ್ಲ, ಇವರ ಧರ್ಮದ ಮೂಲ ಹೊರಗಿನದು. ಹೀಗಾಗಿ ಇದು ಹಿಂದು ದೇಶ ಎಂಬುದು ಅವರ ವಾದ. ಇದೇ ಸಿದ್ಧಾಂತವನ್ನು ಆಧರಿಸಿ ಮಾಧವರಾವ್ ಗೋಲ್ವಾಲ್ಕರ್ ಅವರು ತಮ್ಮ 'ಚಿಂತನ ಗಂಗೆ' ಎಂಬ ಪುಸ್ತಕ ಬರೆದರು.

ಬ್ರಿಟಿಷರು ಈ ಉಪಖಂಡದಿಂದ ಕಾಲ್ತೆಗೆದಾಗ ನಮ್ಮ ಸುತ್ತಲಿನ ದೇಶಗಳೆಲ್ಲ ಧರ್ಮಾಧಾರಿತ ರಾಷ್ಟ್ರವೆಂದು ಘೋಷಿಸಿಕೊಂಡವು. ಬ್ಯಾರಿಸ್ಟರ್ ಜಿನ್ನಾಗೆ ಇಷ್ಟವಿಲ್ಲದಿದ್ದರೂ ಪಾಕಿಸ್ತಾನ 'ಇಸ್ಲಾಂ' ರಾಷ್ಟ್ರವಾಯಿತು. ಶ್ರೀಲಂಕಾ ಹಾಗೂ ಬರ್ಮಾಗಳು ಬೌದ್ಧ ಪ್ರಧಾನ ದೇಶಗಳಾದವು. ಅಷ್ಟೇ ಅಲ್ಲ, ನಮ್ಮ ಪಕ್ಕದಲ್ಲೇ ಇರುವ ನೇಪಾಳ ಹಿಂದೂ ರಾಷ್ಟ್ರವೆಂದು ಘೋಷಿಸಿಕೊಂಡರೂ ಶೇ.೮೦ರಷ್ಟು ಹಿಂದುಗಳು ವಾಸಿಸುವ ಭಾರತ ಹಿಂದೂ ರಾಷ್ಟ್ರವಾಗಲಿಲ್ಲ. ಕಾರಣ, ಇಲ್ಲಿನ ಸ್ವಾತಂತ್ರ್ಯ ಚಳವಳಿಯಲ್ಲಿ ಹಿಂದು, ಮುಸ್ಲಿಂ, ಕ್ರೈಸ್ತ, ಪಾರ್ಸಿ, ಜೈನ, ಬೌದ್ಧ, ವೀರಶೈವರೆಲ್ಲ ಭಾಗವಹಿಸಿದ್ದರು. ಈ ಹೋರಾಟಕ್ಕೆ ಸೆಕ್ಯೂಲರ್ ನಾಯಕತ್ವವಿತ್ತು. ಗಾಂಧಿ, ನೆಹರು, ಆಜಾದರ ಕನಸಿನಂತೆ ಇದು ಜಾತ್ಯತೀತ ಜನತಂತ್ರವಾಗಿ ಹೊರಹೊಮ್ಮಿತು.

ಸ್ವಾತಂತ್ರ್ಯದ ಆರಂಭದ ನೆಹರೂ ಕಾಲದಿಂದ ೬೦ರ ದಶಕದ ಆರಂಭದವರೆಗೆ ಈ ರಾಷ್ಟ್ರದಲ್ಲಿ ಕೋಮುವಾದಿ ಶಕ್ತಿಗಳು ಅಷ್ಟೊಂದು ಪ್ರಾಮುಖ್ಯತೆ ಪಡೆದಿರಲಿಲ್ಲ. ಜನ




ಇವರನ್ನು ಒಪ್ಪಿರಲಿಲ್ಲ. ಆದರೆ ಕಾಂಗ್ರೆಸ್ ವಿರೋಧಿ ಅಲೆಯಲ್ಲಿ ತೇಲಿಬಂದ ಫ್ಯಾಸಿಸ್ಟ್ ಶಕ್ತಿಗಳು, ಮೊರಾರ್ಜಿ ಹಾಗೂ ವಿ. ಪಿ. ಸಿಂಗ್ ಪ್ರಧಾನಿಯಾಗಿದ್ದಾಗ ತಮ್ಮ ಬಲವನ್ನು ವರ್ಧಿಸಿಕೊಂಡುವು. ಬಾಬರಿ ಮಸೀದಿ ನಾಶದ ನಂತರ ಎಲ್ಲೆಡೆ ಹಬ್ಬಿದರು. ಚರ್ಚ್‌ಗೆ ಬೆಂಕಿ, ಮಿಷಿನರಿಗಳ ಮೇಲೆ ಹಲ್ಲೆ ನಂತರ ಈಗ ಗುಜರಾತ್‌ನಲ್ಲಿ ಹಿಟ್ಲರ್ ಮಾದರಿ ಜನಾಂಗ ಹತ್ಯಾಕಾಂಡ ಆರಂಭವಾಗಿವೆ.

ಮಸೀದಿ ಕೆಡವಿದ, ಬೈಬಲ್‌ಗೆ ಬೆಂಕಿ ಹಾಕಿ ಸುಟ್ಟ, ನರಮೇಧದಿಂದ ಕೈಗೆ ನೆತ್ತರಿನ ಕಲೆ ಅಂಟಿಸಿಕೊಂಡ ಶಕ್ತಿಗಳೇ ಗಾಂಧಿ ಹತ್ಯೆಗೊಂಡಾಗ ಸೆರೆಮನೆಗೆ ತಳ್ಳಲ್ಪಟ್ಟಿದ್ದ ಪರಂಪರೆಗೆ ಸೇರಿದವರೇ, ಈಗ ದೇಶದ ಅಧಿಕಾರ ಸೂತ್ರ ಹಿಡಿದಿದ್ದಾರೆ. ಶಿವಸೇನೆ, ಹಿಂದುಮಹಾಸಭಾ, ಆರೆಸ್ಸೆಸ್, ಜನಸಂಘ, ಭಜರಂಗದಳ ಇವೆಲ್ಲಾ ಸಾವರ್ಕರ ಎಂಬ ಒಂದೇ ಗಿಡದ ಟೊಂಗೆಗಳು. ಇವರ ದೃಷ್ಟಿಯಲ್ಲಿ ಭಾರತದಲ್ಲಿ ಹಿಂದೂಗಳನ್ನು ಹೊರತುಪಡಿಸಿ ಉಳಿದವರು ಇರಕೂಡದು. ಈ ಹಿಂದೂ ರಾಷ್ಟ್ರದ ಸಾವರ್ಕರ ಸಿದ್ಧಾಂತವನ್ನು ಆರ್.ಎಸ್.ಎಸ್.ನ ಕೇಶವ ಹೆಡ್ಗೆವಾರ ತಮ್ಮ ಸಂಘಟನೆಯ ದಾರಿದೀಪವನ್ನಾಗಿ ಅಂಗೀಕರಿಸಿದರು. ಒಮ್ಮೆ ಇಂಥ ಹಿಂದೂ ರಾಷ್ಟ್ರ ರಚನೆಯಾದ ನಂತರ, ಮುಂದಿನ ಬಲಿಪಶುಗಳು ದಲಿತರು ಹಾಗೂ ಹಿಂದುಳಿದ ವರ್ಗದವರು. ಮನುಧರ್ಮ ಶಾಸ್ತ್ರದನ್ವಯ ಇಡೀ ಶೂದ್ರ ಸಮುದಾಯವನ್ನೇ ತುಳಿದಿಡುವುದು ಈ ಪುರೋಹಿತಶಾಹಿ ಫ್ಯಾಸಿಸ್ಟ್ ಶಕ್ತಿಗಳ ಗುರಿಯಾಗಿದೆ.

ಆದರೆ ಭಾರತೀಯ ಮೂಲದ್ದಲ್ಲದ ಹಿಟ್ಲರ್ ಮುಸಲೋನಿಗಳಿಂದ ಎರವಲು ಪಡೆದ 'ಹಿಂದುತ್ವ' ಸಿದ್ಧಾಂತವನ್ನು ಭಾರತೀಯರು ಹೇಗೆ ಒಪ್ಪಲು ಸಾಧ್ಯ ? ಸಂಘಪರಿವಾರದವರು ತಾವು ರಾಷ್ಟ್ರಭಕ್ತರೆಂದು ಹೇಳಿಕೊಳ್ಳುತ್ತಾರೆ. ಸ್ವತಃ ಎಡಪಂಥೀಯ ಎಂದು ಘೋಷಿಸಿಕೊಂಡಿದ್ದ ಭಗತ್ ಸಿಂಗ್‌ರ ಹೆಸರನ್ನು ಬಳಸಿಕೊಳ್ಳಲು ಇವರಿಗೆ ಸಂಕೋಚವಾಗುವುದಿಲ್ಲ. ಸಮಾನತೆಯ ಕನಸು ಕಂಡ ಸ್ವಾಮಿ ವಿವೇಕಾನಂದರ ಹೆಸರನ್ನು ಈ ಶಕ್ತಿಗಳು ದುರುಪಯೋಗ ಮಾಡಿಕೊಳ್ಳುತ್ತಿವೆ.

ಹಿಂದುತ್ವದ ಹೆಸರಿನಲ್ಲಿ ಭಾರತ ಎಂಬ ಈ ಮಹಾನ್ ರಾಷ್ಟ್ರವನ್ನು ಒಡೆದು ಇಬ್ಭಾಗ ಮಾಡಿದ ಈ ಕರಾಳ ಶಕ್ತಿಗಳೇ ಈಗ ಜಮ್ಮು-ಕಾಶ್ಮೀರವನ್ನು ನಾಲ್ಕು ಹೋಳನ್ನಾಗಿ ಮಾಡಲು ಸಲಹೆ ನೀಡುತ್ತಿವೆ. ಜಾತಿ ಮತದ ಹೆಸರಿನಲ್ಲಿ ಮತ್ತೊಮ್ಮೆ ಭರತ ಭೂಮಿಯನ್ನು ಒಡೆಯಲು ಹೊರಟ ಈ ನವನಾಜಿಗಳನ್ನು ಚರಿತ್ರೆಯ ಕಸದ ಬುಟ್ಟಿಗೆ ಎಸೆಯಲು ಮಾನವತಾವಾದಿ ಶಕ್ತಿಗಳು ಒಂದುಗೂಡಬೇಕಾಗಿದೆ.

**ಸನತ್‌ಕುಮಾರ ಬೆಳಗಲಿ**
ಎಲ್.ಎಫ್.೧೭೧೬, ಬಿ.ಡಿ.ಎ. ಫ್ಲಾಟ್ಸ್, ಮೈಕೋ ಲೇ ಔಟ್ ಪೊಲೀಸ್ ಸ್ಟೇಷನ್ ಎದುರು, ಬಿ.ಟಿ.ಎಂ. ಲೇ ಔಟ್, ಬೆಂಗಳೂರು-೫೬೦ ೦೭೬

## ಸಾದರ ಸ್ವೀಕಾರ

**ಡಾ|| ಸಿ. ಆರ್. ಚಂದ್ರಶೇಖರ್ ಕೃತಿ ಪರಿಚಯ**
**ಪುಟ : ೧೦೪** **ಬೆಲೆ : ರೂ. ೨೫**

**ರಸರುಚಿ** (ಪಾಕ ಕಲೆ) *ವಿಮಲಾ ಶೇಷಾದ್ರಿ*
**ಪುಟ : ೬೪** **ಬೆಲೆ : ರೂ. ೨೫**
*ಮೇಲಿನ ಎರಡೂ ಪುಸ್ತಕಗಳ ಪ್ರಕಾಶಕರು*
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು-೧

**ಅಗಲ ಕಿವಿಯ ಅರಿವುಗಾರ** (ಮಕ್ಕಳ ನಾಟಕ)
*ಕೃಷ್ಣಮೂರ್ತಿ ಬಿಳಿಗೆರೆ*
**ಪುಟ : ೫೮** **ಬೆಲೆ : ರೂ. ೩೦**
ನಮ್ಮ ಪ್ರಕಾಶನ, ಬಿಳಿಗೆರೆ-೫೭೨ ೧೧೪,

**ಮೂಡಲ ಮರೆಯಲ್ಲಿ** (ಕಾದಂಬರಿ)
*ಎಂ. ವೆಂಕಟಸ್ವಾಮಿ*
**ಪುಟ : ೧೬೮** **ಬೆಲೆ : ರೂ. ೮೦**
**ಪಾಂಚಜನ್ಯ ಪಬ್ಲಿಕೇಷನ್ಸ್**, ನಂ. ೪೨೦/೨೮, ೬-೭ನೇ ಕ್ರಾಸ್ ನಡುವೆ, ಅಮರಜ್ಯೋತಿನಗರ, ಬೆಂಗಳೂರು-೫೬೦ ೦೪೦

**ಬೊಗಸೆಯೊಡ್ಡುವೆ ಸಂತಸದ ಕ್ಷಣಗಳಿಗೆ**
(ಕವನ ಸಂಕಲನ) *ಗೋಪಾಲ ತ್ರಾಸಿ*
**ಪುಟ : ೪೪** **ಬೆಲೆ : ರೂ. ೪೦**
**ಸುವರ್ಣಗಿರಿ ಪ್ರಕಾಶನ**, ೩೦, ಮಾರುತಿ ಲೇನ್, ೩ನೇ ಮಹಡಿ, ಫೋರ್ಟ್ - ಮುಂಬೈ - ೪೦೦ ೦೦೧

**ನೊಮುರಿಯಾ ರಿಲೈ ಆಶಾದಾಯಕ ಕೀಟನಾಶಕ ಶಿಲೀಂಧ್ರ**,
*ಸಂ : ಎಸ್. ಲಿಂಗಪ್ಪ, ಆರ್. ಕೆ. ಪಾಟೀಲ್,*
*ಪಿ. ಎಸ್. ಹೂಗಾರ್* **ಪುಟ : ೪೦**
**ಕೃಷಿ ಕೀಟಶಾಸ್ತ್ರ ವಿಭಾಗ**, ಕೃಷಿ ವಿಶ್ವವಿದ್ಯಾಲಯ, ಧಾರವಾಡ-೫೮೦ ೦೦೫

**ಮಕ್ಕಳೋತ್ಸವ** (ವಿವಿಧ ಕವಿಗಳ ಮಕ್ಕಳ ಪದ್ಯಗಳು)
*ಸಂಗ್ರಹ : ಕೊಣಲ ರಾಘವೇಂದ್ರ ಭಟ್*
**ಪುಟ : ೨೨೬** **ಬೆಲೆ : ರೂ. ೩೫**
**ಬಾಲಕಾರ್ಮಿಕ ಪದ್ಧತಿ ವಿರೋಧಿ ಆಂದೋಲನ-ಕರ್ನಾಟಕ**, ವಿಮುಕ್ತಿ ಏಕಲವ್ಯ
ಚಿತ್ರದುರ್ಗ ಮತ್ತು ದಾವಣಗೆರೆ

**ಸ್ವಾತಿ ಹನಿಗಳು** (ಕವನ ಸಂಕಲನ)
*ಶ್ರೀಮತಿ ರತ್ನ ಎಂ. ಅಂಗಡಿ (ಸಜ್ಜನರ)*
**ಪುಟ : ೧೧೨** **ಬೆಲೆ : ರೂ. ೪೦**
**ಅಪೇಕ್ಷಾ ಪ್ರಕಾಶನ**, 'ಹೊಂಬೆಳಕು', ಅಂಬಾಭವಾನಿ ನಗರ, ಮುಂಡರಗಿ - ೫೮೨ ೧೧೮, ಗದಗ ಜಿಲ್ಲೆ.

**ಉರಿ ಬದಲಾಗಿದೆಯೇ** (ವಿವಿಧ ಕವಯತ್ರಿಯರ ಕವನಗಳು) *ಸಂ : ಡಾ|| ಕೆ. ಆರ್. ಸಂಧ್ಯಾರೆಡ್ಡಿ*
**ಪುಟ : ೭೪** ಗ್ರಂಥದಾನ
**ಕರ್ನಾಟಕ ಲೇಖಕಿಯರ ಸಂಘ (ರಿ)**
ಪ್ಲಾಟ್ ನಂ. ೨೦೬, 'ವಿಜಯ ಮ್ಯಾನ್‌ಶನ್'
೨ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ
ಚಾಮರಾಜಪೇಟೆ
ಬೆಂಗಳೂರು-೫೬೦ ೦೧೮



ಡಾ|| ಕೆ. ಪೂರ್ಣಿಮಾ ಕೋಡೂರು

# ಮೆಂತೆಯಿಂದ ಸ್ವಚ್ಛ ಆರೋಗ್ಯಪೂರ್ಣ ದೇಹ

**ಮೆಂ**ತೆ ಒಂದು ಒಳ್ಳೆಯ ಹಸಿರು ತರಕಾರಿಯಲ್ಲದೆ, ಇದು ಅಧಿಕ ಔಷಧೀಯ ಗುಣಗಳನ್ನೊಳಗೊಂಡಿದೆ. ಮೆಂತೆಯ ಕಾಳು ಒಂದು ಸಾಂಬಾರು ಪದಾರ್ಥ ಕೂಡ. ಇದು ಮಾನವನಿಗೆ ಪ್ರಕೃತಿಯ ಬಹುದೊಡ್ಡ ಕೊಡುಗೆ. ಇದರ ಪ್ರತಿದಿನದ ಉಪಯೋಗ ನಮ್ಮ ದೇಹದ ಆರೋಗ್ಯ ಮತ್ತು ಸ್ವಚ್ಛತೆಗೆ ದಾರಿದೀಪವಾಗಿದೆ.

ಮೆಂತೆ ಗಿಡ ಅಧಿಕ ಸುವಾಸನೆಯುಳ್ಳದ್ದಾಗಿದ್ದು ಸುಮಾರು ೩೦-೬೦ ಸೆಂ.ಮೀ.ನಷ್ಟು ಎತ್ತರಕ್ಕೆ ಬೆಳೆಯುತ್ತದೆ. ಇದು ತೆಳುಹಸಿರಿನ ಎಲೆಗಳನ್ನು ಹೊಂದಿದ್ದು ಹಳದಿ ಬಣ್ಣದ ಹೂವುಗಳನ್ನು, ತೆಳುವಾದ ಚೂಪಾಗಿರುವ ಕಾಯಿಗಳನ್ನೊಳಗೊಂಡಿದೆ.

ಬೀಜವು ಕಂದುಮಿಶ್ರಿತ ಹಳದಿ ಬಣ್ಣವನ್ನು ಹೊಂದಿದ್ದು, ತನ್ನದೇ ಆದ ಪರಿಮಳದಿಂದ ಕೂಡಿದೆ.

"ಟ್ರಿಗೋನೆಲ್ಲಾ ಫೆನುಮ್‌ಗ್ರೀಕಂ" ಸಸ್ಯನಾಮವನ್ನು ಹೊಂದಿರುವ ಮೆಂತೆಯ ತವರೂರು ಪಶ್ಚಿಮ ಯುರೋಪ್ ಮತ್ತು ಇಥಿಯೋಪಿಯ. ಉತ್ತರ ಪೂರ್ವ ಭಾರತದಲ್ಲಿದ್ದು ಕಾಡು ಸಸ್ಯದಂತೆ ಬೆಳೆಯುತ್ತದೆ. ಮೆಡಿಟರೇನಿಯನ್ ಸಮುದ್ರದ ದಂಡೆಯಲ್ಲಿ ಮತ್ತು ಏಷಿಯಾದಲ್ಲಿ ವಾಸವಾಗಿದ್ದ ಜನಗಳು ಪ್ರಾಚೀನ ಕಾಲದಿಂದಲೇ ಇದನ್ನು ಆಹಾರವಾಗಿಯೂ ಮತ್ತು ಔಷಧವಾಗಿಯೂ ಉಪಯೋಗಿಸುತ್ತಿದ್ದರು. ಇದನ್ನು ಇಂಡಿಯಾದ ಎಲ್ಲಾ ಭಾಗಗಳಲ್ಲಿಯೂ ಬೆಳೆಯುತ್ತಾರೆ.

೧೦೦ ಗ್ರಾಂ. ಮೆಂತೆಯ ಎಲೆಯಲ್ಲಿರುವ **ಪೌಷ್ಟಿಕಾಂಶಗಳು** : ನೀರಿನಂಶ ಶೇ. ೮೬.೧, ಪ್ರೋಟೀನ್ ಶೇ. ೪.೪, ಕೊಬ್ಬು ಶೇ. ೦.೯, ಖನಿಜಾಂಶಗಳು ಶೇ. ೧.೫, ನಾರಿನಂಶ ಶೇ. ೧.೧, ಕಾರ್ಬೋಹೈಡ್ರೇಟ್ಸ್ ಶೇ.೦.೬ನಷ್ಟಿರುತ್ತದೆ.

**ಇದರ ಖನಿಜಾಂಶ ಮತ್ತು ಮಿಟಮಿನ್‌ಗಳು:** ಕ್ಯಾಲ್ಸಿಯಂ-೩೯೫ ಮಿಲಿಗ್ರಾಂ, ಫಾಸ್ಫರಸ್-೫೧ ಮಿಲಿಗ್ರಾಂ, ಕಬ್ಬಿಣ-೧೬.೫ ಮಿಲಿಗ್ರಾಂ, ಕೆರೋಟಿನ್- ೨೩೪೦ ಮೈಕ್ರೋಗ್ರಾಂ, ಥೈಯಾಮಿನ್-೦.೦೪ ಮಿಲಿಗ್ರಾಂ, ರೈಬೋಫ್ಲೇವಿನ್-೦.೩೧ ಮಿಲಿಗ್ರಾಂ, ನಿಯಾಸಿನ್-೦.೮ ಮಿಲಿಗ್ರಾಂ, ವಿಟಮಿನ್ 'ಸಿ' ೫೦ ಗ್ರಾಂ. ಗಳಷ್ಟು ಪ್ರತೀ ೧೦೦ ಗ್ರಾಂ. ಮೆಂತೆ ಸೊಪ್ಪಿನಲ್ಲಿರುತ್ತವೆ. ಇದರಲ್ಲಿರುವ ಕ್ಯಾಲೊರಿಯು ೪೯ರಷ್ಟು.

೧೦೦ ಗ್ರಾಂ. ಮೆಂತೆಕಾಳುಗಳಲ್ಲಿ ಪರಿಮಳಯುಕ್ತ ಕಹಿ ಕೊಬ್ಬಿನ ಎಣ್ಣೆ ಶೇ. ೬, ರೆಸಿನ್ ಮತ್ತು ಮ್ಯುಸಿಲೇಜ್ ಶೇ. ೨೮, ಆಲ್ಬುಮಿನ್ ಶೇ. ೨೨ ಮತ್ತು ತೇವಾಂಶ ಶೇ. ೧೩.೭, ಪ್ರೋಟೀನ್ ಶೇ. ೨೬.೨, ಕೊಬ್ಬು ಶೇ. ೫.೮, ಖನಿಜಗಳು ಶೇ. ೩, ನಾರಿನಂಶ ಶೇ. ೭.೨ ಮತ್ತು ಕಾರ್ಬೋ ಹೈಡ್ರೇಟ್ಸ್ ಶೇ. ೪೪.೧ನಷ್ಟಿರುತ್ತದೆ.

ಮೆಂತೆಕಾಳುಗಳಲ್ಲಿರುವ ಖನಿಜಗಳು ಮತ್ತು ವಿಟಮಿನ್‌ಗಳೆಂದರೆ, ಪ್ರತೀ ೧೦೦ ಗ್ರಾಂಗಳಲ್ಲಿ ಕ್ಯಾಲ್ಸಿಯಂ -೧೬೦ ಮಿಲಿಗ್ರಾಂ, ಫಾಸ್ಫರಸ್-೩೭೦ ಮಿಲಿಗ್ರಾಂ, ಕಬ್ಬಿಣಾಂಶ -೧೪.೧ ಮಿಲಿಗ್ರಾಂ, ಕೆರೋಟಿನ್-೯೬ ಮೈಕ್ರೋಗ್ರಾಂ, ಥಿಯಾಮಿನ್-೦.೩೪ ಮಿಲಿಗ್ರಾಂ, ರೈಬೋಫೇವಿನ್-೦.೨೯ ಮಿಲಿಗ್ರಾಂ, ನಿಯಾಸಿನ್- ೧.೧ ಮಿಲಿಗ್ರಾಂಗಳಷ್ಟಿರುತ್ತವೆ. ಇದರಲ್ಲಿರುವ ಕ್ಯಾಲೊರಿ ಪ್ರಮಾಣ-೩೩೩.

ಮೆಂತೆಯ ಕಾಳುಗಳು ದೇಹದ ಉತ್ತಮ ಸ್ವಚ್ಛಕರ್ತ ಮತ್ತು ಲೋಳೆಯುಕ್ತವಾಗಿ, ಮೃದುಕಾರಕವಾಗಿವೆ. ಭಾರತದಲ್ಲಿ ಮೆಂತೆಯ ಎಲೆಗಳನ್ನು ಸಾಮಾನ್ಯವಾಗಿ ತರಕಾರಿಯಂತೆ ಉಪಯೋಗಿಸುತ್ತಾರೆ. ಇದರಿಂದ ಪಲ್ಯ, ಸಾಂಬಾರು, ಚಿತ್ರಾನ್ನ ಮುಂತಾದವುಗಳನ್ನು ತಯಾರಿಸುತ್ತಾರಲ್ಲದೆ, ಉತ್ತರ ಕರ್ನಾಟಕದ ಜನರು ರೊಟ್ಟಿಯೊಂದಿಗೆ ಹಸಿ ಸೊಪ್ಪನ್ನು ಚೆನ್ನಾಗಿ ತೊಳೆದು ತಿನ್ನುತ್ತಾರೆ. ಇವು ಪರಿಮಳದಿಂದ ಕೂಡಿದ್ದು, ತಂಪಾದ ಗುಣವನ್ನು ಹೊಂದಿರುವುದಲ್ಲದೆ ಮೃದು ವಿರೇಚಕವಾಗಿವೆ.

ಮೆಂತೆ ಎಲೆಗಳು ಅಜೀರ್ಣ, ವಾತರೋಗ ಮತ್ತು ಯಕೃತ್ ತೊಂದರೆಗಳಲ್ಲಿ, ಬಾಯಿಹುಣ್ಣುಗಳಲ್ಲಿ ಉಪಯುಕ್ತ ಔಷಧಿಯಾಗಿ ಕೆಲಸ ಮಾಡುತ್ತವೆ. ಪದೇಪದೇ ಕಾಣಿಸಿಕೊಳ್ಳುವ ಬಾಯಿಹುಣ್ಣುಗಳಲ್ಲಿ ಮೆಂತ್ಯದ ಕಷಾಯ ದಿಂದ ಬಾಯಿ ಮುಕ್ಕಳಿಸುತ್ತಿರಬೇಕು.

– ಕುದಿಸಿದ ಅಥವಾ ಬೆಣ್ಣೆಯಲ್ಲಿ ಕರಿದ ಎಲೆಗಳ ಸೇವನೆ ಪಿತ್ತದ ತೊಂದರೆಯಲ್ಲಿ ಅನುಕೂಲಕರ.

– ಮೆಂತೆಕಾಳುಗಳನ್ನು ಭಾರತದಲ್ಲಿ ತುಂಬಾ ಪುರಾತನ ಕಾಲದಿಂದಲೂ ನೈಸರ್ಗಿಕ ಔಷಧಿಯಾಗಿಯೂ ಭೇದಿ ಮತ್ತು ಹೊಟ್ಟೆ ಹಿಡಿದುಕೊಂಡಂತೆ ಆದ ಸ್ಥಿತಿಯಲ್ಲಿ ಉಪಯೋಗಿಸುತ್ತಿದ್ದರು. ಅರ್ಧ ಟೀ ಚಮಚ ಮೆಂತೆ ಕಾಳುಗಳನ್ನು ದಿನದಲ್ಲಿ ಮೂರು ಬಾರಿ ಸೇವಿಸುವುದರಿಂದ, ದೊಡ್ಡವರಲ್ಲಿ ತಕ್ಷಣದಲ್ಲಿ ಒಳ್ಳೆಯ ಫಲಿತಾಂಶವನ್ನು ಕೊಡುತ್ತದೆ.

– ಮೆಂತೆಕಾಳುಗಳನ್ನು ಹೊಟ್ಟೆನೋವು, ಭೇದಿ ಮತ್ತು ಅಜೀರ್ಣಗಳಲ್ಲಿ ಉಪಯೋಗಿಸುತ್ತಾರೆ.

– ಮೆಂತೆಯ ಎಲೆಗಳು ರಕ್ತವೃದ್ಧಿಗೆ ಸಹಾಯಕವಾಗಿರುವುದರಿಂದ ಬೇಯಿಸಿದ ಎಲೆಗಳನ್ನು ದೊಡ್ಡ ಹುಡುಗಿಯರಲ್ಲಿ ಉಂಟಾಗುವ ರಕ್ತಹೀನತೆಯಲ್ಲಿ ಉಪಯೋಗಿಸಬಹುದು. ಹುಡುಗಿಯರು ಮೈನೆರೆಯುವ ಸಂದರ್ಭಗಳಲ್ಲಿ ಉಂಟಾಗುವ ಸಮಸ್ಯೆಗಳನ್ನು ದೂರವಿಡುವಲ್ಲಿ ಮತ್ತು ಅವರ ಪರಿಪೂರ್ಣ ಬೆಳವಣಿಗೆಯಲ್ಲಿ ಸಹಾಯಕವಾಗುತ್ತದೆ.

ಮೆಂತೆಕಾಳುಗಳು ಕೂಡ ಅಧಿಕ ಪ್ರಮಾಣದಲ್ಲಿ ಕಬ್ಬಿಣಾಂಶವನ್ನು ಹೊಂದಿರುವುದರಿಂದ ರಕ್ತಹೀನತೆ ತಡೆಗಟ್ಟುವಲ್ಲಿ ಸಹಾಯಕ.

– ಮೆಂತೆಕಾಳುಗಳನ್ನು ಮತ್ತು ಅರ್ಧ ಪ್ರಮಾಣದಷ್ಟು ಜೀರಿಗೆಯನ್ನು ತುಪ್ಪದಲ್ಲಿ ಹುರಿದು ತಯಾರಿಸಿದ ಚೂರ್ಣಕ್ಕೆ ಗೋಧಿಹಿಟ್ಟು ಮತ್ತು ಬೆಲ್ಲ ಅಥವಾ ಸಕ್ಕರೆ ಸೇರಿಸಿ ತಯಾರಿಸಿದ ಹಲ್ವವನ್ನು ದಿನವೂ ಸ್ವಲ್ಪ ಸ್ವಲ್ಪ ತಿನ್ನುವುದರಿಂದ ಹೆರಿಗೆಯ ನಂತರ ತಕ್ಷಣ ಸಾಮಾನ್ಯ ಸ್ಥಿತಿಗೆ ಬರಲು ಸಹಾಯಕವಾಗುತ್ತದೆ.

ಇದರ ಅಲ್ಪ ಪ್ರಮಾಣದ ಸೇವನೆಯಿಂದ, ಗರ್ಭಿಣಿ ಸ್ತ್ರೀಯೊಂದಿಗೆ ಶಿಶುವಿನ ಆರೋಗ್ಯವೂ ಉತ್ತಮಗೊಂಡು ಸುಖ ಪ್ರಸವವಾಗುತ್ತದೆ.

– ಮೆಂತೆಕಾಳುಗಳ ಗಂಜಿಯನ್ನು ಆಹಾರವಾಗಿ ಸೇವಿಸುವುದರಿಂದ, ಹಾಲೂಡಿಸುವ ತಾಯಂದಿರಲ್ಲಿ ಮೊಲೆಹಾಲಿನ ಪ್ರಮಾಣ ಹೆಚ್ಚಾಗುತ್ತದೆ.

– ಪ್ರತಿದಿನದ ಮೆಂತೆಕಾಳುಗಳ ಉಪಯೋಗದಿಂದ, ವಾಸನೆ ಸಿಗದ ಮತ್ತು ರುಚಿ ಕೆಟ್ಟುಹೋದ ಇಂದ್ರಿಯಗಳನ್ನು ಪುನಃ ಸಹಜ ಸ್ಥಿತಿಗೆ ತರಬಹುದು.

– ಮೆಂತ್ಯದ ಕಾಳಿನ ಕಷಾಯ ಜ್ವರ ಸಂತಾಪದ ಇಳಿಯುವಿಕೆಯಲ್ಲಿ ಕ್ವಿನೈನ್‌ನಷ್ಟೇ ಪ್ರಭಾವವನ್ನು ಹೊಂದಿದೆ.

– ಹೊಟ್ಟೆ ಉಬ್ಬರಿಸುವಿಕೆಯಲ್ಲಿ, ಕರುಳು, ಮೂತ್ರ ಕೋಶಗಳು ಮತ್ತು ಅಧಿಕ ಶ್ಲೇಷ್ಮ ಹೊಂದಿರುವ ಶ್ವಾಸ ನಾಳಗಳನ್ನು ಸ್ವಚ್ಛವಾಗಿಸುತ್ತದೆ. ಇದನ್ನು ಹೊಟ್ಟೆ ಹುಣ್ಣಿನ ಮಾಯುವಿಕೆಯಲ್ಲಿ ಕೂಡ ಉಪಯೋಗಿಸಬಹುದು.

– ಶ್ವಾಸನಾಳದ ಸೋಂಕುಗಳ ಮೊದಲ ಹಂತದಲ್ಲಿ, ಶ್ವಾಸನಾಳದ ಒಳಚರ್ಮದ ಊತ, ಶೀತಜ್ವರ, ಭಗಂದರ, ನೆಗಡಿ, ಶಂಕಿತ ಶ್ವಾಸಕೋಶದ ಉರಿಯೂತಗಳ ಮೊದಲನೆಯ ಹಂತದಲ್ಲಿ ಮೆಂತೆಕಾಳಿನ ಕಷಾಯವನ್ನು ಉಪಯೋಗಿಸುವುದರಿಂದ, ದೇಹದ ಬೆವರುವಿಕೆಯಲ್ಲಿ ಸಹಾಯಮಾಡಿ, ದೋಷಗಳನ್ನು ಹೊರ ಹಾಕುವುದಲ್ಲದೆ, ಜ್ವರದ ಕಾಲವನ್ನು ಕಡಿಮೆ ಮಾಡುತ್ತದೆ. ದಿನದಲ್ಲಿ ನಾಲ್ಕು ಕಪ್‌ಗಳಷ್ಟು ಕಷಾಯವನ್ನು ಕುಡಿಯಬೇಕು. ಜ್ವರದ ತಾಪದ ಇಳಿಯುವಿಕೆ ಕಂಡುಬಂದಂತೆ ಕಷಾಯದ ಪ್ರಮಾಣವನ್ನು ಕೂಡ ಕಡಿಮೆಗೊಳಿಸಬೇಕು.

– ಗಂಟಲು ಕೆರೆತ, ಗಂಟಲು ನೋವುಗಳಿಗೆ ಮೆಂತೆ ಕಾಳಿನ ಕಷಾಯದಿಂದ ಬಾಯಿ ಮುಕ್ಕಳಿಸುವುದೇ ಸೂಕ್ತ ಪರಿಹಾರವಾಗುತ್ತದೆ. ೨ ಟೀ ಚಮಚದಷ್ಟು ಮೆಂತೆಕಾಳನ್ನು ಒಂದು

ಲೀಟರ್‌ನಷ್ಟು ತಣ್ಣೀರಿನಲ್ಲಿ ಹಾಕಿ, ಅರ್ಧ ಗಂಟೆಯ ಕಾಲ ಮಂದ ಉರಿಯಲ್ಲಿ ಕುದಿಸಿ ತಯಾರಿಸಿದ ಕಷಾಯವನ್ನು ನಮ್ಮ ಅನುಕೂಲಕ್ಕಾಗುವಷ್ಟು ತಣ್ಣಗಾದ ಕೂಡಲೇ ಸೋಸಿ, ಎಲ್ಲವನ್ನೂ ಬಾಯಿ ಮುಕ್ಕಳಿಸಲು ಉಪಯೋಗಿಸಬೇಕು.

– ಹೆಂಗಸರಲ್ಲಿ ಕಂಡುಬರುವ ಬಿಳಿಸೆರಗಿನ ತೊಂದರೆಯಲ್ಲಿ ಮೆಂತೆಕಾಳಿನ ಟೀಯನ್ನು ಕುಡಿಯಲು ಉಪಯೋಗಿಸುವುದು ಒಳಿತು. ಕಷಾಯದಿಂದಲೇ ಯೋನಿದ್ವಾರವನ್ನು ಸ್ವಚ್ಛಗೊಳಿಸುವುದು ಆರೋಗ್ಯಕರ.

– ಮೆಂತೆ ಕಾಳುಗಳು ತಲೆಹೊಟ್ಟುಗಳನ್ನು ನಿವಾರಿಸುವಲ್ಲಿ ಪ್ರಮುಖ ಪಾತ್ರವಹಿಸಿವೆ. ೨ ಟೀ ಚಮಚ ಮೆಂತೆ ಕಾಳುಗಳನ್ನು ರಾತ್ರಿಯಿಡೀ ನೀರಿನಲ್ಲಿ ನೆನೆಸಿಟ್ಟು ಬೆಳಿಗ್ಗೆ ಚೆನ್ನಾಗಿ ಪೇಸ್ಟ್‌ನಂತೆ ಅರೆದು, ತಲೆಗೆಲ್ಲಾ ಸರಿಯಾಗಿ ಹಚ್ಚಿಕೊಂಡು ಅರ್ಧ ಅಥವಾ ಒಂದು ಗಂಟೆ ಕಾಲ ಹಾಗೇ ಬಿಟ್ಟು, ನಂತರ ತಲೆಯನ್ನು ಅಂಟುವಾಳ ಕಾಯಿಯ ನೀರನ್ನು ಅಥವಾ ಸೀಗೇಕಾಯಿ ಪುಡಿಯನ್ನು ಉಪಯೋಗಿಸಿ ಚೆನ್ನಾಗಿ ತೊಳೆಯುವುದರಿಂದ, ಹೊಟ್ಟುಗಳು ನಿವಾರಣೆಯಾಗುವುದಲ್ಲದೆ ಕೂದಲಿಗೆ ಹೆಚ್ಚಿನ ಪೋಷಣೆ ದೊರೆತು ಚೆನ್ನಾಗಿ ಬೆಳೆಯುತ್ತದೆ.

– ತಾಜಾ ಮೆಂತೆಯ ಎಲೆಯ ಪೇಸ್ಟ್ ಕೂಡ, ಕೂದಲನ್ನು ಉದ್ದವಾಗಿಸುವುದಲ್ಲದೆ, ಕೂದಲಿನ ನೈಸರ್ಗಿಕ ಬಣ್ಣವನ್ನು ಸಂರಕ್ಷಿಸಿ, ರೇಷ್ಮೆಯಂತೆ ಮೃದುವಾಗಿಸುತ್ತದೆ.

– ಮೆಂತೆಯ ಸೊಪ್ಪಿನ ಪೇಸ್ಟನ್ನು ದಿನಾ ಮಲಗುವ ಮೊದಲು ಮುಖಕ್ಕೆ ಲೇಪಿಸಿಕೊಂಡು, ಒಣಗಿದ ನಂತರ ಉಗುರು ಬೆಚ್ಚಗಿನ ನೀರಿನಿಂದ ಸ್ವಚ್ಛವಾಗಿಸಿಕೊಳ್ಳುವುದರಿಂದ, ಮೊಡವೆಗಳು, ಬ್ಲಾಕ್ ಹೆಡ್‌ಗಳನ್ನು ನಿರ್ಮೂಲ ಮಾಡುವುದಲ್ಲದೆ, ಸುಕ್ಕುಗಳ ಆಗಮನವನ್ನು ತಡೆಗಟ್ಟಿ ಮುಖದ ಕಾಂತಿಯನ್ನು ಹೆಚ್ಚಿಸುತ್ತದೆ. ಇದರಿಂದ ವಯಸ್ಸಾಗಿದ್ದರೂ ಸಹ ಹುಡುಗಿಯರಂತೆ ಕಾಣಬಹುದು.

ಮೆಂತ್ಯದ ಕಾಳುಗಳು ಮಧುಮೇಹ ರೋಗಕ್ಕೆ ಅತ್ಯುಪಯುಕ್ತ ಚಿಕಿತ್ಸೆ. ಮೆಂತ್ಯದ ಕಾಳಿನಲ್ಲಿ ಶೇ. ೫೦ ರಷ್ಟಿರುವ ನಾರಿನಂಶ ಮತ್ತು ಟ್ರೈಗೋನೆಲ್ಲಾ ಎಂಬ ವಸ್ತು ರಕ್ತದಲ್ಲಿನ ಸಕ್ಕರೆಯ ಮಟ್ಟವನ್ನು ಕೆಳಗಿಳಿಸುತ್ತದೆ.

ಹೈದರಾಬಾದ್‌ನ ''ನ್ಯಾಷನಲ್ ಇನ್‌ಸ್ಟಿಟ್ಯೂಟ್ ನ್ಯೂಟ್ರಿಷನ್''ನಲ್ಲಿ ನಡೆದ ಸಂಶೋಧನೆಯ ಪ್ರಕಾರ, ಮೆಂತೆಕಾಳುಗಳನ್ನು ಬೇರೆ ಬೇರೆ ಪ್ರಮಾಣಗಳಲ್ಲಿ ಅಂದರೆ ದಿನವೂ ೨೫-೧೦೦ ಗ್ರಾಂ. ಪ್ರಮಾಣದಷ್ಟನ್ನು ತೆಗೆದುಕೊಳ್ಳುತ್ತಿದ್ದರೆ ಮಧುಮೇಹ ರೋಗಿಗಳಲ್ಲಿಯ ಹೈಪರ್ ಗ್ಲೈಸಿಮಿಯಾ ಕಡಿಮೆಯಾಗುತ್ತದೆ.

ಈ ಕಾಳುಗಳ ಸೇವನೆಯಿಂದ ಗ್ಲುಕೋಸ್‌ನ ಮಟ್ಟ, ಸೀರಮ್ ಕೊಲೆಸ್ಟ್ರಾಲ್ ಮತ್ತು ಟ್ರೈಗ್ಲಿಸರಾಯ್ಡ್ ಈ ಎಲ್ಲವೂ ಸಮ ಪ್ರಮಾಣದಲ್ಲಿರುತ್ತದೆ. ಈ ರೀತಿ ಮಧುಮೇಹ ರೋಗಿಗಳ ಪ್ರತಿದಿನದ ಆಹಾರಗಳಲ್ಲಿ ಮೆಂತ್ಯದ ಕಾಳಿನ ಪ್ರಮಾಣ ೧, ೨೦೦-೧,೪೦೦ ಕ್ಯಾಲೊರಿಗಳಷ್ಟಿರಬೇಕು.

ಇದನ್ನು ಆಹಾರದಲ್ಲಿ ಉಪಯೋಗಿಸುವುದರಿಂದ ಇನ್ಸುಲಿನ್ ಅವಲಂಬಿಸಿದ ಅಥವಾ ಅವಲಂಬಿಸದ ಮಧುಮೇಹ ರೋಗಿಗಳ ರಕ್ತ ಮತ್ತು ಮೂತ್ರದಲ್ಲಿನ ಸಕ್ಕರೆಯ ಪ್ರಮಾಣವು ಕಡಿಮೆಯಾಗಿದೆ.

ಮಧುಮೇಹ ರೋಗಿಗಳು ಮೆಂತ್ಯದ ಕಾಳುಗಳನ್ನು ಅವರ ರುಚಿಗೆ ತಕ್ಕಂತೆ ಮೂರು ವಿಧಾನಗಳಲ್ಲಿ ಸೇವಿಸಬಹುದು.

ಮೊದಲನೆಯದು – ರಾತ್ರಿಯೆಲ್ಲಾ ನೆನೆಸಿದ ಮೆಂತ್ಯದ ಕಾಳುಗಳನ್ನು ನೀರು ಬಸಿದು, ಊಟಕ್ಕೆ ೧೫ ನಿಮಿಷಗಳ ಮೊದಲು ಸೇವಿಸಬಹುದು, ಅಥವಾ

ಎರಡನೆಯದು – ರಾತ್ರಿಯೆಲ್ಲಾ ನೆನೆಸಿದ ಮೆಂತ್ಯದ ಕಾಳುಗಳನ್ನು ಬೆಳಿಗ್ಗೆ ನೀರಿನಿಂದ ಬೇರ್ಪಡಿಸಿ, ಬಿಸಿಲಿನಲ್ಲಿ ಒಣಗಿಸಿ ಪುಡಿ ಮಾಡಿ, ನೀರಿನೊಂದಿಗೆ ಅಥವಾ ಮಜ್ಜಿಗೆಯೊಂದಿಗೆ ಸೇರಿಸಿ, ಊಟಕ್ಕೆ ೧೫ ನಿಮಿಷಗಳ ಮುಂಚೆ ಕುಡಿಯಬಹುದು.

ಇದರ ಕಹಿಯಾದ ರುಚಿಯಿಂದ, ಮೊದಲು ತಿಳಿಸಿದ ಎರಡೂ ವಿಧಾನಗಳೂ ಕಷ್ಟವಾಗುವುದಾದಲ್ಲಿ ನೆನೆಸಿದ ಕಾಳುಗಳನ್ನು ಒಣಗಿಸಿ ಮಾಡಿದ ಪುಡಿಯನ್ನು ಊಟ, ಉಪ ಹಾರಗಳನ್ನು ತಯಾರಿಸುವಾಗ ಉಪಯೋಗಿಸಿದಲ್ಲಿ ಬೇರಾವ ತೊಂದರೆಯೂ ಉಂಟಾಗುವುದಿಲ್ಲ. ಮಧುಮೇಹ ರೋಗಿಗಳು ಪಥ್ಯವನ್ನು ಕಟ್ಟುನಿಟ್ಟಾಗಿ ಪಾಲಿಸಿ, ಮೆಂತೆ ಕಾಳುಗಳನ್ನು ಸೇವಿಸಿದಲ್ಲಿ ಮೂತ್ರ ಮತ್ತು ರಕ್ತದಲ್ಲಿನ ಸಕ್ಕರೆಯ ಪ್ರಮಾಣವನ್ನು ನಿಯಂತ್ರಣದಲ್ಲಿ ಇಡಬಹುದು.

ಕೆಲವು ರೋಗಿಗಳಿಗೆ ಮೆಂತ್ಯದ ಸೇವನೆ ಪ್ರಾರಂಭದಲ್ಲಿ ಭೇದಿ ಅಥವಾ ಅತಿ ವಾಯುವಿನ ತೊಂದರೆ ಉಂಟಾದರೂ ಕೆಲವರಿಗೆ ಕಾಲಕ್ರಮೇಣ ರೂಢಿಯಾದಂತೆ ಕಡಿಮೆಯಾಗಬಹುದು, ಕಡಿಮೆಯಾಗದಿದ್ದಲ್ಲಿ ಮೆಂತೆ ಕಾಳಿನ ಸೇವನೆಯ ಪ್ರಮಾಣವನ್ನು ತಗ್ಗಿಸಬೇಕು.

ರಕ್ತ ಮತ್ತು ಮೂತ್ರದಲ್ಲಿನ ಸಕ್ಕರೆಯಂಶ ಕಡಿಮೆಯಾಗುವವರೆಗೆ ಮಾತ್ರ ಮೆಂತೆಕಾಳುಗಳನ್ನು ಸೇವಿಸಬೇಕು. ಈ ಮೆಂತೆಕಾಳುಗಳ ಸೇವನೆ, ಮಧುಮೇಹ ರೋಗದ ನಿಯಂತ್ರಣಕ್ಕೆ ಅಥವಾ ಚಿಕಿತ್ಸೆಗೆ ಸಹಕಾರಿಯಷ್ಟೇ ವಿನಃ ಬದಲಿ ಚಿಕಿತ್ಸೆ ಅಥವಾ ಬದಲಿ ಔಷಧಿಯಲ್ಲ. ಮೆಂತೆಯ ಕಾಳು ಅಥವಾ ಎಲೆಗಳ ಕಣಕವನ್ನು ಬಾವುಗಳ ಮೇಲೆ ಲೇಪಿಸುವುದರಿಂದ ಮತ್ತು ಮೆಂತೆಕಾಳುಗಳ ಅಥವಾ ಎಲೆಗಳ ಕಷಾಯ ಸೇವನೆಯಿಂದ, ಬಾಹ್ಯ ಹಾಗೂ ಆಂತರಿಕ ಬಾವುಗಳ ನಿವಾರಣೆಯಾಗುತ್ತವೆ.

ಮೆಂತೆದ ಸೊಪ್ಪನ್ನು ನೀರಿನ ಹಬೆಯಲ್ಲಿ ಬೇಯಿಸುವುದರಿಂದ ಅಥವಾ ನೆರಳಿನಲ್ಲಿ ಒಣಗಿಸಿದ ಮೆಂತ್ಯದ ಸೊಪ್ಪು ಜೀವಸತ್ವಗಳನ್ನು ಹಾಗೇ ಉಳಿಸಿಕೊಂಡು ಶಕ್ತಿವರ್ಧಕವಾಗಿ ಕೆಲಸ ಮಾಡುತ್ತದೆ.

ಆಯುರ್ವೇದಾಚಾರ್ಯರ ಪ್ರಕಾರ ಮೆಂತೆ ಮೂತ್ರ ವರ್ಧಕ, ವಿರೇಚಕ, ಹುಣ್ಣುನಾಶಕವೂ ಆಗಿದೆ.

ಮೆಂತ್ಯದ ಕಾಳಿನ ಕಷಾಯ ದೇಹಶುದ್ಧಿಕಾರಕವೂ ತಂಪಾದ ಪಾನೀಯವೂ ಆಗಿದೆ.

ಡಾ|| ಕೆ. ಪೂರ್ಣಿಮಾ ಕೋಡೂರು
ಶ್ರೀದುರ್ಗಾ ಕ್ಲಿನಿಕ್, ಕೋಡೂರು-೫೭೭ ೪೪೫, ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ

*೪೯ನೇ ಪುಟದಿಂದ*

ಬರೆಯತೊಡಗಿದ. ಪತ್ರಿಕೆಗಳಲ್ಲಿ ಪ್ರಕಾಶನ ಕಂಡ ಕಥೆಗಳಿಂದ ಅವನ ಹೆಸರು ಪ್ರಸಿದ್ಧಿಗೆ ಬಂದಿತು. 'ಮ್ಯಾಕ್ಸಿಮ್ ಗಾರ್ಕಿ' ಎಂಬ ಹೆಸರಿನಿಂದ ಬಂದ ಕಥೆಗಳಿಂದ ಪ್ರಭಾವಿತನಾದ ವ್ಲಾದಿಮೀರ ಕೊರೊಲೆಂಕೊ ಎಂಬ ಪತ್ರಿಕೆಯ ಪ್ರಕಾಶಕನು ಇವನನ್ನು ಸಂಪಾದಕನೆಂದು ನೇಮಿಸಿಕೊಂಡನು. ಇದರಿಂದ ಓದಲು-ಬರೆಯಲು ಹೆಚ್ಚು ಸಮಯ ದೊರಕಿತು.

ಪತ್ರಿಕೆಯಲ್ಲಿ ಬಂದ 'ಬಿರುಗಾಳಿಯ ಗತಿ' ಎಂಬ ಕವಿತೆಯಿಂದ ಗೋರ್ಕಿಯು ಮುಂದಾಗುವ ಕ್ರಾಂತಿಯ ಸುಳಿವನ್ನು ನೀಡಿದನು. ಇದರಿಂದ ರಶಿಯಾದ ಸುಧಾರವಾದಿ ಮುಖಂಡ ವ್ಲಾದಿಮಿರ್ ಲೆನಿನ್‌ನು ಪ್ರಭಾವಿತನಾದನು. ಇವನ ಗೆಳೆತನ ಬೆಳೆಸಿದನು. ಇದರಿಂದ ಗೋರ್ಕಿಗೆ ಪ್ರೋತ್ಸಾಹ ದೊರೆಯಿತು. ಮತ್ತಷ್ಟು ನಿಖರವಾಗಿ ಬರೆಯತೊಡಗಿದ. ಇದರಿಂದ ಪ್ರಸಿದ್ಧ ಪ್ರಕಾಶಕರು ಇವನ ಕೃತಿಗಳನ್ನು ಪ್ರಕಟಪಡಿಸಲು ಮುಂದಾದರು.

೯ ಜನವರಿ ೧೯೦೫ರಲ್ಲಿ ರಶಿಯಾದಲ್ಲಿ ಮೊದಲ ಕ್ರಾಂತಿಯಾಯಿತು. ಆಗ ಗೋರ್ಕಿ 'ಬಡವರು ಒಂದಾಗಿ ತಮ್ಮ ಜೀವನವನ್ನು ಸುಧಾರಿಸಿಕೊಳ್ಳಬೇಕು, ಹೋರಾಡಬೇಕು, ಕ್ರಾಂತಿ-ಕಿಡಿ ಹಚ್ಚಬೇಕು' ಎಂಬ ವಿಚಾರದ ಲೇಖನ ಬರೆದನು. ಈ ತೆರನಾದ ವಿಚಾರ ಕ್ರಾಂತಿಯಿಂದ ರಶಿಯಾದ ರಾಜ ಜಾರನ ಕಿವಿ ತೆರೆದವು. ಅವನು ಪೊಲೀಸರಿಗೆ ಗೋರ್ಕಿಯ ಮೇಲೆ ಕಣ್ಣಿಡಲು ಆದೇಶಿಸಿದನು. ಗೋರ್ಕಿ ರಾಜ್ಯಕ್ಕೆ ಅಪಚಾರ ಎಸಗಿದ್ದಾನೆ ಎಂದು ಅವನನ್ನು ಸೆರೆ ಹಿಡಿದು ಜೇಲಿಗೆ ಕಳಿಸಿದರು. ಜೇಲಿನಲ್ಲಿ ಅವನ ದೇಹಸ್ಥಿತಿ ಹದಗೆಟ್ಟಿತು. ಆಗ ರಶಿಯಾದ ಹಿರಿಯ ಲೇಖಕರೆಲ್ಲ ಒಟ್ಟುಗೂಡಿ ವಿರೋಧ ವ್ಯಕ್ತಪಡಿಸುತ್ತ ಜಾರನಲ್ಲಿ ವಿನಂತಿಸಿ ಜೇಲಿನಿಂದ ಮುಕ್ತಗೊಳಿಸಿದರು.

ಆರೋಗ್ಯ ಸುಧಾರಿಸಿಕೊಳ್ಳಲು ರಶಿಯಾವನ್ನು ತ್ಯಜಿಸಿ ಇಟಲಿಯ ಮಾರ್ಗವಾಗಿ ಸಂಯುಕ್ತ ಸಂಸ್ಥಾನಕ್ಕೆ ಬಂದನು. ಅಲ್ಲಿದ್ದುಕೊಂಡು ಬಡತನದಲ್ಲಿ ಹುಟ್ಟಿ, ಬಡತನದಲ್ಲಿ ಬೆಳೆದು ಬಡತನ ಜೀವನ ಸಾಗಿಸುತ್ತ ಅನೇಕ ಕೃತಿ ರಚಿಸಿದ. ಅವನ ಸಾಹಿತ್ಯದಲ್ಲಿ ಸಂಘರ್ಷದ, ಬಂಡಾಯದ ಒಲವು ಇದ್ದರೂ ಜೀವನ ಮೌಲ್ಯ ಎತ್ತಿಹಿಡಿಯುವ ವಿಷಯ ನಿರೂಪಣೆ ಇದ್ದಿತು. ಅವನ 'ಮದರ್' ಕಾದಂಬರಿ ಜಗತ್ಪಸಿದ್ಧವಾಯಿತು. ಇದನ್ನೇ ದಿ. ನಿರಂಜನರು 'ತಾಯಿ' ಹೆಸರಿನಿಂದ ಅನುವಾದ ಮಾಡಿದ್ದಾರೆ. ಇದರಲ್ಲಿ ಒಬ್ಬ ಕೂಲಿಯವನ ಮುದಿ ತಾಯಿಯ, ಕಾರ್ಮಿಕರ ಮಾರ್ಮಿಕ ಕಥೆಯಿದೆ.

ಕೆಲವು ದಿನಗಳಲ್ಲಿ ರಶಿಯಾದ ಜನರು ಜಾರನನ್ನು ಸಿಂಹಾಸನದಿಂದ ತಳ್ಳಿಹಾಕಿದರು. ಆಗ ಗೋರ್ಕಿ ಪಿಟ್ಸ್‌ಬರ್ಗ್ ಮೂಲಕ ಲೆನಿನ್‌ಗ್ರಾಡ್ ತಲುಪಿದ. ರಶಿಯಾದ ಜನತೆ ಆದರದ ಸನ್ಮಾನ ಮಾಡಿದರು. ನಂತರ ರಶಿಯಾದಲ್ಲೇ ಇದ್ದು ಅನೇಕ ಕೃತಿ ರಚಿಸಿದ. ಜೀವನವನ್ನೆಲ್ಲ ಬಡತನ-ಹೋರಾಟದಲ್ಲೇ ಕಳೆದುದರಿಂದ ಅವನ ಕೃತಿಗಳಲ್ಲಿ ಬಡವರು, ಕೂಲಿಕಾರರು, ಮಕ್ಕಳು, ಮುದುಕರು ಮೂಲ ವಸ್ತುವಾಗಿದ್ದಾರೆ. **ತಾಯಿ, ನನ್ನ ಬಾಲ್ಯ, ಸಂಸಾರ, ನನ್ನ ವಿಶ್ವವಿದ್ಯಾಲಯ** ಇತ್ಯಾದಿ ಅವರ ಅಮರ ಕೃತಿಗಳು. ಇವೆಲ್ಲ ಹೆಚ್ಚಾಗಿ ವಿಶ್ವದ ಎಲ್ಲ ಭಾಷೆಗಳಲ್ಲೂ ಅನುವಾದಗೊಂಡಿವೆ.

ಬಹಳ ಕಾಲ ಅಂಟಿದ ಅನಾರೋಗ್ಯದಿಂದ ೯ ಜೂನ್ ೧೯೩೬ರಲ್ಲಿ ಗೋರ್ಕಿ ಕಾಲವಶವಾದರು.

– ಸಿಸು' ಸಂಗಮೇಶ
'ಬಾಲಭಾರತಿ', ಮುಖ್ಯರಸ್ತೆ, ಕವಳಿಗೇಟ ಹತ್ತಿರ, ವಿಜಾಪುರ-೫೮೬ ೧೦೧

## ಒಳ್ಳೆಯ ಓದು

### ಮನವಿಲ್ಲದವರ ಮಧ್ಯೆ (ಆತ್ಮ ಕಥನ)

*ಕೆ. ಗೋವಿಂದರಾಜು*

**ಪುಟ : ೪೧೬** ಬೆಲೆ : ರೂ. ೨೫೦

**ಅಭಿರುಚಿ ಪ್ರಕಾಶನ**, ೨ನೇ ಮಹಡಿ, ಕರಾರಸಾಸಂ ಕಟ್ಟಡ, ಕೆ. ಆರ್. ವೃತ್ತ, ಮೈಸೂರು-೫೭೦ ೦೦೧

*ಈ ಆತ್ಮಕಥನ ಒಂದು ಸಂಸಾರದ ಸಂಪೂರ್ಣ ದುರಂತ ಬದುಕಿನ ಪಯಣ. ಬಿದ್ದೆತ್ತಿನ ಮೇಲೆ ತಲೆಗೊಂದು ಕಲ್ಲಿನಂತೆ ಎಲ್ಲರೂ ಹೊಡೆದು ನೋಯಿಸುವವರೇ ! ಪತ್ನಿಯ ಸಾವಿಗೆ ಕಾರಣನೆಂಬ ಹಣೆಪಟ್ಟಿಯೊಡನೆ ತಾಯಿ ತಂದೆಯರೊಂದಿಗೆ ಅಪರಾಧಿ ಸ್ಥಾನ ! ಪೊಲೀಸ್-ಲಾಕಪ್-ಜೈಲುಗಳೆಂಬ ಭೂಲೋಕದ ನರಕ ವಾಸ !! ಕೊನೆಗೆ ಬಿಡುಗಡೆ. ಒಬ್ಬ ನಿರಪರಾಧಿಯ ಈ ನಿರೂಪಣೆ ನಿಜವನ್ನು ಹುಡುಕುವಲ್ಲಿ ವಿಳಂಬವಾಗುವ ನಮ್ಮ ಅಪರಾಧ ತನಿಖಾ ವೈಖರಿಯತ್ತ ನಮ್ಮ ಗಮನ ಸೆಳೆಯುತ್ತದೆ. ಬದುಕಿನ ಬರ್ಬರತೆ-ಹಿಂಸೆಯಿಂದ ಕಂಗೆಟ್ಟ ವ್ಯಕ್ತಿ ಇಲ್ಲಿ ಗೋಚರಿಸುತ್ತಾನೆ.*

### ಚದುರಂಗರ ಸಮಗ್ರ ನಾಟಕಗಳು

*ಚದುರಂಗ*

**ಪುಟ : ೨೫೦** ಬೆಲೆ : ರೂ. ೨೦೦

**ಅಭಿರುಚಿ ಪ್ರಕಾಶನ**, ನಂ.೪, ಎರಡನೆಯ ಅಂತಸ್ತು ಕೆ.ಎಸ್.ಆರ್.ಟಿ.ಸಿ. ಕಟ್ಟಡ, ಕೆ. ಆರ್. ವೃತ್ತ, ಮೈಸೂರು-೧

*ಪ್ರಗತಿಶೀಲ-ನವ್ಯ-ಕ್ರಾಂತಿಕಾರ-ಸಾಂಪ್ರದಾಯಿಕ ಯಾವುದೇ ನೆಲೆಯಲ್ಲಿಯೂ ತಮ್ಮ ಸಾಹಿತ್ಯಕ್ಕೆ ಬೇಕಾದುದನ್ನು ಆವೆಲ್ಲ ಪಂಥಗಳಿಂದಲೂ ಪಡೆದು ಅಗ್ರಪಂಕ್ತಿಯಲ್ಲಿ ಎತ್ತರವಾಗಿ ನಿಲ್ಲಬಲ್ಲಂಥ ಕೃತಿ ರಚನೆ ಮಾಡಿದ ಸಾಹಸಿ ಶ್ರೀ ಚದುರಂಗರು. ಅವರ ನಾಲ್ಕೂ ನಾಟಕಗಳ ಸಮಗ್ರ ಸಂಗ್ರಹವಿದು. ಅಸಹಜತೆಯಿಂದ ಸಹಜತೆಗೆ ಜಿಗಿಯುವ, ಭೂತ-ಭವಿಷ್ಯತ್‌ಗಳಿಗಿಂತ ವರ್ತಮಾನಕ್ಕೇ ಹೆಚ್ಚಿನ ಪ್ರಾಧಾನ್ಯತೆ ನೀಡುವ, ಅಸಾಮಾನ್ಯ ಮಾನವ ಸ್ವಭಾವಗಳನ್ನು ಪರಿಚಯಿಸುವ ಅವರ ನಾಟಕಗಳ ಮೋಡಿ ಅದ್ಭುತವಾಗಿದೆ.*

### ಬೆಂಕಿಯೊಳಗಣ ಕರ್ಪೂರ

*ಡಿ. ಪಾಲಾಕ್ಷಯ್ಯ*

**ಪುಟ : ೧೧೨** ಬೆಲೆ : ರೂ. ೭೦

**ನೀಲಾ ಪ್ರಕಾಶನ**, ನಂ. ೧೧, ಎರಡನೇ ಮೇನ್, ಮೀನಾಕ್ಷಿ ನಗರ, ಕಾಮಾಕ್ಷಿಪಾಳ್ಯ, ಬೆಂಗಳೂರು-೫೬೦ ೦೭೯

*ಅಪರಾಧಗಳನ್ನು ಪತ್ತೆ ಹಚ್ಚುವ ದಕ್ಷ ಪೊಲೀಸ್ ಅಧಿಕಾರಿಗೆ ಮೂರನೆಯ ಕಣ್ಣೊಂದು ಸದಾ ಜಾಗೃತವಾಗಿರಬೇಕಾಗುತ್ತದೆ. ಅವರು ಹೆಜ್ಜೆ ಇಟ್ಟಲ್ಲೆಲ್ಲ ಮೈನವಿರೇಳಿಸುವ ರೋಚಕ ಕಥೆಗಳು ಅವರನ್ನು ಹಿಂಬಾಲಿಸುತ್ತವೆ. ಸಮಾಜದ ಅವನತಿಯನ್ನು ವಿಷಾದದಿಂದ ನಿರೂಪಿಸುವ ಇಲ್ಲಿನ ಕಥೆಗಳಿಗೆ ಪೊಲೀಸರ ಕಾರ್ಯವ್ಯಾಪ್ತಿಯ ಅನುಭವಗಳು ಸಾಕಷ್ಟು ಸರಕನ್ನು ಒದಗಿಸಿವೆ. ಎಳೆಯ ಪೀಳಿಗೆಗಳು ಅಪರಾಧ ಜಗತ್ತಿಗಿಳಿಯಲು ಸಮಾಜಮುಖೀ ಪ್ರೇರಣೆಯೇನೆಂದು ಚಿಂತಿಸಿದ ಕಥೆಗಳು.*

### ವಾಸ್ತವದ ಕನವರಿಕೆ (ಕತೆಗಳು)

*ಡಿ. ಬಿ. ರಜಿಯಾ*

**ಪುಟ : ೬೪** ಬೆಲೆ : ರೂ. ೩೦

**ಲೋಹಿಯಾ ಪ್ರಕಾಶನ**, ಕ್ಷಿತಿಜ, ಕಪ್ಪಗಲ್ಲುರಸ್ತೆ, ಬಳ್ಳಾರಿ - ೫೮೩೧೦೩

*ಇಲ್ಲಿನ ಕಥಾಪಾತ್ರಗಳು ಜಾತಿಮತದ ಕರಿ ನೆರಳಿನಿಂದ ಸಂಪೂರ್ಣ ಮುಕ್ತವಾಗಿದ್ದು ಮಾನವರೆಲ್ಲರ ಒಟ್ಟು ಸಮಸ್ಯೆಗಳನ್ನು ಒಂದಾಗಿ ತಿಳಿಯಲೆತ್ನಿಸುತ್ತವೆ. ಕಾಲ್ಪನಿಕವಲ್ಲದ ನಾವು ನೀವು ಪ್ರಸ್ತುತದಲ್ಲಿ ಎದುರಿಸುವಂತಹ ವಾಸ್ತವವೊಂದನ್ನು ಸೋದರಿ ರಜಿಯಾ ತಮ್ಮೆಲ್ಲ ಕಥೆಗಳಲ್ಲಿ ಯಶಸ್ವಿಯಾಗಿ ಬಿಂಬಿಸಿದ್ದಾರೆ. ಸೌಹಾರ್ದ-ನಿರ್ಮಲ ವಾತಾವರಣ ಇರುವ ಕುಟುಂಬಗಳಲ್ಲಿ ಸಮಸ್ಯೆಗಳಿಗೆ ತನ್ಮೂಲಕ ಸಂಘರ್ಷಗಳಿಗೆ ಜಾಗವಿಲ್ಲದಿರುವುದನ್ನು ಮನಗಾಣಿಸಿದ್ದಾರೆ.*

### ನನ್ನನ್ನು ನಾನೇ ಕಂಡೆ

*ಅ. ನ. ಕೃ.*

**ಪುಟ : ೮೦** ಬೆಲೆ : ರೂ. ೩೦

**ಕುಸುಮಾ ಪ್ರಕಾಶನ**, ೭೪/ಎ, ೧೫ನೇ ಮುಖ್ಯರಸ್ತೆ, ಶ್ರೀನಿವಾಸನಗರ ೨ನೇ ಹಂತ, ಬೆಂಗಳೂರು-೫೬೦ ೦೫೦

*ಅ. ನ. ಕೃಷ್ಣರಾಯರದು ೧೯೩೦ರ ದಶಕದಿಂದೀಚೆಗಿನ ಕನ್ನಡ ಸಾಹಿತ್ಯದಲ್ಲಿ ಬಹು ದೊಡ್ಡ ಹೆಸರು. ಅಂದಿನ ಅವರ ಸಾಹಿತ್ಯಕ್ಕೆ ಮಡಿವಂತರ ಕಟು ವಿಮರ್ಶೆಗಳು ಬರುತ್ತಿದ್ದರೂ ಅವರ ವಿಚಾರಗಳು ಸಮಾಜಕ್ಕೆ ಆವರಿಸಿದ್ದ ಮೌಢ್ಯಕ್ಕೆ ಮೂಲಿಕೆಗಳಂತಿದ್ದುವು. ಕೋಮುವಾದ-ನಿರುದ್ಯೋಗ-ಭಾಷಾ ಸಮಸ್ಯೆಗಳನ್ನು ಐವತ್ತು ವರ್ಷ ಹಿಂದೆ ಚಿಗುರಿನಲ್ಲೇ ಗುರುತಿಸಿದ ಮೇಧಾವಿ ಅವರು. ಸ್ವಯಂ-ಸಂದರ್ಶನದ ತಂತ್ರಗಾರಿಕೆಯಿಂದ ಮೈತಾಳಿದ ಎರಡು ಭಾವನೆಗಳು ಸ್ವ-ವಿಮರ್ಶೆಯ ಪರಸ್ಪರ ಸಂಭಾಷಣೆ ನಡೆಸಿವೆ.*

### ಹಿಂದೂ ಮುಸ್ಲಿಂ ಮತ್ತು ಇತರ ಕತೆಗಳು

*ಪಾ. ವೆಂ. ಆಚಾರ್ಯ*

**ಪುಟ : ೧೦೦** ಬೆಲೆ : ರೂ. ೪೨

**ಸುಮಂತ ಪ್ರಕಾಶನ**, ೧-೧೮೩, ಉಪ್ಪಿನಕೋಟೆ, ಬ್ರಹ್ಮಾವರ-೫೭೬ ೨೧೩

*ಕಸ್ತೂರಿ ಮಾಸಪತ್ರಿಕೆ ಮೂಲಕ ಒಂದು ಹೊಸ ವಿಚಾರವಂತಿಕೆಯನ್ನು ಪ್ರಾರಂಭಿಸಿದ ಲಾಂಗೂಲಾಚಾರ್ಯ, ಪಾ. ವೆಂ. ಅವರನ್ನು ಸಣ್ಣ ಕತೆಗಳ ಮೂಲಕ ಮತ್ತೆ ಭೇಟಿಯಾಗುವ ಅವಕಾಶ. ನಮ್ಮನ್ನು ಕೆಲ ದಶಕಗಳ ಹಿಂದಕ್ಕೆ ಕರೆದೊಯ್ಯುವ ಇಲ್ಲಿನ ಕಥೆಗಳನ್ನು ಅಂದಿನ ಪರಿಸರದೊಂದಿಗೆ ಅರ್ಥೈಸಿದಾಗ ಅವು ತಮ್ಮ ನೈಜ ಸಂದೇಶಗಳನ್ನು ಬಿಟ್ಟುಕೊಡುತ್ತವೆ. ಬಹುದೊಡ್ಡ ಮೊತ್ತದ - ಮೌಲ್ಯದ ಸಾಹಿತ್ಯ ಅವರಿಂದ ರಚಿತವಾಗಿದ್ದು ಅದರ ಅಲೆಗಳು ಇತ್ತೀಚಿನ ತರಂಗ ಪತ್ರಿಕೆಯವರೆಗೂ ಬಂದು ತಲುಪಿದೆ.*

### ಆಯ್ದ ಲಲಿತ ಪ್ರಬಂಧಗಳು

*ಪ್ರೊ॥ ವೀರೇಂದ್ರ ಸಿಂಪಿ*

**ಪುಟ : ೧೪೮** ಬೆಲೆ : ರೂ. ೪೦

**ಕನ್ನಡ ಸಾಹಿತ್ಯ ಪರಿಷತ್ತು**, ಪಂಪ ಮಹಾಕವಿ ರಸ್ತೆ, ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮

*ಪ್ರಬಂಧಗಳ ರಚನಾ ಕೌಶಲ್ಯ ಎಲ್ಲರಿಗೂ ನಿಲುಕದು. ಸರಳವಾಗಿ ಅಭಿವ್ಯಕ್ತಿಸಲು ತಿಳಿದ ವ್ಯಕ್ತಿಗಳಿಗೆ ಅದು ಒಂದು ಹೂವಿನ ಸರವೆತ್ತಿದಂತೆ ! ಅದರಲ್ಲೂ ಬಗೆ ಬಗೆಯ ಹೂಗಳ ಮಾಲೆ. ಹಾಗಾಗಿ ವಸ್ತುವಿನ ಆಯ್ಕೆಯಲ್ಲಿ ವೈವಿಧ್ಯತೆಯಿದ್ದು ತುಂಬಾ ಜಾಗರೂಕತೆಯಿದೆ. ಆಪ್ತವಾಗಿ ಮಾತನಾಡುವ ವೀರೇಂದ್ರ ಸಿಂಪಿ ಅವರ ೩೮ ಚಿಕ್ಕ-ಚೊಕ್ಕ ಲಲಿತ ಪ್ರಬಂಧಗಳ ಈ ಸಂಕಲನ ನಮಗೆ ತುಂಬ ಮೆಚ್ಚುಗೆಯಾಗುವುದರಲ್ಲಿ ಸಂಶಯವಿಲ್ಲ. ಅಲ್ಲಲ್ಲಿ ತಿಳಿ ಹಾಸ್ಯದ ಲೇಪವಿದೆ. ಅನುಭವಗಳ-ಸನ್ನಿವೇಶಗಳ ವರ್ಣನೆಯಿದೆ.*

### ಗಣೆಯ ನಾದ (ಕವನ ಸಂಕಲನ)

*ಶಂಕರ ಕಟಗಿ*

**ಪುಟ : ೯೪** ಬೆಲೆ : ರೂ. ೭೫

**ಆನಂದಕಂದ ಗ್ರಂಥಮಾಲೆ**, ಮಲ್ಲಾಡಿಹಳ್ಳಿ-೫೭೭ ೫೩೧, ಚಿತ್ರದುರ್ಗ ಜಿಲ್ಲೆ

*ಕವಿ ಶಂಕರ ಕಟಗಿಯವರ ಮೂರನೆಯ ಕವನ ಸಂಕಲನ. ಜಾನಪದೀಯ ಹಿನ್ನೆಲೆಯಿರುವ ಇಲ್ಲಿನ ಕೆಲವು ಪದ್ಯಗಳು ರಾಗ ಸಂಯೋಜನೆಯೊಂದಿಗೆ ಆಕಾಶವಾಣಿ ಹಾಗೂ ಬೆಂಗಳೂರು ದೂರದರ್ಶನದ ಮೂಲಕ ಪ್ರಸಾರಗೊಂಡಿವೆ. ಗಂಭೀರ ಕಾವ್ಯದ ಗುಣಲಕ್ಷಣದಂತೆ ಈ ಕಾವ್ಯದ ಓದು ಕೂಡ ತುಂಬ ತಾಳ್ಮೆಯನ್ನು ನಿರೀಕ್ಷಿಸುತ್ತದೆ. ಹೆಚ್ಚಿನ ಕವಿತೆಗಳು ಉತ್ತರ ಕರ್ನಾಟಕದ ದೇಶೀಯ ಭಾಷೆಯ ಸೊಗಡಿನೊಂದಿಗೆ ಜೀವನಪರ ಅಂಶಗಳನ್ನು ತಿಳಿಸುತ್ತ ಸಾಗಿವೆ. ಒಟ್ಟು ಮೂವತ್ತೇಳು ಕವಿತೆಗಳಿವೆ.*

**- ಇಂದಿರಾಕುಮಾರಿ**

# ನಿರ್ಮಾಣ ಕ್ಷೇತ್ರದಲ್ಲಿ ಹೊಸತು

# ಸ್ವಯಂ ಅಡಕಗೊಳ್ಳುವ ಕಾಂಕ್ರೀಟು

**ಕಾಂ**ಕ್ರೀಟಿನ ಕೆಲಸವಾಗುತ್ತಿರುವ ನಿವೇಶನಕ್ಕೆ ಹೋದರೆ ನಮ್ಮನ್ನು ಎದುರುಗೊಳ್ಳುವುದು – ಧೂಳು, ಕೆಲಸಗಾರರ ಸದ್ದುಗದ್ದಲ, ಕಾಂಕ್ರೀಟಿನ ಮಿಶ್ರಕದ ಇಂಜನ್ನಿನ ಪಟಪಟ ಸದ್ದು, ಮಿಶ್ರಕದ ಡ್ರಮ್ಮಿನ ಟಿಲಟಿಲ ಸದ್ದು, ಅಲ್ಲದೆ ಆಗಾಗ ಕೇಳಿಬರುವ ಒಯ್ಯೋೕೕ ಎಂಬ ಸದ್ದು. ಅಕ್ಕಪಕ್ಕದ ನಿವಾಸಿಗಳಿಗೆ, ಈ ಕಿರಿಕಿರಿ ಸುಮಾರು ಆರೇಳು ಗಂಟೆಗಳ ಕಾಲ ತಪ್ಪಿದ್ದಲ್ಲ.

ಧೂಳು, ಕೆಲಸಗಾರರ ಸದ್ದುಗದ್ದಲ, ಮಿಶ್ರಕದ ಸದ್ದು ಇವುಗಳಿಂದ ಬಹಳಮಟ್ಟಿಗೆ ಮುಕ್ತಿ ಪಡೆಯಲು ಈಗ ಸಿದ್ಧ ಕಾಂಕ್ರೀಟ್ (ರೆಡಿ ಮಿಕ್ಸೆಡ್ ಕಾಂಕ್ರೀಟ್)ನಿಂದ ಸಾಧ್ಯ ವಾಗಿದೆ. ಇನ್ನು ಒಯ್ಯೋೕೕ ಸದ್ದಿನಿಂದ !

**ಎಂ. ಜಿ. ಶ್ರೀನಿವಾಸನ್**

ಈ ಸದ್ದೇಕೆ ? ಹಸಿಯ ಕಾಂಕ್ರೀಟನ್ನು ಸಮರ್ಪಕವಾಗಿ ಅಡಕಿಸಬೇಕು. ಇದಕ್ಕೆ ಕಂಪಕ ಎಂಬ ಯಂತ್ರವನ್ನು ಬಳಸುವರು. ಇದೇ ವೈಬ್ರೇಟರು. ಇದನ್ನು ಚಾಲಿಸಲು ಪೆಟ್ರೋಲ್ ಇಂಜನ್ನು , ವಿದ್ಯುತ್ ಮೋಟಾರು ಅಥವಾ ಸಂಕುಚಿತ ಗಾಳಿಯನ್ನು ಬಳಸುತ್ತಾರೆ. ಕಂಪಕದ ದಂಡದಲ್ಲಿ ಒಂದು ಅಸಂತುಲಿತ ಬೊಟ್ಟು ಇರುತ್ತದೆ. ಅದು ಕಂಪಕದ ಕವಚಕ್ಕೆ ಬಡಿಯುವುದರಿಂದ ಈ ಶಬ್ದವುಂಟಾಗುತ್ತದೆ.

**ಅಡಕಣೆ**

ಕಾಂಕ್ರೀಟನ್ನು ಏಕೆ ಅಡಕಿಸಬೇಕು ? ಜಲ್ಲಿ , ಮರಳು, ಸಿಮೆಂಟನ್ನು ನೀರಿನೊಂದಿಗೆ ಕಲಸಿದಾಗ ನಮ್ಯವಾದ ಹಸಿಯ ಕಾಂಕ್ರೀಟು ಸಿದ್ಧವಾಗುತ್ತದೆ ಎಂಬುದು ಎಲ್ಲರಿಗೂ ತಿಳಿದಿದೆ. ಈ ಹಸಿಯ ಕಾಂಕ್ರೀಟಿನಲ್ಲಿ ಗಾಳಿಯೂ ಸೇರಿಕೊಂಡಿರುತ್ತದೆ. ಅಚ್ಚಿನೊಳಕ್ಕೆ ಸುರಿದಾಗ ಈ ಗಾಳಿಯಿಂದಾಗಿ ಕಾಂಕ್ರೀಟು ಅಳ್ಳಕವಾಗಿರುತ್ತದೆ.

ಈ ಅಳ್ಳಕವಾದ ಕಾಂಕ್ರೀಟು ಹಾಗೆಯೇ ಬಿರುಸಾಗಿ, ಬಲಿತರೆ, ಟೊಳ್ಳಾದ ಏನೇನೂ ಸಾಮರ್ಥ್ಯವಿಲ್ಲದ ಕಟ್ಟಡವು ಸಿದ್ಧವಾಗುತ್ತದೆ. ಇದು ಅಪಾಯಕಾರಿ.

ಈ ಗಾಳಿಯನ್ನು ಹೊರಕ್ಕೆ ಅಟ್ಟಿದರೆ, ಕಾಂಕ್ರೀಟು ಅಡಕಗೊಂಡು ಸಾಂದ್ರವಾಗುತ್ತದೆ. ಇದರಿಂದ ತೇವ, ಅನಿಲಗಳು ಕಾಂಕ್ರೀಟಿನೊಳಕ್ಕೆ ತೂರಲು ಸಾಧ್ಯವಾಗದೆ, ಉಕ್ಕಿನ ಪ್ರಬಲನಗಳು, ಅಂದರೆ ಸರಳುಗಳು ಕ್ಷಯಿಸದೆ ಕಟ್ಟಡವು ಭದ್ರವಾಗಿದ್ದು ಬಹುಕಾಲ ಬಾಳಿಕೆ ಬರುತ್ತದೆ.



**ಕಂಪಕದಿಂದ ಅಡಕಣೆ**

ಕಂಪಕದಿಂದ ಅಡಕಣೆಯು ಹೇಗೆ ಆಗುತ್ತದೆ ?

ಕಂಪಕವನ್ನು ಚಾಲಿಸಿದಾಗ ಅಸಂತುಲಿತ ಬೊಟ್ಟಿನ ಸುತ್ತುವಿಕೆ ಹಾಗೂ ಬಡಿತದಿಂದ ಕಂಪನವುಂಟಾಗುತ್ತದೆ. ಕಂಪಕವನ್ನು ಆಗ ಕಾಂಕ್ರೀಟಿನೊಳಕ್ಕೆ ಇಳಿಸಿದಾಗ, ಕಾಂಕ್ರೀಟೂ ಕಂಪನಕ್ಕೊಳಗಾಗುತ್ತದೆ. ಇದರ ಪ್ರಭಾವದಿಂದ ಕಾಂಕ್ರೀಟಿನ ಕಣಗಳ ನಡುವಣ ಘರ್ಷಣೆಯು ಕಡಿಮೆಯಾಗುವುದು. ಅಲ್ಲದೆ, ಕಾಂಕ್ರೀಟು ತಾತ್ಕಾಲಿಕವಾಗಿ ದ್ರವೀಯ ಸ್ಥಿತಿಗೆ ಬರುತ್ತದೆ. ಆಗ, ಗುರುತ್ವದ ಪ್ರಭಾವದಿಂದ ಕಾಂಕ್ರೀಟು ಇಳಿಯುತ್ತದೆ. ಗಾಳಿಯು ಗುಳ್ಳೆ ಗುಳ್ಳೆಯಾಗಿ ಹೊರಬರುತ್ತದೆ.

ಸಾಕಷ್ಟು ಅವಧಿ ಕಂಪಕವನ್ನು ಚಾಲಿಸಿದ ನಂತರ ಉತ್ತಮವಾಗಿ ಅಡಕವಾದ, ಸಾಂದ್ರವಾದ ಕಾಂಕ್ರೀಟು ದೊರೆಯುತ್ತದೆ. ಆದರೆ, ಈ ಸದ್ದು! ಈ ಸದ್ದಿಲ್ಲದೆ ಕಂಪಕವಿಲ್ಲದೆ ಕಾಂಕ್ರೀಟನ್ನು ಅಡಕಿಸಲು ಸಾಧ್ಯವಿಲ್ಲವೇ ? ಅದು, ಈಗ ಸಾಧ್ಯವಾಗಿದೆ.

**ಸ್ವಯಂ ಅಡಕಣೆ**

ಕಾಂಕ್ರೀಟು ಅಡಕಗೊಳ್ಳಲು ಗುರುತ್ವವು ಬೇಕೆಂದಾಯಿತು. ಗುರುತ್ವದ ಪ್ರಭಾವದಿಂದ ಅಡಕಗೊಳ್ಳಲು ಕಾಂಕ್ರೀಟು ದ್ರವೀಯವಾಗಿರಬೇಕೆಂದಾಯಿತು.

ದ್ರವೀಯತೆಯು ಅದರ ಸಹಜ ಗುಣವಾಗಿದ್ದು, ಯಂತ್ರದ ಸಹಾಯವಿಲ್ಲದೆ, ಅನ್ಯ ಶಕ್ತಿಯ ಸಹಾಯವಿಲ್ಲದೆ, ಸದ್ದಿಲ್ಲದೆ ಗುರುತ್ವದ ಪ್ರಭಾವದಿಂದ ತಂತಾನೇ ಅಡಕಗೊಳ್ಳುವುದು – ಈ ಹೊಸ, ಸ್ವಯಂ ಅಡಕಗೊಳ್ಳುವ ಕಾಂಕ್ರೀಟು.

ಇದರ ಗುಣಗಳು ಇವು :

– ಅಚ್ಚಿನ ರೂಪಕದ ಮೂಲೆ ಮೂಲೆಗಳಿಗೂ ಸುಲಭವಾಗಿ ಹರಿದು, ಎಲ್ಲ ಸ್ಥಳವನ್ನೂ ಆಕ್ರಮಿಸಿಕೊಳ್ಳುತ್ತದೆ.

– ಪ್ರಬಲನಗಳ ಇಕ್ಕಟ್ಟಾದ ಸಂದುಗಳಲ್ಲಿ ತೂರಿ ಹೋಗಿ, ಕುಹರಗಳುಂಟಾಗದಂತೆ ಅವುಗಳ ಸುತ್ತಲೂ ಆಕ್ರಮಿಸಿಕೊಳ್ಳುತ್ತದೆ.

– ಪೃಥಕ್ಕರಣಗೊಳ್ಳದೆ, ಅಂದರೆ, ಜಲ್ಲಿ , ಗಾರೆಯು ಬೇರ್ಪಡದೆ ಹರಿಯುತ್ತದೆ.

– ಗಾಳಿಯು ಒಳ ಸೇರುವುದಿಲ್ಲ.

ಕಾಂಕ್ರೀಟು ಸುಲಭವಾಗಿ ಹರಿಯಲು, ನಮ್ಮ ಸಾಮಾನ್ಯ ಕಲ್ಪನೆಯಂತೆ, ಹೆಚ್ಚಿಗೆ ನೀರನ್ನು ಬೆರೆಸುವುದಿಲ್ಲ. ಇದಕ್ಕೆ ವಿಶೇಷ ರಾಸಾಯನಿಕ ಸಂಕರಗಳಾದ ನಮ್ಯಕಾರಕಗಳನ್ನು ಬಳಸುವರು. ಹಲವಾರು ಬಗೆಯ ನಮ್ಯಕಾರಕಗಳು ಈಗ ಮಾರುಕಟ್ಟೆಯಲ್ಲಿ ದೊರೆಯುತ್ತವೆ. ಸ್ವಯಂ ಅಡಕಗೊಳ್ಳುವ ಕಾಂಕ್ರೀಟಿಗೆ, ವಿಶಿಷ್ಟವಾದ ಅಕ್ರಿಲಿಕ್ ಪಾಲಿಮರ್‌ಗಳಿಂದ ತಯಾರಿಸಿದ ನಮ್ಯಕಾರಕಗಳನ್ನು ಬಳಸುತ್ತಾರೆ.

ನಾವು ಸರ್ವೇಸಾಮಾನ್ಯವಾಗಿ ಬಳಸುವ ಕಾಂಕ್ರೀಟಿನಲ್ಲಿ ಶೇ. ೬೨ರಷ್ಟು ಸ್ಥೂಲ ಸಮಷ್ಟಿ ಎಂದರೆ, ಜಲ್ಲಿ ಇರುತ್ತದೆ. ಆದರೆ ಈ ಸ್ವಯಂ ಅಡಕಗೊಳ್ಳುವ ಕಾಂಕ್ರೀಟಿನಲ್ಲಿ ಸ್ಥೂಲ ಸಮಷ್ಟಿಯ ಅಂಶವನ್ನು ಶೇ. ೪೦ರವರೆಗೂ ಇಳಿಸುವರು. ಇದಕ್ಕನುಗುಣವಾಗಿ, ಸೂಕ್ಷ್ಮ ಸಮಷ್ಟಿಯ ಅಂಶವನ್ನು ಹೆಚ್ಚಿಸುವರು. ಇದಕ್ಕೆ ಮರುಳಲ್ಲದೆ, ೦.೧೨೫ ಮಿಮಿಗಿಂತಲೂ ಸೂಕ್ಷ್ಮವಾದ ಸುಣ್ಣಕಲ್ಲಿನ ಹುಡಿ, ತೂರು ಬೂದಿ, ಸಿಲಿಕಾ ಫ್ಯೂಂ ಮುಂತಾದವುಗಳನ್ನು ಬೆರೆಸುವರು. ಇದರಿಂದ ಪ್ರಬಲನಗಳ ನಡುವಣ ಇಕ್ಕಟ್ಟು ಪ್ರದೇಶಗಳಲ್ಲೂ ಸುಲಭವಾಗಿ ತೂರಿಕೊಂಡು ಹರಿದುಹೋಗುತ್ತದೆ.

ಇಂತಹ ದ್ರವರೂಪದ ಕಾಂಕ್ರೀಟು ಹರಿದು ಹೋಗುವಾಗ ಪೃಥಕ್ಕರಣದ ಸಾಧ್ಯತೆ ಇರುತ್ತದೆ. ಅಂದರೆ, ಜಲ್ಲಿಯು ಬೇರ್ಪಟ್ಟು ಒಂದೆಡೆ ನಿಂತು, ಗಾರೆಯು ಹರಿದುಹೋಗಬಹುದು. ಇದನ್ನು ನಿವಾರಿಸಲು, ಕಾಂಕ್ರೀಟಿನ ಸ್ನಿಗ್ಧತೆಯನ್ನು ನಿಯಂತ್ರಿಸುವರು. ಇದಕ್ಕಾಗಿ ಸ್ನಿಗ್ಧತಾ ನಿಯಂತ್ರಕ ಸಂಕರಗಳನ್ನು ಬಳಸುವರು. ಇದರ ಪ್ರಭಾವದಿಂದ ನಿಧಾನವಾಗಿ ಎಲ್ಲ ಕಣಗಳನ್ನೂ ಒಳಗೊಂಡು ಹರಿಯುವುದು.

ದೀರ್ಘ ಸಂಶೋಧನೆಯ ನಂತರ ೧೯೮೮ರಲ್ಲಿ ಈ ಕಾಂಕ್ರೀಟನ್ನು ಜಪಾನಿನಲ್ಲಿ ಬೆಳಕಿಗೆ



ತಂದರು. ಈಗ ಎಲ್ಲಾ ಮುಂದುವರಿದ ದೇಶಗಳಲ್ಲೂ ಇದರ ಬಳಕೆಯು ಪ್ರಾರಂಭವಾಗಿದೆ.

**ಅನುಕೂಲಗಳು**

ಸ್ವಯಂ ಅಡಕಗೊಳ್ಳುವ ಕಾಂಕ್ರೀಟಿನ ಅನುಕೂಲಗಳು ಇವು :

೧. ಈಚೆಗೆ ಶಬ್ದಕ್ಕೆ ನಮ್ಮ ಸಹನೆ ಕಡಿಮೆಯಾಗಿದೆ. ಸ್ವಯಂ ಅಡಕಗೊಳ್ಳುವ ಕಾಂಕ್ರೀಟಿನ ಬಳಕೆಯಿಂದ ಕಂಪಕದ ಗದ್ದಲವಿಲ್ಲ. ಇನ್ನು ಅದನ್ನು ಚಾಲಿಸಲು ಬೇಕಾದ ಕುಶಲಕರ್ಮಿಯ ಅಗತ್ಯವಿಲ್ಲ. ಪೆಟ್ರೋಲು, ಡೀಸೆಲ್ ಎಣ್ಣೆ ಹಾಗೂ ವಿದ್ಯುತ್ತಿನ ಬೇಡಿಕೆಯು ಕಡಿಮೆ ಆಯಿತು. ಈ ಯಂತ್ರವನ್ನು ಕೊಳ್ಳುವ ವೆಚ್ಚವೂ, ಅದರ ಪರಿಪಾಲನೆಯ ವೆಚ್ಚವೂ ಉಳಿಯಿತು.

೨. ಸುಲಭವಾಗಿ ಹರಿದು ಎಲ್ಲಾ ಸಂದಿಗೊಂದಿಗಳನ್ನೂ ತುಂಬಿಕೊಳ್ಳುವುದರಿಂದ, ಕುಹರಗಳಿಲ್ಲದೆ ಗಾಳಿಗುಳ್ಳೆಗಳಿಲ್ಲದ, ಪ್ರಬಲನಗಳು ಹೊರಕಾಣದ, ಒಪ್ಪವಾದ ಮೇಲ್ಮೈಯುಳ್ಳ, ಉತ್ತಮ ಗುಣಮಟ್ಟದ ಸಾಂದ್ರ ಕಾಂಕ್ರೀಟಿನ ಅಂಗಗಳೂ, ಕಟ್ಟಡಗಳೂ ಸಿದ್ಧವಾಗುತ್ತವೆ.

೩. ಬಹು ಸಮರ್ಪಕ ಅಡಕಣೆಯಿಂದ ತೇವ ತೂರುವುದಿಲ್ಲ. ಅನಿಲ ತೂರುವುದಿಲ್ಲ. ಇದರಿಂದಾಗಿ ಕಟ್ಟಡದ ಬಾಳಿಕೆಯು ಹೆಚ್ಚುವುದು.

**ಉಪಯೋಗ**

ಸ್ವಯಂ ಅಡಕಗೊಳ್ಳುವ ಕಾಂಕ್ರೀಟು ಸುಲಭವಾಗಿ ಹರಿದು ಇಕ್ಕಟ್ಟಾದ ಸ್ಥಳಗಳನ್ನೆಲ್ಲಾ ಆಕ್ರಮಿಸುವುದರಿಂದ, ಬಹು ತೆಳುವಾದ ಅಂಗಗಳನ್ನೂ, ಉತ್ಪನ್ನಗಳನ್ನೂ ನಂಬಿಕಾರ್ಹವಾಗಿ ತಯಾರಿಸಿ ಬಳಸಲು ಸಾಧ್ಯವಾಗಿದೆ. ಉದಾಹರಣೆಗೆ, ಭಾವಣಿಯ ಪೂರ್ವನಿರ್ಮಿತ ತೆಳುವಾದ ತೀರುಗಳು, ತೆಳು ಗೋಡೆಯ ನೀರಿನ ತೊಟ್ಟಿಗಳು, ತೆಳು ಪೈಪುಗಳು.

ಹೆಚ್ಚು ಭಾರ ಹೊರಬೇಕಾದ ತೊಲೆಗಳಲ್ಲಿ ಅಪಾರವಾದ ಪ್ರಮಾಣದ ಪ್ರಬಲನಗಳಿರುತ್ತವೆ. ಈ ತೊಲೆಗಳ ಅಚ್ಚುಗಳಲ್ಲಿ ಕಾಂಕ್ರೀಟನ್ನು ತುಂಬುವುದೇ ಕಷ್ಟ. ಇಂತಹ ಕೆಲಸಗಳಿಗೆ ಸ್ವಯಂ ಅಡಕಗೊಳ್ಳುವ ಕಾಂಕ್ರೀಟು ಒಂದು ವರವಾಗಿದೆ.

ನೀರಿನ ಮೇಲ್ತೊಟ್ಟಿಗಳನ್ನೂ ಮೇಲ್ಗಾಲುವೆಗಳನ್ನೂ ನಿರ್ಮಿಸಿದ ತರುಣದಲ್ಲಿಯೇ, ಅವುಗಳ ಮೂಲಕ ನೀರು ಸೋರುವುದು ಸರ್ವೇಸಾಮಾನ್ಯವಾಗಿದೆ. ಈ ಅಸಹ್ಯ ಪರಿಸ್ಥಿತಿಯು ಸಿವಿಲ್ ಇಂಜಿನಿಯರಿಂಗಿಗೇ ಕೆಟ್ಟ ಹೆಸರು ತಂದಿದೆ. ಸ್ವಯಂ ಅಡಕಗೊಳ್ಳುವ ಕಾಂಕ್ರೀಟನ್ನು ಬಳಸಿ, ನಿರ್ಮಾಣ ಸಂಧಿಗಳಿಲ್ಲದೇ ಒಂದೇ ಬಾರಿಗೆ ನಿರ್ಮಿಸುವುದರಿಂದ, ಈ ನೀರು ಸೋರುವಿಕೆ ಎಂಬ ಕೆಟ್ಟ ಪರಿಸ್ಥಿತಿಯಿಂದ ವಿಮೋಚನೆ ಪಡೆಯಬಹುದಾಗಿದೆ.

ಸಾಮಾನ್ಯ ಕಾಂಕ್ರೀಟಿನ ಸಹಜ ಸ್ವಭಾವದಿಂದಾಗಿ, ಕಂಪಕವನ್ನು ಬಳಸಿದಾಗಲೂ, ಸರಿಯಾಗಿ ಮುತುವರ್ಜಿ ವಹಿಸದಿದ್ದರೆ, ಕುಹರಗಳುಂಟಾಗುವುದೂ, ಪ್ರಬಲನಗಳು ಹೊರಕಾಣಿಸಿಕೊಳ್ಳುವುದೂ ಸರ್ವೇಸಾಮಾನ್ಯವಾಗಿದೆ. ಇದರಿಂದ ಅಪಾರ ಹಣ ವ್ಯಯ ಮಾಡಿ ನಿರ್ಮಿಸಿದ ಕಟ್ಟಡಗಳ ರಿಪೇರಿಗೆ ಪುನಃ ಅಪಾರ ಹಣ ವೆಚ್ಚ ಮಾಡಬೇಕಾಗಿ ಬಂದಿದೆ. ರಿಪೇರಿಯನ್ನೂ ಪುನಃ ರಿಪೇರಿ ಮಾಡ ಬೇಕಾಗಿಬಂದಿದೆ. ಕಡಲ ಪರಿಸರಗಳಲ್ಲಿ ಹಾಗೂ ಕ್ಷಯ ಕಾರಿ ರಾಸಾಯನಿಕ ಪರಿಸರಗಳಲ್ಲಂತೂ ಕಟ್ಟಡಗಳು ಕೆಲವೇ ವರ್ಷಗಳಲ್ಲಿ ನಿರುಪಯೋಗಿ ಆಗಲು ಪ್ರಾರಂಭವಾಗಿವೆ. ಈ ಉಪದ್ರವಕ್ಕೆ ಸ್ವಯಂ ಅಡಕಗೊಳ್ಳುವ ಕಾಂಕ್ರೀಟೊಂದು ಸಿದ್ಧ ಪರಿಹಾರ.

**ಭವಿಷ್ಯ**

ಅಂದ ಮಾತ್ರಕ್ಕೇ, ಇದು ವಿಶೇಷ ಸನ್ನಿವೇಶಗಳಲ್ಲಿ ಮಾತ್ರ ಉಪಯೋಗಕ್ಕೆ ಬರುತ್ತದೆ, ಎಂದಲ್ಲ. ಸಾಮಾನ್ಯ ಕಟ್ಟಡಗಳ ನಿರ್ಮಾಣಕ್ಕೂ ಬಳಸಬಹುದು. ಇದರ ಬಗ್ಗೆ ಇನ್ನೂ ಸಂಶೋಧನೆಗಳಾಗಿ ಪ್ರಯೋಗಗಳಾಗಬೇಕಾಗಿದೆ. ಜನಸಾಮಾನ್ಯರಿಗೂ ಎಟುಕುವ ದಿವಸ ಬಹಳ ದೂರವೇನಿಲ್ಲ.

ಸಿದ್ಧ ಕಾಂಕ್ರೀಟು ಈಗ ನಮ್ಮ ದೇಶದಲ್ಲಿ ಜನಸಾಮಾನ್ಯರಿಂದಲೂ ಮನ್ನಣೆ ಪಡೆದಿದೆ. ಸಣ್ಣಮನೆಗಳ ನಿರ್ಮಾಣಕ್ಕೂ ಬಳಸಲಾಗುತ್ತಿದೆ. ಸ್ವಯಂ ಅಡಕಗೊಳ್ಳುವ ಕಾಂಕ್ರೀಟು ಸಿದ್ಧ ಕಾಂಕ್ರೀಟಾಗಿ ದೊರೆಯಲು ಪ್ರಾರಂಭವಾದಾಗ, ಸಾರ್ವತ್ರಿಕ ನಿರ್ಮಾಣ ಕ್ಷೇತ್ರದಲ್ಲಿ ಕ್ರಾಂತಿಯುಂಟಾಗುತ್ತದೆ. ಈ ಕ್ರಾಂತಿಯ ನಾಂದಿಯ ಕೀರ್ತಿಯು ಭಾರತಕ್ಕೆ ಬರುವಂತೆ ಏಕೆ ಪ್ರಯತ್ನಿಸಬಾರದು ! ಕಾಂಕ್ರೀಟಿನ ಸಾಮಾನ್ಯ ಬಳಕೆದಾರರೂ, ಕಾಂಕ್ರೀಟಿನ ತಂತ್ರಜ್ಞರೂ ಕೈ ಜೋಡಿಸಬೇಕಷ್ಟೆ !

ಎಂ. ಜಿ. ಶ್ರೀನಿವಾಸನ್
೨೫೪, ೫ನೇ ಮೇನ್, ೧೪ನೇ ಕ್ರಾಸ್, ಜಯನಗರ
ಮೈಸೂರು-೫೭೦ ೦೧೪

# ಧ್ಯಾನ

ನನಗೆ ಅವನೊಂದಿಗೆ
ಮಾತು ಕತೆ ಬೇಡ
ಕನಸು ಬೇಡ
ನಿದ್ದೆ ಬೇಡವೇ ಬೇಡ !

ನನಗೆ ಅವನೊಂದಿಗೆ –
ತುಂಬು ಮೌನ ಬೇಕು
ಪೂರ್ಣ ಮಿಲನ ಬೇಕು
ಅದಕ್ಕೆ –
ಅವನೊಬ್ಬನೆ ಇರುವ ಏಕಾಂತ ಬೇಕು
ನಾನು ಅವನಿಗಾಗಿ ಕಾಯಬೇಕು
ಅವನೆನಗೆ ಕಾಯಬೇಡ ಎನಬೇಕು
ನಾನು ಅವನ ಮುಂದೆ ಕುಸಿದಿರಬೇಕು
ನನ್ನದೆಲ್ಲವೂ ಕರಗಿ ಕರಗಿ
ಅವನ ಪಾದವ ತೊಳೆಯಬೇಕು
ನಾನು ಅಳಿದು ಅಳಿದು
ಅವನೊಬ್ಬನೇ ಉಳಿಯಬೇಕು
ಅವನೊಳಗೆ ನಾನು ಬೆಳೆದರೆ ಸಾಕು !



ವೀಣಾ ಬನ್ನಂಜೆ
'ಸುಮ್ಮನೆ', ಕಲ್ಲಹಳ್ಳಿ ಅಂಚೆ, ಜಮಖಂಡಿ, ಬಾಗಲಕೋಟೆ-೫೮೭೩೦೧

# ಆಸ್ಟ್ರೇಲಿಯಾದ ವಿಶ್ವಪರಂಪರೆಯ ಕೇಂದ್ರಗಳು

ಹೇಮಲತಾ ಮಹಿಷಿ

೨೦೦೧ರ ಏಪ್ರಿಲ್ ೧೬ರಂದು ರಾತ್ರಿ ೧೦.೩೫ಕ್ಕೆ ಹೊರಟ ಕ್ವಾಂಟಾಸ್ ವಿಮಾನಯಾನ ಸಂಸ್ಥೆಯ ಬೋಯಿಂಗ್ ವಿಮಾನದಲ್ಲಿ ಕುಳಿತು, ಸಿಂಗಪುರದ ವೈಭವ ಯುಕ್ತ ಚಾಂಗಿ ವಿಮಾನ ನಿಲ್ದಾಣದಿಂದ ಮೇಲೆ ಹಾರಿ, ಪೂರ್ವದ ಆಸ್ಟ್ರೇಲಿಯಾದತ್ತ ಹೊರಟಿದ್ದೆವು – ನಾನು ಹಾಗೂ ನನ್ನ ಮಗ ರಣಜಿತ್. ಆಸ್ಟ್ರೇಲಿಯಾದಲ್ಲಿ ನಮ್ಮ ಮೊದಲ ಇಳಿದಾಣ ಆ ಖಂಡದ ಉತ್ತರ ಪೂರ್ವದ ಮೇಲ್ತುದಿಯಲ್ಲಿರುವ ಕೇರನ್ಸ್ ಆಗಿತ್ತು. ರಾತ್ರಿ ಇಡೀ ಹಾರಿದ ವಿಮಾನ ಇಳಿಯುವ ಸೂಚನೆ ತೋರಿದಾಗ ಕೇರನ್ಸ್ ಬಂದೇಬಿಟ್ಟಿತೆಂದು ತಿಳಿದುಕೊಂಡಿದ್ದೆವು. ಆದರೆ, ನಾವು ಇಳಿದಿದ್ದು ಆಸ್ಟ್ರೇಲಿಯಾದ ಉತ್ತರ ಪಶ್ಚಿಮ ಮೂಲೆಯಲ್ಲಿರುವ ಡಾರ್ವಿನ್ ವಿಮಾನ ನಿಲ್ದಾಣದಲ್ಲಿ. ವಿಮಾನವನ್ನು ಶುಚಿಗೊಳಿಸಲು, ಇಂಧನ ತುಂಬಲು ಎಲ್ಲಾ ತೂಕಡಿಸುತ್ತಿದ್ದ ಪ್ರಯಾಣಿಕರನ್ನು ಇಳಿಸಲಾಯಿತು. ಕೆಲವು ಪ್ರಯಾಣಿಕರು ಅಲ್ಲಿಯೇ ಇಳಿಯುವವರೂ ಇದ್ದರು. ಸುಮಾರು ೪೦-೪೫ ನಿಮಿಷ ನಮ್ಮನ್ನು ಅಲ್ಲಿಯ ವಿಮಾನ ನಿಲ್ದಾಣದ ಹಾಲ್ ಒಂದರಲ್ಲಿ ಎಲ್ಲಿಯೂ ಹೋಗದಂತೆ ಭದ್ರವಾಗಿ ಕೂಡಿಸಿದ್ದರು, ಎಂದರೆ, ಕೂಡಿಹಾಕಿದ್ದರು. ಗಡಿಯಾರ ನೋಡಿಕೊಂಡರೆ ೨-೩೦ ಗಂಟೆಯಾಗಿತ್ತು. ವಿಮಾನ ಸಿದ್ಧವಾದ ನಂತರ ಪುನಃ ನಮ್ಮ-ನಮ್ಮ ಆಸನಗಳಲ್ಲಿ ಕುಳಿತು ಬೆಲ್ಟ್ ಕಟ್ಟಿಕೊಂಡ ಮೇಲೆ ವಿಮಾನ ಮತ್ತಷ್ಟು ಪೂರ್ವಕ್ಕೆ ಹಾರಿತು. ನಾವು ಆಸ್ಟ್ರೇಲಿಯಾ ಭೂಖಂಡದ ಮೇಲೆಯೇ ಹಾರುತ್ತಿದ್ದರೂ ಕತ್ತಲಿದ್ದುದರಿಂದ ಕೆಳಗೆ ಏನೂ ಕಾಣುತ್ತಿರಲಿಲ್ಲ. ಬೇರೆ ಕೆಲಸವಿಲ್ಲದೇ ಪುನಃ ತೂಕಡಿಸತೊಡಗಿದೆವು.

ಮೊದಲೇ ತಿಳಿಸಿದ ಸಮಯಕ್ಕೆ ಸರಿಯಾಗಿ ಬೆಳಿಗ್ಗೆ ೮-೩೫ ಗಂಟೆಗೆ ನಮ್ಮ ವಿಮಾನ ಕೇರನ್ಸ್ ವಿಮಾನ ನಿಲ್ದಾಣದಲ್ಲಿ ಇಳಿದಾಗ ಮೋಡ ಮುಸುಕಿತ್ತು, ಮಳೆ ಹನಿಯನ್ನು ಚಿಮುಕಿಸುತ್ತಿತ್ತು, ಥಂಡಿ ಗಾಳಿ ಹಿತಕರವಾಗಿತ್ತು. ಇದೊಂದು ಪುಟ್ಟ ವಿಮಾನ ನಿಲ್ದಾಣ. ಸುತ್ತಲೂ ಬೆಟ್ಟಗಳು, ಹಸಿರು-ಹಸಿರು. ಆಸ್ಟ್ರೇಲಿಯಾದಲ್ಲಿ ಇಷ್ಟು ಹಸಿರು ಇರಬಹುದೆನ್ನುವ ಕಲ್ಪನೆ ಅಲ್ಲಿ ಮೊದಲು ಬಂದಿತು. ಮೊದಲೇ ವೇಳಾಪಟ್ಟಿ ಹಾಕಿಕೊಟ್ಟ ಪ್ರಕಾರ, ನಮ್ಮ ಕಸ್ಟಮ್ಸ್ ಕ್ಲಿಯರೆನ್ಸ್ ಇತ್ಯಾದಿಗಳೆಲ್ಲಾ ಮುಗಿದು ಸಾಮಾನುಗಳನ್ನು ತೆಗೆದುಕೊಂಡು ನಿರ್ದೇಶಿಸಿದ ಜಾಗದಲ್ಲಿ ನಿಂತಾಗ, ನಮ್ಮ ಹೆಸರಿನ ಫಲಕ ಹಿಡಿದ ವಾಹನಚಾಲಕ ನಮ್ಮನ್ನು ಗುರುತಿಸಿ ಹತ್ತಿರ ಬಂದು, ಇನ್ನೊಂದೆರಡು ಪ್ರಯಾಣಿಕರನ್ನು ಕರೆದುಕೊಂಡು ಬರುವವರೆಗೆ ಅಲ್ಲಿಯೇ ಇರಲು ವಿನಂತಿಸಿಕೊಂಡ. ೫-೧೦ ನಿಮಿಷಗಳಲ್ಲಿ ಅವರು ಬಂದು ನಮ್ಮೆಲ್ಲರನ್ನೂ ಮಿನಿಬಸ್‌ನಲ್ಲಿ ನಮ್ಮ-ನಮ್ಮ ಹೋಟೆಲ್‌ಗಳ ಬಳಿ ಕರೆದೊಯ್ದು ಇಳಿಸಿದ. ಸ್ಪೆನ್ಸ್ ರಸ್ತೆಯ ಹಾಲಿಡೇ ಇನ್ ಹೋಟೆಲ್‌ನಲ್ಲಿ ನಮ್ಮ ಉಳಿಯುವ ವ್ಯವಸ್ಥೆಯಾಗಿತ್ತು.


ಆಕಾಶ ರೈಲ್ ಪಯಣ

ಕೇರನ್ಸ್‌ನಿಂದಲೇ ನಮಗೆ ಕಂಡುಬಂದ ವಿಶೇಷತೆ ಎಂದರೆ, ಆಸ್ಟ್ರೇಲಿಯಾದವರು ಬಿಳಿಯರಾದರೂ, ಅವರ ಪೂರ್ವಜರು ಯೂರೋಪಿನ ಬೇರೆ ಬೇರೆ ದೇಶಗಳಿಂದ ಬಂದಿದ್ದರೂ ಬಿಗುಮಾನದವರಲ್ಲ, ಬಾಯಿ ತುಂಬಾ ಮಾತಾಡುತ್ತಾರೆ, ತಮಾಷೆ ಮಾಡುತ್ತಾರೆ, ಜೋರಾಗಿ ನಗುತ್ತಾರೆ, ಒಟ್ಟಾರೆಯಾಗಿ ಸ್ನೇಹಪರರು. ಇವರ ಇಂಗ್ಲಿಷ್ ಒರಟು. ಅವರ ಉಚ್ಚಾರ ಅರ್ಥಮಾಡಿಕೊಳ್ಳುವುದು ಕಷ್ಟವೇ. ವಿಮಾನ ನಿಲ್ದಾಣದಿಂದ ಊರೊಳಗೆ ಬರುವವರೆಗೆ ಡ್ರೈವರ್ ಎಲ್ಲರೊಂದಿಗೆ ಮಾತನಾಡುತ್ತಲೇ ಇದ್ದ.

ಕೇರನ್ಸ್ ಒಂದು ಪುಟ್ಟ ಊರು. ದೇಶದ ಪೂರ್ವದ ಮೇಲ್ತುದಿಯಲ್ಲಿರುವ ಸಮುದ್ರ ತೀರದ ಊರು. ಆಸ್ಟ್ರೇಲಿಯಾದ ಎಲ್ಲಾ ನಗರಗಳು ಹೆಚ್ಚಾಗಿ ಪೂರ್ವ ಕರಾವಳಿ ಭಾಗದಲ್ಲಿವೆ. ನಮ್ಮ ಹೋಟೆಲ್ ಹಿಂಭಾಗದಲ್ಲೇ ಸನಿಹದಲ್ಲಿ ಸಮುದ್ರವಿದ್ದು ರಸ್ತೆಗೆ ತಂಗಾಳಿ ಬೀಸಿ ಬರುತ್ತಿತ್ತು. ರಸ್ತೆಯಲ್ಲಿ ಬರುತ್ತಿದ್ದ ಯಾರನ್ನೋ ಕೇಳಿ ೫-೬ ಕ್ರಾಸ್ ಆಚೆ ಇದ್ದ ನಮ್ಮ ರಾತ್ರಿಯ ಊಟದ ತಾಜ್ ಇಂಡಿಯನ್ ರೆಸ್ಟೋರೆಂಟ್ ಇರುವ ಜಾಗ ನೋಡಿಕೊಂಡೆವು. ಹಾಗೆಯೇ ಅಂಗಡಿ-ಬೀದಿ ನೋಡಿಕೊಂಡು ಅಲೆದಾಡಿದೆವು. ಮಧ್ಯಾಹ್ನದ ಊಟಕ್ಕೆ ಬೇಕರಿಯೊಂದರಲ್ಲಿ ಬ್ರೆಡ್-ಕೇಕು ತಿಂದು ಹೊಟ್ಟೆ ತುಂಬಿಸಿಕೊಂಡೆವು.

ಇಲ್ಲಿಯ ಊರುಗಳು ಅಮೆರಿಕಾದ ಊರುಗಳಂತೆ ಸಿಟಿ ಏರಿಯಾದಲ್ಲಿ (ಡೌನ್‌ಟೌನ್) ಕೇವಲ ಕಚೇರಿಗಳು, ಅಂಗಡಿ, ಹೋಟೆಲುಗಳು ಇರುತ್ತವೆ. ದೂರ-ದೂರದ ಸಬರ್ಬ್‌ಗಳಲ್ಲಿ ವಾಸದ ಮನೆಗಳಿರುತ್ತವೆ. ಕೇರನ್ಸ್ ಅಡ್ಡ-ಉದ್ದ ರಸ್ತೆಗಳಿದ್ದ ಚಿಕ್ಕ ಊರಾಗಿತ್ತು. ರಸ್ತೆಯಲ್ಲಿ ವಾಹನಗಳು, ಜನರು ಬಹಳ ಕಡಿಮೆ.

ಮಧ್ಯಾಹ್ನ ಒಂದು ಗಂಟೆಗೆ ಸರಿಯಾಗಿ ಹೋಟೆಲ್‌ನ ಹತ್ತಿರ ಬಸ್ಸು ಬಂದಾಗ ನಾವು ಹೊರಡಲು ಸಿದ್ಧರಾಗಿ ಲೌಂಜಿನಲ್ಲಿದ್ದೆವು. ದಾರಿಯಲ್ಲಿ ಬೇರೆ ಬೇರೆ ಹೋಟೆಲ್‌ಗಳಿಗೆ ಹೋಗಿ ಪ್ರವಾಸಿಗಳನ್ನು ತುಂಬಿಸಿಕೊಂಡು, ನಮ್ಮನ್ನು ಕರೆದೊಯ್ದಿದ್ದು ಕೇರನ್ಸ್‌ನ ಹತ್ತಿರವಿರುವ ಕುರಂಡಾ ಮಳೆ ಕಾಡಿಗೆ. ಇದಕ್ಕೆ ಬ್ಯಾರನ್ ಗಾರ್ಜ್ ರಾಷ್ಟ್ರೀಯ ಉದ್ಯಾನ ಎನ್ನುತ್ತಾರೆ. ಬ್ಯಾರನ್ ನದಿ ಇಲ್ಲಿ ಹರಿಯುತ್ತಾ ಕೊರಕಲುಗಳನ್ನು, ಪ್ರಪಾತಗಳನ್ನು, ಜಲಪಾತಗಳನ್ನು ಸೃಷ್ಟಿಸಿದೆ. ಇದು ವಿಶ್ವಪರಂಪರೆಯ ಒಂದು ಭಾಗ, ವಿಶ್ವದ ಎಲ್ಲಾ ಮಾನವರ ಒಳಿತಿಗಾಗಿ ಕಾದಿಟ್ಟ ಮಳೆಕಾಡು. ಹಿಂದೊಮ್ಮೆ ಅಂದರೆ, ೧೨೦ ಮಿಲಿಯನ್ ವರ್ಷಗಳ ಹಿಂದೆ, ಇಡೀ ಆಸ್ಟ್ರೇಲಿಯಾ ಭೂಭಾಗವನ್ನು ಆವರಿಸಿದ್ದ ವಿಶಾಲ ಅರಣ್ಯದ ಈಗ ಉಳಿದಿರುವ ರಕ್ಷಿತ ಭಾಗ. ಹಾಗಾಗಿ ಈ ಅರಣ್ಯ ವಿಶೇಷ ಗಿಡ-ಮರಗಳನ್ನು, ಪ್ರಾಣಿಗಳನ್ನು ರಕ್ಷಿಸಿಟ್ಟುಕೊಂಡಿರುವ ಒಂದು ಜೀವಂತ ಮ್ಯೂಸಿಯಂ ಎನಿಸಿದೆ. ಹಾರೆದ ಹಕ್ಕಿ ಕಾಸ್ಸೋವರಿ, ಪುರಾತನ ಮಸ್ಕಿ ರ್‍ಯಾಟ್-ಕಾಂಗರೂ, ಮರದಲ್ಲಿರುವ ಕಾಂಗರೂ ಇತ್ಯಾದಿ ಇಲ್ಲಿ ಮಾತ್ರ ಅಪರೂಪವಾಗಿ ಕಾಣಸಿಗುತ್ತವೆ.

ಇಂತಹ ಅದ್ಭುತ ಕಾಡನ್ನು ಕಾಣಲು ಮಾಡಿರುವ ವ್ಯವಸ್ಥೆಯಾದರೂ ಎಂತಹುದು! ಕಾಡಿನ ಮಧ್ಯೆ ನೆಲದ ಮೇಲೆ ನಡೆದಾಡುವುದಲ್ಲ, ಕಾಡಿನ ಮೇಲೆ. ಗೊಂಡೋಲಾ



*ಬಿಸಿ ಗಾಳಿ ಬಲೂನ್ ಹಾರಾಟ*

ದಲ್ಲಿ ಕುಳಿತು ಸ್ಕೈರೈಲ್‌ನಲ್ಲಿ ಹೋಗುವುದು, ಹಿಂದೆ ಮೇಲೆ ಹಾರುವ ಹಕ್ಕಿಗಳಿಗೆ ಮಾತ್ರ ಕಾಣಲು ಲಭಿಸಿದ್ದ ಅದೃಷ್ಟ ಈಗ ಮಾನವರಿಗೂ ಲಭ್ಯ. ಅವನದೇ ಪ್ರಯತ್ನದಿಂದಾಗಿ.

ವಿಶ್ವದ ಅತಿ ಉದ್ದದ ಈ ಆಕಾಶ ರೈಲಿಗಾಗಿ ೭.೫ ಕಿ.ಮೀ. ಉದ್ದದ ಕೇಬಲ್ ವೇಯನ್ನು ೧೯೯೫ರಲ್ಲಿ ನಿರ್ಮಿಸಲಾಯಿತಂತೆ. ಇದಕ್ಕೆ ತೆಗೆದುಕೊಂಡ ಸಮಯ ಕೇವಲ ಒಂದು ವರ್ಷ. ಇದಕ್ಕೆ ಬೇಕಾಗುವ ಕಂಬಗಳನ್ನು ಹೆಲಿಕಾಪ್ಟರ್‌ನಲ್ಲಿ ತೆಗೆದುಕೊಂಡು ಹೋಗಿ, ಗಿಡಗಳಿಗೆ ಧಕ್ಕೆ ಯಾಗದಂತೆ ನೆಡಲಾಯಿತಂತೆ. ಅತಿ ಎತ್ತರದ ಕಂಬ ೧೩೩ ಅಡಿ ಇದೆ. ಒಂದೊಂದರಲ್ಲಿ ೪ ಜನ ಕುಳಿತುಕೊಳ್ಳಬಲ್ಲ, ೧೧೪ ಗೊಂಡೋಲಾಗಳಿವೆ. ಹೋಗಲು ಒಂದೂವರೆ ಗಂಟೆ ಮತ್ತು ವಾಪಸ್ಸು ಬರಲು ಅಷ್ಟೇ ಸಮಯ ಬೇಕಾಗುತ್ತದೆ. ಮಧ್ಯದಲ್ಲಿ ಎರಡು ನಿಲ್ದಾಣಗಳಿದ್ದು, ಇಳಿದು ಅಲ್ಲಿ ಮಾಡಿದ ಕಾಲ್ದಾರಿಯಲ್ಲಿ ನಡೆದು ಮರಗಳನ್ನು ಹತ್ತಿರದಿಂದ, ಭೂಮಿಯೆಡೆಯಿಂದ ನೋಡಬಹುದು.

ಗೊಂಡೋಲಾದಲ್ಲಿ ಕೆಳಗೆ ಕಾಡನ್ನು ನೋಡುತ್ತಾ ಹೋದರೆ ನಮಗೆ ಕಂಡುಬರುವುದು ಎತ್ತರದ ಮರಗಳ ಕೊಂಬೆ ಎಲೆಗಳು ಒಂದಕ್ಕೊಂದು ಹೆಣೆದುಕೊಂಡು ಸೃಷ್ಟಿಸಿರುವ ಹಸಿರು ಮೇಲ್ಛಪ್ಪರ (ಕೆನೋಪಿ). ಅವುಗಳ ನಡುವೆ ಸ್ವಲ್ಪವೂ ಸ್ಥಳವಿಲ್ಲದೆ ಕೆಳಗಿನ ಭೂಮಿ ಕಾಣಿಸುವುದೇ ಇಲ್ಲ. ಮೈಲಿಗಟ್ಟಲೆ ಹಸಿರು ಮೇಲ್ಛಪ್ಪರ ! ಇದು ದಟ್ಟವಾಗಿ ಹರಡಿ ಕೊಂಡಿದ್ದು ಕಾಡಿನ ನೆಲವನ್ನು ಮಳೆ, ಗಾಳಿ ಮತ್ತು ಸೂರ್ಯನಿಂದ ರಕ್ಷಿಸುತ್ತದೆ. ತೇವಾಂಶವನ್ನು ಹಿಡಿದಿಟ್ಟುಕೊಳ್ಳುತ್ತದೆ, ಗಿಡಗಳ ಬೆಳವಣಿಗೆಗೆ ಸೂರ್ಯನ ಶಕ್ತಿಯನ್ನು ಉಪಯೋಗಿಸಿಕೊಳ್ಳುವ ಸೋಲಾರ್ ಪ್ಯಾನಲ್ ಆಗಿ ಕಾರ್ಯನಿರ್ವಹಿಸುತ್ತದೆ. ಇಷ್ಟೇ ಅಲ್ಲದೆ ಜೀವ ರಕ್ಷಣೆಯ ಕೆಲಸವನ್ನೂ ಮಾಡುತ್ತದೆ. ಈ ಮೇಲ್ಛಾವಣಿಯ ಮೇಲೆಯೇ ಅನೇಕ ಸಸ್ಯಗಳು, ಫರ್ನ್‌ಗಳು, ಆರ್ಕಿಡ್‌ಗಳು ಬೆಳೆದಿರುತ್ತವೆ. ಅಲ್ಲಿರುವ ಹೂವು-ಹಣ್ಣು ಗಳನ್ನು ಸವಿಯಲು ಅನೇಕ ಮಳೆಯ ಕಾಡಿನ ಹಕ್ಕಿಗಳು, ಪ್ರಾಣಿಗಳು ಬರುವುದರಿಂದ ಅವುಗಳ ಸಂತತಿಯ ರಕ್ಷಣೆಯೂ ಆಗಿದೆ. ಕೊನೆಯ ನಿಲ್ದಾಣದಲ್ಲಿ ಇಳಿದು, ಬೆಟ್ಟವನ್ನು ಹತ್ತಿ ಸ್ವಲ್ಪ ದೂರ ನಡೆದರೆ ಕುರಂಡಾ ಗ್ರಾಮ ಸಿಗುತ್ತದೆ. ಅಲ್ಲಿಗೆ ಕರೆದೊಯ್ಯಲು ಬಸ್ಸುಗಳೂ ಇವೆ. ಇಲ್ಲಿ ಹಕ್ಕಿ ಪ್ರಪಂಚ, ಆಸ್ಟ್ರೇಲಿಯಾದ ಚಿಟ್ಟೆಗಳ ರಕ್ಷಿತ ಪ್ರದೇಶ, ರಾತ್ರಿ ಸಫಾರಿ, ಅಂಗಡಿ-ಹೋಟೆಲ್‌ಗಳೂ ಇವೆ.

ಮಾರನೆಯ ಬೆಳಗಿನ ಜಾವ ೪-೧೫ಕ್ಕೆ ನಮ್ಮನ್ನು ಬಿಸಿ ಗಾಳಿ ಬಲೂನ್ ಹಾರಾಟದ ಕಾರ್ಯಕ್ರಮಕ್ಕೆ ಕರೆದೊಯ್ಯಲು ಹೋಟೆಲ್ ಬಳಿ ಬಸ್ಸು ಬರುವುದಿತ್ತು. ನಮ್ಮೊಂದಿಗೆ ತೆಗೆದುಕೊಂಡು ಹೋಗಿದ್ದ ಚಿಕ್ಕ ಟೇಬಲ್ ಗಡಿಯಾರದಲ್ಲಿ ಅಲಾರಾಂ ಇಟ್ಟುಕೊಂಡು ಮೂರು ಗಂಟೆಗೇ ಎದ್ದು ಸಮಯಕ್ಕೆ ಸರಿಯಾಗಿ ಸಿದ್ಧರಾಗಿ ಹೋಟೆಲ್ ಲೌಂಜಿನಲ್ಲಿ ಕುಳಿತೆವು. ಊರ ಹೊರಗೆ ನಾವು ಹೋಗುವ ವೇಳೆಗಾಗಲೇ ಅಲ್ಲಿ ಹಲವಾರು ಪ್ರವಾಸಿಗಳು ಸೇರಿದ್ದರು. ನಾಲ್ಕು ಬಣ್ಣ- ಬಣ್ಣದ ದೊಡ್ಡ ಬಲೂನುಗಳಿಗೆ ಗ್ಯಾಸ್ ಉರಿಯಿಂದ ಬಿಸಿ ಗಾಳಿ ತುಂಬುವ ಕೆಲಸ ಆರಂಭವಾಗಿತ್ತು. ನಮ್ಮ ಬಸ್ಸಿನ ಡ್ರೈವರನೂ ಅದಕ್ಕೆ ಕೈ ಜೋಡಿಸಿದ. ಈ ಡ್ರೈವರ್‌ಗಳು ಎಲ್ಲಾ ಕೆಲಸದಲ್ಲೂ ಭಾಗಿಗಳಾಗುತ್ತಾರೆ, ತರಬೇತಿ ಪಡೆದಿರುತ್ತಾರೆ. ಡ್ರೈವಿಂಗ್ ಮಾಡುತ್ತಲೇ ರನ್ನಿಂಗ್ ಕಾಮೆಂಟರಿ ಕೊಡುತ್ತಾ ಇರುತ್ತಾರೆ. ಬೇರೆ ಮಾರ್ಗದರ್ಶಿ ಬೇಕಾಗಿಯೇ ಇಲ್ಲ. ಬಲೂನನ್ನು ಒಂದು ಹಗುರವಾದ ತೊಟ್ಟಿಲಿಗೆ ಕಟ್ಟಲಾಗಿತ್ತು. ಅದರ ಎರಡು ಭಾಗಗಳಲ್ಲಿ ತಲಾ ಐದು ಜನರು ನಿಲ್ಲಬಹುದಿತ್ತು. ಬಲೂನ್ ಪೂರ್ತಿ ಬಿಸಿಗಾಳಿ ತುಂಬಿಕೊಂಡು ಉಬ್ಬಿ ನೇರವಾಗಿ ನಿಂತ ಕೂಡಲೇ ತೊಟ್ಟಿಲುಗಳಲ್ಲಿ ಜನರನ್ನು ನಿಲ್ಲಿಸಿ ಬೇರೆ ಬೇರೆ ದಿಕ್ಕುಗಳಲ್ಲಿ ಮೇಲಕ್ಕೆ ಕೊಂಡೊಯ್ಯಲಾಯಿತು. ನಮ್ಮ ಸರದಿ ಮುಂದಿನ ಸಾರಿ ಇದ್ದುದರಿಂದ ಉಳಿದ ನಮ್ಮ ಕೆಲಸ, ವ್ಯಾನಿನಲ್ಲಿ ಕುಳಿತು ನಮ್ಮ ಬಲೂನ್ ಹೋದತ್ತ ಅದನ್ನು ಕೆಳಗಿನಿಂದ ಹಿಂಬಾಲಿಸುವುದು. ಹವಾ ಸ್ವಚ್ಛವಾಗಿತ್ತು. ಗಾಳಿ ಅನುಕೂಲಕರವಾಗಿತ್ತು. ಎಷ್ಟೋ ಸಾರಿ ಮೋಡ-ಮಳೆಯಿಂದಾಗಿ ಈ ಕಾರ್ಯಕ್ರಮ ರದ್ದಾಗುವುದೂ ಉಂಟೆಂದು ತಿಳಿಯಿತು. ನಮ್ಮ ಅದೃಷ್ಟ ಚೆನ್ನಾಗಿತ್ತು , ಹೊಸ ಅನುಭವದಿಂದ ವಂಚಿತರಾಗಲಿಲ್ಲ.

ಬಲೂನ್ ಇಳಿಯುವ ಸಮಯವಾಗಿದ್ದರೂ, ಇಳಿಸಲು ಪ್ರಯತ್ನಿಸುತ್ತಿದ್ದರೂ, ಗಾಳಿ ಯಿಂದಾಗಿ ಕೆಳಗೆ ಬಂದ ಬಲೂನ್ ಪುನಃ ಮೇಲಕ್ಕೆ ಹೋಗಿ ಮುಂದೆ ಹೋಗಿಬಿಡುತ್ತಿತ್ತು. ಹಾಗಾಗಿ ನಾವು ಪುನಃ ಅದರ ಬೆನ್ನು ಹತ್ತಿ ಮುಂದೆ ಹೋಗಬೇಕಾಯಿತು. ಸುತ್ತ-ಮುತ್ತ ಬಯಲು ಭೂಮಿ, ಹುಲ್ಲುಗಾವಲು ಅಥವಾ ಹೊಲ. ಯಾರದೋ ಹೊಲದಲ್ಲಿ ಅದು ಇಳಿಯಬಹುದು. ಬಹುಶಃ ಮೊದಲೇ ಅವರ ಅನುಮತಿ ಪಡೆದಿರುತ್ತಾರೆ. ಕೊನೆಗೂ ಅದು ಕೆಳಗಿಳಿದಾಗ ಉಳಿದ ನಾವೆಲ್ಲರೂ ಹತ್ತಿಕೊಂಡೆವು. ಹಗುರಾಗಿ ಮೇಲೆ ಏರಿ ಆಕಾಶದಲ್ಲಿ ಹಾರತೊಡಗಿದ್ದೆವು. ಮುಕ್ತ ಆಕಾಶದಲ್ಲಿ ಹಕ್ಕಿಯಂತೆ ಹಾರುವ ಅನುಭವ ಮರೆಯಲಾಗದ್ದು. ಬಿಸಿಗಾಳಿ ಕಡಿಮೆಯಾದಾಗ ಗ್ಯಾಸ್ ಉರಿಸಿ ಗಾಳಿ ತುಂಬಲಾಗುತ್ತಿತ್ತು. ಸಾಕಷ್ಟು ಎತ್ತರದಿಂದ ಕೆಳ ನೋಡಿದಾಗ ಗಿಡಮರಗಳು, ಆಸ್ಟ್ರೇಲಿಯಾದ ಎತ್ತರದ ಒಣಹುಲ್ಲಿನ ಹರವು, ಅದರಲ್ಲಿ ಕುಪ್ಪಳಿಸುತ್ತಾ ಓಡುವ ಕಂದು ಬಣ್ಣದ ಕಾಂಗರೂಗಳು ಕಣ್ಣು ತುಂಬಿದವು. ಸಮಯ ಮುಗಿದ ನಂತರ ಯಾರದೋ ಹೊಲದಲ್ಲಿ ಕೆಳಗಿಳಿದಾಗ ಅದರ ಒಡೆಯನೂ ನಮ್ಮನ್ನು ಬಂದು ಸೇರಿದ. ಬಿಸಿ ಗಾಳಿಯನ್ನು ಎಲ್ಲರೂ ಸೇರಿ ತೆಗೆದ ನಂತರ ಚಪ್ಪಟೆಯಾಗಿ ನೆಲದ ಮೇಲೆ ಒರಗಿದ ಬಲೂನನ್ನು ಎಲ್ಲರೂ ಸೇರಿ ಮಡಚಿದೆವು. ಬಲೂನಿನಲ್ಲಿ ಹಾರಿದ ಎಲ್ಲರಿಗೂ ಸರ್ಟಿಫಿಕೇಟ್ ಸಿಕ್ಕಿತು. ವಾಹನದಲ್ಲಿ ಬಲೂನನ್ನು ತೆಗೆದುಕೊಂಡು ಹೋದ ನಂತರ ನಮ್ಮನ್ನು ಬಸ್ಸಿನಲ್ಲಿ ಸಮುದ್ರ ತೀರದ ಬಂದರಿಗೆ ಕರೆ ತಂದರು. ಆಗ ಮಧ್ಯಾಹ್ನ ೧೨ ಗಂಟೆಯಾಗಿತ್ತು. ನಮ್ಮನ್ನು ಕರೆದೊಯ್ಯಲು ಹಡಗು ಸಿದ್ಧವಾಗಿ ನಿಂತಿತ್ತು.

ಪ್ರವೇಶದ್ವಾರದ ಬಳಿ ನಮ್ಮ ವೋಚರ್‌ಗಳನ್ನು ಕೊಟ್ಟು ಹಡಗಿನ ಪ್ರಯಾಣಕ್ಕೆ ಅಪ್ಪಣೆ ಚೀಟಿ ಮತ್ತು ಊಟದ ಚೀಟಿ ಪಡೆದೆವು. ಹಡಗಿನ ಒಳಗೆ ಹೋಗುವ ಮುನ್ನವೇ ನಮ್ಮ ಫೋಟೋಗಳನ್ನು ನಮ್ಮನ್ನು ಕೇಳದೆಯೇ ತೆಗೆದುಕೊಂಡರು. ವಾಪಸ್ಸು ಬರುವಾಗ ಗೊತ್ತಾಯಿತು, ಏಕೆಂದು. ನಮ್ಮ ಈ ಫೋಟೋವನ್ನು ಹಿಡಿದು ಬೇಕೇ ಎಂದು ಕೇಳುತ್ತಾರೆ. ಬೇಕಿದ್ದಲ್ಲಿ ೧೫-೨೦ ಡಾಲರ್ ಕೊಟ್ಟು ತೆಗೆದುಕೊಳ್ಳಬೇಕು. ನೆನಪಿನ ಕಾಣಿಕೆ ಎಂದು.



*ಆಕರ್ಷಣೀಯ ಹವಳ ದಿಣ್ಣೆ*

ಹಡಗಿನ ಹಿನ್ನೆಲೆಯ ಸಮುದ್ರದ ಪರಿಸರವಿರುವ ಅಂತಹ ನೆನಪಿನ ಫೋಟೋವನ್ನು ಯಾರು ತಾನೇ ಬೇಡವೆಂದಾರು ! ನಾವೂ ಹಣ ತೆತ್ತು ಕೊಂಡೆವು.

ಹಡಗಿನ ಕೆಳಗಿನ ಭಾಗದಲ್ಲಿ ಹೋಗುವಾಗಲೇ ಊಟದ ವ್ಯವಸ್ಥೆ ಇದ್ದು, ಎಲ್ಲರೂ ಸಾಲಾಗಿ ತಟ್ಟೆ ಹಿಡಿದು ಬೇಕಾದ ತಿನಿಸುಗಳನ್ನು ಹಾಕಿಕೊಂಡು ಮೇಲಿನ ಡೆಕ್ಕಿಗೆ ಹೋಗಿ ಕೂತು ತಿನ್ನಬೇಕು. ಪ್ರತಿ ಟೇಬಲಿಗೆ ನಾಲ್ಕು ಜನರು ಕೂಡ ಬಹುದು. ಯಾವುದು ಸಸ್ಯಾಹಾರ, ಯಾವುದು ಮಾಂಸಾಹಾರ ತಿಳಿಯದೇ ಬರೀ ಬನ್, ಹಸಿ ತರಕಾರಿ ತಟ್ಟೆಯಲ್ಲಿ ಹಾಕಿಕೊಂಡು ಡೆಕ್ಕಿಗೆ ಬಂದು ಕುಳಿತೆವು. ಜಪಾನಿಯರು ಎಲ್ಲೆಲ್ಲಿಯೂ ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತಿದ್ದರು. ಸಾಲಿನಲ್ಲಿ ಬರುತ್ತಿದ್ದರೂ ನೂಕಿಕೊಂಡು ಮೈಮೇಲೆ ಬರುತ್ತಿದ್ದರು ಕೂಡ ! ತಮ್ಮ ಕೆಲಸವಾಗುವುದು ಮುಖ್ಯ. ನಮ್ಮ ಭಾರತೀಯರಂತೆಯೇ ಈ ವಿಷಯದಲ್ಲಿ ಸ್ನೇಹಪರರೂ ಅಲ್ಲ, ಮುಖ ನೋಡಿದರೆ ನಗುವುದೂ ಇಲ್ಲ. ಪಕ್ಕದಲ್ಲಿದ್ದರೂ ಮಾತನಾಡಿಸಲು ಪ್ರಯತ್ನಿಸುವುದಿಲ್ಲ. ಭಾಷೆಯ ಸಮಸ್ಯೆಯಿಂದ ಇರಬಹುದು. ಒಟ್ಟಾರೆ ಯಾವಾಗಲೂ ತಮ್ಮ ಗುಂಪಿನಲ್ಲಿಯೇ ಇರುತ್ತಿದ್ದರು. ಈ ಊಟದ ಗಲಾಟೆಯಲ್ಲಿ ಹಡಗು ಯಾವಾಗ ಚಲಿಸತೊಡಗಿತ್ತೋ ತಿಳಿಯಲೇ ಇಲ್ಲ. ಡೆಕ್ಕಿನಲ್ಲಿ ಕುಳಿತ ಮೇಲೆ ನೋಡಿದರೆ ಸಮುದ್ರದ ಮಧ್ಯೆ ಬಂದುಬಿಟ್ಟಿದ್ದೆವು. ಹಡಗು ವೇಗ ಹೆಚ್ಚಿಸಿಕೊಂಡಿತ್ತು. ಡೆಕ್ಕಿನ ಮೇಲೆಯೇ ಕೌಂಟರಿನಲ್ಲಿ ಟೀ-ಕಾಫಿ-ಸಾಫ್ಟ್ ಡ್ರಿಂಕ್ಸ್ ತೆಗೆದುಕೊಂಡು ಬೇಕಾದಷ್ಟು ಕುಡಿಯ ಬಹುದಿತ್ತು. ಹಣ ಕೊಡಬೇಕಾಗಿಲ್ಲ. ನಾವು ಈಗ ಹೊರಟಿದ್ದು ಜಗತ್ಪ್ರಸಿದ್ಧ ದಿ ಗ್ರೇಟ್ ಬ್ಯಾರಿಯರ್ ರೀಫ್ ನೋಡಲು.

ದಿ ಗ್ರೇಟ್ ಬ್ಯಾರಿಯರ್ ರೀಫ್ ಹೆಸರನ್ನು ಹೈಸ್ಕೂಲಿನಲ್ಲಿ ಭೂಗೋಳ ಓದಿದಾಗ ಕೇಳಿದ್ದೆ. ಇತ್ತೀಚೆಗೆ ಡಿಸ್ಕವರಿ ಟಿ.ವಿ. ಚಾನಲ್‌ನಲ್ಲಿ ಆಗಾಗ್ಗೆ ಈ ಹವಳದ ದಿಣ್ಣೆಗಳ, ಬಣ್ಣಗಳ, ಆಕಾರಗಳ ವೈಭವವನ್ನು ಕಂಡಿದ್ದೆ, ಬೆರಗುಗೊಂಡಿದ್ದೆ. ಈಗ ಅದನ್ನು ಕಣ್ಣಾರೆ ನೋಡಿ ಆನಂದಿಸುವ, ಧನ್ಯಳಾಗುವ ಅವಕಾಶ ದೊರಕಿತ್ತು. ಕೇರನ್ಸ್‌ಗೆ ಹೋಗಲು ನಿರ್ಧರಿಸಲು ಈ ಹವಳದ ದಿಣ್ಣೆಗಳೇ ಪ್ರಮುಖ ಆಕರ್ಷಣೆಯಾಗಿತ್ತು. ಇದು ಆಸ್ಟ್ರೇಲಿಯಾದ ಉತ್ತರ-ದಕ್ಷಿಣದುದ್ದಕ್ಕೂ ಪೆಸಿಫಿಕ್ ಸಾಗರದಲ್ಲಿ ಸುಮಾರು ೩೦೦೦ ಕಿ.ಮೀ.ನಷ್ಟು ಹಬ್ಬಿದೆ. ಇದೊಂದು ಅತಿ ವಿಶಾಲವಾದ ಸಾಗರ ಸಂಪತ್ತಾಗಿದ್ದು ವಿಶ್ವದ ಅತಿ ವೈವಿಧ್ಯಮಯವಾದ ವರ್ಣರಂಜಿತ, ಜೀವಂತ ಹವಳಗಳ ನೆಲೆದಾಣವಾಗಿದೆ. ಅಷ್ಟೇ ವೈವಿಧ್ಯಮಯವಾದ, ವರ್ಣರಂಜಿತ ೧೫,೦೦೦ಕ್ಕೂ ಮೇಲ್ಪಟ್ಟು ಸಾಗರಜೀವಿಗಳ ಮನೆಯಾಗಿದೆ. ಹಾಗಾಗಿಯೇ ಇದನ್ನು ವಿಶ್ವ ಪರಂಪರೆಯ ಸ್ಥಳವಾಗಿ ಪರಿಗಣಿಸಿ ಜೋಪಾನವಾಗಿ ಕಾಪಾಡಿಕೊಂಡು ಬಂದಿದ್ದಾರೆ.

ಗಗನಯಾತ್ರಿಗಳು ಚಂದ್ರನತ್ತ ಯಾತ್ರೆ ಮಾಡಿದಾಗ, ಭೂಮಿಯೆಡೆಗೆ ನೋಡಿದಾಗ ಅವರಿಗೆ ಕಂಡಿದ್ದು ಈ ಜೀವಂತ ಹವಳದ ದಿಣ್ಣೆಗಳು ಮಾತ್ರವಂತೆ ! ದಾರಿಯಲ್ಲಿ ಅನೇಕ ಚಿಕ್ಕ-ಪುಟ್ಟ ದ್ವೀಪಗಳು, ಹವಳದ ದಿಬ್ಬಗಳು ಕಾಣಸಿಗುತ್ತವೆ. ಹೆಚ್ಚಿನ ದ್ವೀಪಗಳಲ್ಲಿ ಮಾನವನ ವಾಸವಿಲ್ಲ. ಆದರೆ ಗ್ರೀನ್ ಐಲೆಂಡ್ ಅಂತಹ ದ್ವೀಪಗಳಲ್ಲಿ ರಿಸಾರ್ಟ್‌ಗಳಿವೆ. ಅಲ್ಲಿ ಒಂದು ದಿನ ಪೂರ್ತಿ ಅಥವಾ ಹಲವಾರು ದಿನಗಳಿದ್ದು ಸ್ಕೂಬಾ ಡೈವಿಂಗ್ ಅಥವಾ ಸ್ನೋರ್ಕಲಿಂಗ್ ಮಾಡಿ, ಸಮುದ್ರದ ಆಳಕ್ಕಿಳಿದು ಹತ್ತಿರದಿಂದ ಸಮುದ್ರದ ಹವಳ ಸಂಪತ್ತನ್ನು, ಜಲಚರ ಸಂಪತ್ತನ್ನು ಕಂಡು, ಮುಟ್ಟಿ ಆನಂದಿಸಬಹುದು. ಆದರೆ, ಮಾನವರಿಂದ ಪ್ರಕೃತಿ ನಿರ್ಮಿತ ಯಾವುದೇ ವಸ್ತುವಿಗೆ ಹಾನಿಯಾಗದಂತೆ ಎಚ್ಚರಿಕೆ ವಹಿಸಲಾಗುತ್ತದೆ.

ನಮ್ಮ ಹಡಗು ನಮ್ಮನ್ನು ಗ್ರೀನ್ ಐಲೆಂಡ್ ಹತ್ತಿರದ ಪಾಂಟೂನ್‌ಗೆ ಕರೆದೊಯ್ದಿತು. ಸಮುದ್ರದಲ್ಲಿ ಸ್ಥಾಯಿಯಾಗಿ ನಿಂತಿರುವ ಇದರ ಕೆಳ ಅಂತಸ್ತಿನಲ್ಲಿ ಗಾಜಿನ ಕಿಟಕಿಗಳಿರುವ ವೀಕ್ಷಣಾಲಯವಿದೆ. ಅಲ್ಲಿ ಕುಳಿತು ನೀರಿನಲ್ಲಿ ಓಡಾಡುವ ತರಹಾವರಿ ಮೀನುಗಳನ್ನು ನೋಡಬಹುದು. ಅಲ್ಲಿಯೇ ಮೇಲಿನ ಡೆಕ್ಕಿನಲ್ಲಿ ಡೈವ್ ಮಾಡಲು, ಸ್ನೋರ್ಕಲ್ ಮಾಡಲು ಬಯಸುವವರಿಗೆ ಬೇಕಾದ ಉಡುಪುಗಳು, ಉಪಕರಣಗಳು ದೊರೆಯುತ್ತವೆ. ಇದಕ್ಕೆ ಆ ಮೊದಲು ಅನುಭವವಿರಬೇಕೆಂದೇನೂ ಇಲ್ಲವೆಂದೂ ಯಾರುಬೇಕಾದರೂ (ಆರೋಗ್ಯದಿಂದಿರುವವರು) ಪ್ರಯತ್ನಿಸಬಹುದೆಂದೂ ಹೇಳಿರುತ್ತಾರೆ. ಮಾರ್ಗದರ್ಶಿಗಳು ಧೈರ್ಯಕ್ಕಾಗಿ ಕೈ ಹಿಡಿದುಕೊಂಡು ನೀರಿನಲ್ಲಿ ಕರೆದುಕೊಂಡು ಕೂಡಾ ಹೋಗುತ್ತಾರೆ. ನಮ್ಮ ಹಡಗಿನಲ್ಲಿ ಬಂದ ಹೆಚ್ಚಿನ ಜನ –ಮಹಿಳೆಯರು, ಮಕ್ಕಳನ್ನು ಒಳಗೊಂಡು – ಬಟ್ಟೆ ಬಿಚ್ಚಿ, ತಕ್ಕ ಉಡುಪುಗಳನ್ನು, ಉಪಕರಣಗಳನ್ನು ಹಾಕಿಕೊಂಡು ನೀರಿಗೆ ಧುಮುಕಿಯೇಬಿಟ್ಟರು. ಬಟ್ಟೆ ಬಿಚ್ಚಲು ನೀರಿಗೆ ಹಾರಲು ಹಿಂಜರಿದ ನಾವು ಅವನ್ನು ನೋಡಿಕೊಂಡು ಹೊಟ್ಟೆ ಉರಿ ಪಟ್ಟುಕೊಳ್ಳುತ್ತಾ ಮೇಲೆಯೇ ಕುಳಿತಿದ್ದೆವು. ನನ್ನ ಮಗನಿಗೆ ಈಜು ತಿಳಿದಿದೆ. ಅವನಿಗಾದರೂ ಹೋಗುವಂತೆ ಒತ್ತಾಯಿಸಿದರೂ ಅವನಿಗೂ ಏನೋ ಸಂಕೋಚ. ಕೊನೆಗೂ ಹೋಗದೆ ಅನುಭವದಿಂದ ವಂಚಿತನಾದ. ಮುಂದೆ ಎಂದಾದರೂ ಜೀವಂತ ವರ್ಣಮಯ ಹವಳಗಳನ್ನು ಹತ್ತಿರದಿಂದ ಕಾಣಲು ಸಿಕ್ಕ ಈ ಅವಕಾಶ ಕಳೆದುಕೊಂಡಿದ್ದಕ್ಕೆ ಅವನಿಗೆ ಪಶ್ಚಾತ್ತಾಪವಾಗಬಹುದು. ಸಮುದ್ರದಿಂದ ಮೇಲೆದ್ದು ಬಂದ ಮೇಲೆ ಒಳ್ಳೆಯ ನೀರಿನಲ್ಲಿ ಸ್ನಾನ ಮಾಡಲು ಇಲ್ಲಿಯೇ ಶವರ್ ಕೂಡಾ ಇವೆ.



*ಆಕಾಶದಿಂದ ಕಾಣುವ ಸುಂದರ ದೃಶ್ಯ*

ಈ ಪಾಂಟೂನ್‌ನ ಮತ್ತೊಂದು ಕಡೆ ಗಾಜಿನ ತಳವಿರುವ ದೋಣಿಗಳು ಬಂದು ನಮ್ಮನ್ನು ಹವಳದ ದಿಣ್ಣೆಗಳ ನಡುವೆ ಕರೆದೊಯ್ಯುತ್ತವೆ. ಅರ್ಧಗಂಟೆ ಸುತ್ತಾಡಿಸಿಕೊಂಡು ಬರುತ್ತವೆ. ನೀರಿನಲ್ಲೇ ಇದ್ದಂತೆ ಭಾಸವಾಗುತ್ತದೆ. ನಾವು ನೀರಿನ ಒಳಗೇ ಇರುವುದರಿಂದ ಅದೊಂದು ಅಪೂರ್ವ ಅನುಭವ. ನಮಗೂ ಆ ಹವಳಗಳಿಗೂ ಮಧ್ಯೆ ಗಾಜು ಮಾತ್ರವಿರುತ್ತದೆ. ಅಷ್ಟು ನೀರಿನ ಆಳದಲ್ಲಿಯೂ ಸೂರ್ಯನ ಪ್ರಕಾಶ ಬಿದ್ದು ಹವಳಗಳು ತಮ್ಮ ವಿವಿಧ ವರ್ಣ ವಿನ್ಯಾಸಗಳಿಂದ ನಮ್ಮನ್ನು ರಂಜಿಸುತ್ತವೆ. ಅವುಗಳ ನಡುವೆ ಸ್ವಚ್ಛಂದವಾಗಿ ಈಜಾಡುವ ಮೀನುಗಳು. ಮತ್ತಿತರ ಜಲಚರಗಳು. ಅವುಗಳ ಬಣ್ಣ ವಿನ್ಯಾಸಗಳಾದರೂ ಎಷ್ಟು ಆಕರ್ಷಕ. ಪ್ರಕೃತಿಯ ವಿಸ್ಮಯಗಳಿಗೆ ಕೊನೆಯೇ ಇಲ್ಲ. ಇದೇ ಹವಳದ ದಿಬ್ಬಗಳನ್ನು ದುಡ್ಡಿದ್ದವರು ಹೆಲಿಕಾಪ್ಟರ್ ಅಥವಾ ಪ್ಯಾರಾಸೇಲಿಂಗ್ ಮೂಲಕ ಕೂಡ ನೋಡಬಹುದು. ಬೆಳಗಿನ ಆಕಾಶದಲ್ಲಿನ ಹಾರಾಟ, ಅಪರಾಹ್ನದ ನೀರಿನ ಮೇಲಿನ ಈ ಪಯಣ ನಮ್ಮ ಕೇರನ್ಸ್ ಪ್ರವಾಸವನ್ನು ಸಾರ್ಥಕಗೊಳಿಸಿದ್ದವು. ಮಾರನೆಯ ಬೆಳಿಗ್ಗೆ ೫-೪೫ಕ್ಕೆ ಬ್ರಿಸ್‌ಬೆನ್ ಗೋಲ್ಡ್‌ಕೋಸ್ಟಿಗೆ ಹೊರಡಲಿರುವ ಕ್ವಾಂಟಾಸ್ ವಿಮಾನವನ್ನು ಹಿಡಿಯಲು ೪-೩೦ಕ್ಕೇ ಬಸ್ಸು ನಮ್ಮನ್ನು ಕರೆದೊಯ್ಯಲು ಬರುವುದಿತ್ತು. ಹಾಗಾಗಿ ರಾತ್ರಿ ತಾಜ್ ಇಂಡಿಯನ್ ರೆಸ್ಟೋರೆಂಟ್‌ಗೆ ಹೋಗಿ ಊಟ ಮಾಡಿ, ಬೇಗನೇ ಮಲಗಿಕೊಂಡೆವು. ದಿನದ ನಮ್ಮ ಅಪೂರ್ವ ಅನುಭವವನ್ನು ಮೆಲುಕು ಹಾಕುತ್ತ.

ನಮ್ಮ ದೇಶದ, ವಿಶ್ವಪರಂಪರೆಯ ತಾಣವೆಂದು ಗುರುತಿಸಲ್ಪಟ್ಟ ಹಂಪೆಯ ಅವಶೇಷ ಗಳ ರಕ್ಷಣೆಯ ಬಗ್ಗೆ ನಾವೆಷ್ಟು ಕಾಳಜಿ ವಹಿಸುತ್ತಿದ್ದೇವೆ, ಅದನ್ನು ವಿಶ್ವಕ್ಕೇ ಷೋಕೇಸ್ ಮಾಡಿ, ಹೆಮ್ಮೆಯಿಂದ ತೋರಿಸಲು ಏನು ಕ್ರಮ ಕೈಗೊಂಡಿದ್ದೇವೆ ಎನ್ನುವ ಪ್ರಶ್ನೆ ಮನದ ಮುಂದಿತ್ತು. ಪಾಂಪೆ, ಕೇರನ್ಸ್‌ಗಳು ಈ ವಿಷಯದಲ್ಲಿ ನಮಗೆ ನಾಚಿಕೆಯುಂಟುಮಾಡುತ್ತವೆ. ಅಫ್‌ಘಾನಿಸ್ಥಾನದ ಬಾಮಿಯಾನ್ ಬೆಟ್ಟದ ಅತಿ ಎತ್ತರದ ಬುದ್ಧನ ವಿಗ್ರಹವೂ ವಿಶ್ವ ಪರಂಪರೆಯ ಭಾಗವಾಗಿತ್ತು. ಅದನ್ನು ದುರಾತ್ಮರು ಧರ್ಮ ದ್ವೇಷದಿಂದ ಹಾಳುಗೆಡಹಿದರು. ಆದರೆ, ನಾವು ನಮ್ಮದೇ ಆದ ನಿರ್ಲಕ್ಷ್ಯದಿಂದ ಅದೇ ದಿಕ್ಕಿನತ್ತ ಸಾಗುತ್ತಿದ್ದೇವೆ !

**ಹೇಮಲತಾ ಮಹಿಷಿ**

'ಶಶಿಕಿರಣ್', ನಂ. ೨೯೯, ೧೮ನೇ ಅಡ್ಡರಸ್ತೆ, ಮಲ್ಲೇಶ್ವರಂ, ಬೆಂಗಳೂರು-೫೬೦ ೦೫೫

# ಮರಾಠಿ ವಿದ್ರೋಹಿ ಕವಿತೆಗಳು

ಮರಾಠಿ ಕವಿತೆಗೆ ತನ್ನದೇ ಆದೊಂದು ವಿಶಿಷ್ಟ, ವಿಭಿನ್ನ ಇತಿಹಾಸವಿದೆ. ವಸಾಹತುಶಾಹಿ ಕಾಲದಲ್ಲಿ ಭಾರತದಲ್ಲಿ ವೈಚಾರಿಕತೆ ಆರಂಭಗೊಂಡಿತು. ಜೊತೆಗೆ ಮಾನವೀಯತೆ ಹಾಗೂ ಮನುಷ್ಯನನ್ನು ಗುರುತಿಸುವ ಕಾರ್ಯಕ್ಕೂ ಚಾಲನೆ ಸಿಕ್ಕಿತು. ಆಂಗ್ಲ ಶಿಕ್ಷಣ ಹೋರಾಟದ ಬೀಜವನ್ನು ಬಿತ್ತಿತು. ಶಿಕ್ಷಣದಿಂದಾಗಿ ಸಾಮಾಜಿಕ ಸ್ತರದಲ್ಲಿ ಜಾಗರೂಕತೆ ನಿರ್ಮಾಣಗೊಂಡಿತು. ಔದ್ಯೋಗಿಕ ಕ್ರಾಂತಿಯಿಂದ ಹೊಸ ಸಮಾಜವೂ ನಿರ್ಮಾಣಗೊಂಡಿತು. ಸವರ್ಣೀಯ ಉಚ್ಚ ವರ್ಗದವರಿಗೆ ಗುಲಾಮಗಿರಿಯ ಪ್ರಶ್ನೆ ಕಾಡಲಾರಂಭಿಸಿತು. ಸ್ವಾತಂತ್ರ್ಯ ಬೇಕಾಗಿದ್ದರೆ ಯಾರಿಗೆ ? ಏಕೆ ? ಎಂಬ ವಿಚಾರಗಳೂ ಕಾಣಿಸಿಕೊಂಡವು. ಪರಿಣಾಮ ಸ್ವಾತಂತ್ರ್ಯ ಎನ್ನುವುದು ಬರೇ ದೇಶದ್ದಲ್ಲ ಇಡೀ ವ್ಯವಸ್ಥೆಯದು ಎನ್ನುವ ಹಾಗಾಯಿತು. ಕೆಲವು ವಿಚಾರವಂತರು ಈ ಹಿನ್ನೆಲೆಯಲ್ಲಿ ಯೋಚಿಸಲಾರಂಭಿಸಿದರು. ಧ್ವನಿ ಎತ್ತಲಾರಂಭಿಸಿದರು. ರಾಜಾರಾಮ್ ಮೋಹನರಾಯ, ಫುಲೇ, ಆಗರಕರ, ಅಂಬೇಡ್ಕರ್ ಇಂಥವರಲ್ಲಿ ಪ್ರಮುಖರೆನಿಸಿದರು.

೨೦ನೇ ಶತಮಾನದ ಆರಂಭದಿಂದಲೇ ಬಹುಜನ ಸಮಾಜದ ದಾರುಣ ಸ್ಥಿತಿಗತಿ, ಶೋಷಣೆಯನ್ನು ಚಿತ್ರಿಸುವ ಕಾವ್ಯ ಬೆಳಕಿಗೆ ಬರಲಾರಂಭಿಸಿತು. ಶಿಕ್ಷಣದ ಜೊತೆಗೆ ಚಳುವಳಿಗೂ ಮಹತ್ವ ಬಂತು. ದಲಿತರ, ಅಸ್ಪೃಶ್ಯರ, ಕಾರ್ಮಿಕ ವರ್ಗದವರ ಕೈಫಿಯತ್ತನ್ನು ಕಿಶನ ಫಾಗೂ ಎಂಬ ಕವಿ ಮೊದಲ ಬಾರಿಗೆ ಆಂಗ್ಲ ಸರಕಾರದ ಕಡೆಗೆ ಒಯ್ದು ದಾಖಲೆ ಸಿಗುತ್ತದೆ. ಇವನ ಕವಿತೆಯಲ್ಲಿ ಫುಲೆಯ ಪ್ರಖರ ಯುಕ್ತಿವಾದ ಹಾಗೂ ವೈಚಾರಿಕತೆ ಅಭಿವ್ಯಕ್ತಗೊಂಡಿದೆ. ಜೊತೆಗೆ ಬಹುಜನ ಸಮಾಜದ ವಾಸ್ತವ ಚಿತ್ರಣವೂ ಇದೆ. ಫಾಗೂ ಅವರ ಕವಿತೆಯೆಂದರೆ 'ಲೋಕ ಜೀವನದ ಕೆಂಡ ಉಗುಳುವ ಕವಿತೆಗಳು' ಎಂದು ವಿಮರ್ಶಕರು ಕೊಂಡಾಡಿದ್ದಾರೆ. 'ಲಾವಾದಂತೆ' ಕುದಿಯುವ ಕವಿತೆ ಎಂಬ ಪ್ರಶಂಸೆಯೂ ಇದೆ.

**ಚಂದ್ರಕಾಂತ ಪೋಕಳೆ**

ದೇಶಕ್ಕೆ ಸ್ವಾತಂತ್ರ್ಯ ಸಿಕ್ಕರೆ ಸಂಪೂರ್ಣ ವ್ಯವಸ್ಥೆಯೇ ಬದಲಾಗಬಹುದೆಂಬ ಆಸೆಯಿತ್ತು. ಆದರೆ ಹಾಗಾಗಲಿಲ್ಲ. ಅಂಬೇಡ್ಕರರ ಬೌದ್ಧಿಕ ಕ್ಷಮತೆ, ತೀಕ್ಷ್ಣ ಬರವಣಿಗೆ, ಹೃದಯ ತಟ್ಟುವ ಮಾತು, ಕರುಳು ಕೊರೆಯುವ ವಾಣಿ – ದಲಿತರಲ್ಲಿ ಹೊಸ ಉತ್ಸಾಹ ಮೂಡಿಸಿತು. ಪರಿಣಾಮ ಅಣ್ಣಾಭಾವು ಸಾಠೆ, ಅಮರಶೇಖ, ಕೇರುಬುವಾ, ವಾಮನ ಕರ್ಡಕ, ವಸಂತ ರಾಜಸನಂತಹ ಕವಿಗಳೆಲ್ಲ ಹೊಸ ಆಕಾಂಕ್ಷೆಯಿಂದ ಬರೆಯಲಾರಂಭಿಸಿದರು. 'Freedom is the recognition of necessity' ಎಂಬ ಏಂಗಲ್ಸ್ ವಿಚಾರಕ್ಕೆ ಮಹತ್ವ ಬಂತು. ಸ್ವಾತಂತ್ರ್ಯಾನಂತರ ಬಂದ ಮರಾಠಿ ಕತೆ, ಕವಿತೆಗಳು ಕ್ಷೀಣವಾಗಿದ್ದವು. ಹೊಸ ಕವಿತೆಯಂತೂ ಸಂಕೀರ್ಣ ಹಾಗೂ ಕ್ಲಿಷ್ಟವಾಗಿತ್ತು. ಅರಗಿಸಿಕೊಳ್ಳದಷ್ಟು ಜಡ. ಮಹಾಯುದ್ಧದ ಭಯಾನಕ ಪರಿಣಾಮವೂ ಇತ್ತು. 'ಹಿರೋಶಿಮಾ ಯುದ್ಧದ ನಂತರವಾದರೂ ಅರಳಿತು... ಆದರೆ ನಾವು ?' ಎಂಬ ಪ್ರಶ್ನೆಗೆ ಉತ್ತರ ಸಿಗದಾಯಿತು. ಇಂಥ ಕಾಲಕ್ಕೆ ತನ್ನನ್ನು ರಕ್ಷಣೆ ಮಾಡಿಕೊಳ್ಳುವುದು ಅಗತ್ಯವಾಗಿತ್ತು. ತನ್ನ ರಕ್ಷಣೆಗಾಗಿ ಹುಟ್ಟಿಕೊಂಡಿದ್ದೆ ವಿದ್ರೋಹಿ ಕವಿತೆ. ಹುಳ ಹಿಡಿದ ತಮ್ಮ ಬದುಕಿನ ಅನುಭವ ವನ್ನು ಪ್ರಾಣದಂತೆ ರಕ್ಷಿಸಿ, ಅದಕ್ಕೆ ಶಬ್ದದ ಮೂಲಕ ಅಭಿವ್ಯಕ್ತಿಪಡಿಸಲು ಈ ಕವಿಗಳು ತುಂಬಾ ಶ್ರಮಪಟ್ಟರು.

ಅಂಬೇಡ್ಕರರಿಗಿಂತ ಮೊದಲೇ ವಿದ್ರೋಹಿ ಕವಿತೆಯ ಬುನಾದಿ ಅಥವಾ ಅದರ ಬೇರುಗಳನ್ನು ಗುರುತಿಸಬಹುದಾಗಿದೆ. ಈ ಕವಿಗಳು ಗಾಂಧಿಯನ್ನು ಢೋಂಗಿ ಎಂದರು. ಮಹಾರರಿಗೆ ತಲುಪದ ವಿಠೋಬ ನಮಗೆ ಬೇಡವೆಂದರು. ವಸ್ತುಸ್ಥಿತಿಯ ಮೂಲ್ಯಾಂಕನ ಮಾಡುವ ಸಾಕಷ್ಟು ಕವಿತೆಗಳು ಆ ಕಾಲಕ್ಕೆ ಬಂದವು. ತಮ್ಮನ್ನು ದಯನೀಯ ಮಾಡಿದ ಧರ್ಮ ವ್ಯವಸ್ಥೆಯ ಮೇಲೆಯೇ ಪ್ರಹಾರ ಮಾಡಿದರು. ಅಂಬೇಡ್ಕರ ಚಳುವಳಿ ಅವರಲ್ಲಿ ಆತ್ಮಾಭಿಮಾನ, ಆತ್ಮಸಮ್ಮಾನ ಮೂಡಿಸಿತು. ವಿದ್ರೋಹಿ ಕವಿತೆಗೆ ಹಳೇ ಸಾಂಸ್ಕೃತಿಕ ಮೌಲ್ಯ, ವ್ಯವಸ್ಥೆ ಬೇಕಾಗಿರಲಿಲ್ಲ. ಅಷ್ಟೇ ಅಲ್ಲ, ಈ ಕವಿತೆ ಪಟ್ಟಭದ್ರ ಭಾಷೆಯನ್ನೂ ಸಹ ತಿರಸ್ಕರಿಸಿತು. ಬನಸೋಡ, ಢಸಾಳ, ಸಪಕಾಳೆ ಹೊಸ ಭಾಷೆಯನ್ನು, ಹೊಸ ಛಂದಸ್ಸನ್ನು, ಹೊಸ ವ್ಯಾಕರಣವನ್ನು ನಿರ್ಮಾಣ ಮಾಡಿದರು. ಹಳೇ ಕವಿತೆಗಳಲ್ಲಿಯ

## ಸಖ-ಸಖಿ

ರಂಗದ ತೆರೆಯ ಸರಿಸಿ ಪಕ್ಕಕ್ಕೆ
ಸರಿದು ನಿಲ್ಲುವ ಕವಿ
ಮಾತುಗಾರ
ಒನೆದು ತೊನೆದಾಡುವ ಎದೆ
ಗೊನೆಯ ಭಾರವನೊಂದು ಕಡೆ
ತೊಡೆ ತೊಟ್ಟಿಲು ತಪ್ಪಲು
ಮೈನವಿರು ಮಿಂಚು ಪುಳಕ
ಇನ್ನೊಂದು ಕಡೆ
ನಡುವೆ ಹೊಕ್ಕುಳು
ಬಳ್ಳಿ ಸಂಬಂಧವ ಸಮಗೊಳಿಸಿ
ತೃಣಭಾರ ಹಿಂಚು ಮುಂಚು ಮಾಡದೆ
ಗಣೆಯ ಮೇಲೆತ್ತಿ
ಎದೆಯಾನಿಸಿ ನಿಲ್ಲುವ ಗಣೆಗಾರ
ಅಲ್ಲಮ ಮೋಡಿಗಾರ
ಬಿಟ್ಟಗಣ್ಣು ನೆಟ್ಟಗಣ್ಣು
ಸ್ತಬ್ಧ ನಿಶ್ಶಬ್ದ
ಎದೆ ಬಡಿತದ ತಾಳ
ಮದ್ದಳೆ ಚಂಡೆಯಾಹ್ವಾನ
ಓಲೈಸಿ
ಮನಸ್ಸಿನಟ್ಟಣಿಗೆಗೆ ಇಳಿದು
ಬರುವಳು ಕನ್ಯೆ
ಕರೆದವನೆ ಸಖಿ ಧನ್ಯ
ಪ್ರತಿಮೆ ಸಂಕೇತಗಳಲಂಕಾರ
ಕಳಚಿ ಕವಿಗೆ ನೀಡುವಳು
ಎಳೆ ನಳಿದೋಳು ಚಾಚಿ
ಚಾಚಿ ತಬ್ಬುವಳಂತರಂಗವ
ಶಬ್ದಾರ್ಥಗಳೊಂದಾಗಿ ಝೇಂಕಾರ
ಸಖ-ಸಖಿಯರ
ಉಸಿರುಗಳೊಂದಾದ ಓಂಕಾರ.



ಎಸ್. ನಟರಾಜ ಬೂದಾಳು
ಕನ್ನಡ ಉಪನ್ಯಾಸಕ, ಸರ್ಕಾರಿ ಕಲಾ ಕಾಲೇಜು, ತುಮಕೂರು

ಟೊಳ್ಳುತನ ಬಯಲಿಗೆಳೆದರು. ಹೀಗಾಗಿ ವಿದ್ರೋಹಿ ಕವಿತೆ ಸಾಂಪ್ರದಾಯಿಕ, ಪರಂಪರಾಗತ ಕವಿತೆಗಳಿಗಿಂತ ತೀರಾ ಭಿನ್ನವಾಗಿ ಮೂಡಿಬಂದವು.

ಮರಾಠಿಯ ಉಪಲಬ್ಧ ಕವಿತೆಗಳು ಇತಿಹಾಸ, ಪುರಾಣ, ದೇವ, ದೇವತೆಗಳ ಸುಂದರ ಚಿತ್ರಣ ನೀಡುವ ಕೆಲಸ ಮಾಡಿದವು. ವಿದ್ರೋಹಕ್ಕೆ ಇದು ಹಿಡಿಸಲಿಲ್ಲ. ಇದು ಅದರ ಜಾಯಮಾನವೂ ಅಲ್ಲ. ಆದ್ದರಿಂದ ಅದು ತನ್ನ ಧಾಟಿ, ಲಯ, ಸ್ವರ, ವಸ್ತು ಎಲ್ಲವನ್ನೂ ಬದಲಾಯಿಸಿತು. 'ರೋಮ್ಯಾಂಟಿಕ್' ಮಾದರಿಯನ್ನು ತಿರಸ್ಕರಿಸಿತು. ತನ್ನ ಜಗತ್ತೇ ಬೇರೆ ಎಂದಿತು. 'ಕೆಳಸ್ತರದ ಜನರ ಆಕ್ರಂದನ'ವಾಗಿ, ನ್ಯಾಯ ಬೇಡುವ ಕವಿತೆಯಾಗಿ ಇದು ಹೊರ ಹೊಮ್ಮಿತು. ಬುದ್ಧ, ಚಾರ್ವಾಕ, ಮಾರ್ಕ್ಸ್, ಅಂಬೇಡ್ಕರ್, ಲೆನಿನ್, ಮಾವೋ, ಕಿಂಗ್ ಇವರಿಂದ ಪ್ರೇರಣೆ ಪಡೆಯಿತು. ಸಮಾಜ ವ್ಯವಸ್ಥೆ, ಉತ್ಪಾದನ ವ್ಯವಸ್ಥೆ, ವಿಚಾರ ವ್ಯವಸ್ಥೆ– ಇದರ ಬಗ್ಗೆ ಅಂತರ್ಮುಖಿಗೊಂಡು ಈ ಕವಿತೆ ಭಾಷ್ಯ ಮಾಡಲು ಸಿಡಿದು ನಿಲ್ಲುತ್ತದೆ. ಅಂತರ್ಗತ ವೈಚಾರಿಕತೆಯ ಒತ್ತಡಗಳ ಹುಡುಕಾಟ ನಡೆಸುವ, ವೈಶ್ವಿಕ ವಿಚಾರಧಾರೆಯ ಆಕಾರ ಪಡೆಯುವ ಚೇತನದ ಗಂಭೀರ ಚಿಂತನೆಯ ಮೌಲ್ಯ ಒಪ್ಪಿಕೊಳ್ಳುವ ಈ ವಿದ್ರೋಹಿ ಕವಿತೆ ಮರಾಠಿ ಕಾವ್ಯ ಪ್ರಪಂಚದಲ್ಲೇ ಅಪೂರ್ವವಾಗಿದೆ. ವ್ಯಕ್ತಿಗತ ಮೌಲ್ಯವನ್ನು ಎಚ್ಚರಿಸುವ ಜೊತೆಗೆ ಸಾಮುದಾಯಿಕ ವ್ಯಾಪ್ತಿಯನ್ನು ಪಡೆದುಕೊಂಡ ಕವಿತೆಯನ್ನು ವಿದ್ರೋಹಿ ಕವಿ ರಚಿಸುತ್ತಿದ್ದಾನೆ. ಬಹಿಷ್ಕೃತಗೊಂಡ ದಲಿತರ, ಶ್ರಮಿಕ ವರ್ಗದ, ದೇಹ ವಿಕ್ರಯ ಮಾಡುವ ಹೆಣ್ಣುಗಳ, ಹಾಗೆಯೇ ಹೋಟೇಲು, ಕಳ್ಳಭಟ್ಟಿ, ಕಳ್ಳಸಂತೆ, ಜೂಜುಕೋರ ಜಗತ್ತಿನ ಬಗ್ಗೆ ಇಂಥ ಅಸಂಖ್ಯ ಅನುಭವಗಳ ಬಗ್ಗೆ ವಿದ್ರೋಹಿ ಕವಿತೆ ಮಾತಾಡುತ್ತದೆ. ಒಂದರ್ಥದಲ್ಲಿ ಇದು ಬಹುಜನ ಸಮಾಜದ 'ಬಹುರೂಪಿ' ಕವಿತೆಗಳು.

ಕಳೆದ ಐದು ದಶಕಗಳ ಕಾಲದಿಂದ ವಿದ್ರೋಹಿ ಕವಿತೆ ತನ್ನ ನಿಜವಾದ ಸತ್ವವನ್ನು ಪ್ರಕಟಪಡಿಸಿದೆ. ಅದರ ಬೆಳವಣಿಗೆ, ತೀವ್ರತೆ, ಮೌಲಿಕತೆ ಬೆರಗುಗೊಳಿಸುವಂತಹುದು. ಇಂಥ ನೂರಾರು ಕವಿತೆಗಳು ಗಮನ ಸೆಳೆಯುವಷ್ಟು ಸಶಕ್ತವಾಗಿವೆ. ವಿದ್ರೋಹದ ವ್ಯಾಪಕ ಅರಿವು ಅವರಿಗಿದೆ. ಭದ್ರವಾದ ಸೈದ್ಧಾಂತಿಕ ಬುನಾದಿಯೂ ಇದೆ. ಆತ್ಮವಿಶ್ವಾಸವಂತೂ ಇದ್ದೇ ಇದೆ. ಕೆಲವು ವಿದ್ರೋಹಿ ಕವಿಗಳು ಶಬ್ದಗಳ ಆಯ್ಕೆ ಬಗ್ಗೆ ಎಚ್ಚರ ವಹಿಸಿದ್ದಾರೆ. ಪ್ರತಿಮೆ-ಪ್ರತೀಕ, ಶಬ್ದ ಸಂಕರ, ಅನ್ವಯಾರ್ಥದ ಬಗೆಗೂ ಅವರಲ್ಲಿ ಪ್ರಜ್ಞೆಯಿದೆ. ಈ ಕವಿತೆಗಳು ಬದುಕಿನ ವಿವಿಧ ಅಂಗಗಳನ್ನು, ವ್ಯಂಗ್ಯವನ್ನು ಯಥಾರ್ಥವಾದ ಪದ್ಧತಿಯಿಂದ ಮಂಡಿಸುತ್ತವೆ. ಸುಸಂಸ್ಕೃತಿಯ ಕನಸು ಸಾಕಾರ ಗೊಳಿಸಲು ಸ್ವಯಂ ನಿರ್ಮಿತಿಯ ಕೃತಿಯನ್ನು ಸಂವರ್ಧನ ಗೊಳಿಸಲು, ಕಾಲಬಾಹ್ಯ ವಿಕೃತಿಯ ಮೇಲೆ ಹಲ್ಲೆ ಮಾಡಲು ಈ ವಿದ್ರೋಹಿ ಕವಿತೆಗಳು ಸತತ ಪ್ರಯತ್ನ ಶೀಲವಾಗಿವೆ. ಎಲ್ಲವನ್ನೂ ಪರಿವರ್ತನೆಯ ದಿಶೆಯತ್ತ ಎಳೆದೊಯ್ಯುವುದು ಈ ಕವಿತೆಯ ಆದ್ಯ ಕರ್ತವ್ಯವಾಗಿದೆ. ಅದು ತನ್ನನ್ನು ಈ ಅಗ್ನಿಪರೀಕ್ಷೆಗೊಡ್ಡಿಕೊಳ್ಳುತ್ತದೆ.

ವಿದ್ರೋಹಿ ಕವಿತೆಯ ಭಾಷೆ ಹೊಸತು. ಅಪರಿಚಿತ ಧಾಟಿಯದು. ಕೆಲವೊಮ್ಮೆ ಕ್ಲಿಷ್ಟಕರವಾದದ್ದು. ಆ ಕವಿತೆಯ ವ್ಯಾಕರಣ ಅರ್ಥಮಾಡಿಕೊಳ್ಳುವುದು ಕಷ್ಟ. ಇಷ್ಟಾಗಿಯೂ ಅದು ಬಹುಜನ ಸಮಾಜವನ್ನು ತಬ್ಬಿಕೊಂಡಿದೆ. ಸವರ್ಣೀಯರಿಗೆ ಅರ್ಥವಾಗದ, ಅಪರಿಚಿತವಾದ ಈ ಭಾಷೆ ಬಹುಜನ ಸಮಾಜಕ್ಕೆ ತೀರಾ ಪರಿಚಯದ್ದಾಗಿದ್ದು ಗಮನಿಸಬೇಕಾದ ಅಂಶ. ಈ ಕವಿತೆಗಳ ಅರ್ಥ ನಿಘಂಟುವಿನಲ್ಲಿ ಹುಡುಕಿದರೆ ನಿರಾಶೆಯಾದೀತು. ಅರ್ಥ ಕಂಡುಕೊಳ್ಳಬೇಕಾದರೆ ಆ ಸಮಾಜದ ಒಡನಾಟದಲ್ಲಿರಬೇಕು. ನಾಮದೇವ ಢಸಾಳರ 'ಗೋಲಪೀಠಾ' ಎಂಬ ಕವಿತಾ ಸಂಗ್ರಹ ಹೊರಬಂದಾಗ ಸವರ್ಣೀಯ ಸಮಾಜ ಬೆಚ್ಚಿ ಬಿದ್ದದ್ದಷ್ಟೇ ಅಲ್ಲ ಆಘಾತದಿಂದ ಚೇತರಿಸಿಕೊಳ್ಳಲು ಕೆಲವು ವರ್ಷಾನೇ ಹಿಡಿಯಿತು. ಹೀಗಾಗಿ ವಿದ್ರೋಹಿ ಕವಿತೆಯೊಳಗಿನ ಪ್ರಶ್ನೆ, ಆಹ್ವಾನ, ಬಿಕ್ಕಳಿಕೆ, ಪ್ರಕ್ಷುಬ್ಧತೆ ಹಾಗೂ ಸ್ಫೋಟಕ ಶಕ್ತಿ ಅರ್ಥಮಾಡಿಕೊಳ್ಳಲು ರಸಗ್ರಹಣ ಮಾಡಿಕೊಳ್ಳಲು ಹೊಸ ವಿಮರ್ಶಾ ಮಾನದಂಡವೇ ಬೇಕಾಗುತ್ತದೆ. ಹಳೇ ಕಾವ್ಯಮೀಮಾಂಸೆ, ರಸಗ್ರಹಣ ಪದ್ಧತಿ, ಸಮೀಕ್ಷಾ ವಿಧಾನ, ಈ ಕವಿತೆಗಳ ಅನ್ವಯಾರ್ಥ ಹಚ್ಚುವಲ್ಲಿ, ವಿವರಿಸುವಲ್ಲಿ ಸೋಲುತ್ತವೆ. ಕೆಲವೊಮ್ಮೆ ಆ ವಿಮರ್ಶೆಯೇ ತಬ್ಬಿಬ್ಬುಗೊಳ್ಳುತ್ತದೆ.

ವಿದ್ರೋಹಿ ಕವಿತೆ ಯಾವ ರಕ್ತ-ಮಾಂಸ, ವೀರ್ಯದಿಂದ, ಬೆವರು-ಶ್ರಮದಿಂದ ರೂಪಗೊಂಡಿದೆಯೋ ಅದರ ಅರಿವು, ಎಚ್ಚರ ಅತ್ಯಗತ್ಯ. ಮಾನವೀಯ ಜೀವನದ ಎಲ್ಲ ಆಯಾಮಗಳನ್ನು, ಮಗ್ಗಲುಗಳನ್ನು ಅದು ತನ್ನಲ್ಲಿ ಗರ್ಭೀಕರಿಸಿಕೊಂಡಿದೆ. ಈ ಕವಿತೆಯ ಪಿಂಡವೇ ಆಕ್ರಮಣಕಾರಿ ಪ್ರವೃತ್ತಿಯದು. ಹೀಗಾಗಿ ಅದು ಸದಾ ಕಾಲ ಯುದ್ಧದ ಸಿದ್ಧತೆಯಲ್ಲೇ ಮಾತನಾಡುತ್ತದೆ, ಯುದ್ಧವೇ ಅದರ ಸ್ಥಾಯೀಭಾವ. ರಷಿಯನ್ ಕವಿತೆ, ನೀಗ್ರೋ ಕವಿತೆ, ಈ ಮಾದರಿಯವು. ಅಲ್ಲಿಯ ಕವಿತೆಗಳು ಇಲ್ಲಿಯಕ್ಕಿಂತಲೂ ಹೆಚ್ಚು ಆಕ್ರಮಕ ಹಾಗೂ ಕ್ರಾಂತಿಕಾರಿ. ಅದಕ್ಕೆ ಅಲ್ಲಿಯ ನೆಲದ ಗುಣವೇ ಕಾರಣ.

ವಿದ್ರೋಹ ಎಂಬ ಶಬ್ದದಲ್ಲಿ ಹೋರಾಟ, ಸಂಘರ್ಷ, ಬಂಡುಕೋರತನ – ವಿವಿಧ ಅರ್ಥ ಒಳಗೊಂಡಿದೆ. ಈ ಶಬ್ದ ಚಲನಶೀಲ ಗುಣವನ್ನು ಹೊಂದಿದೆ. ಪರಿವರ್ತನೆಯನ್ನೂ ಸೂಚಿಸುತ್ತದೆ. ಕೊನೆಗೆ ಮಾನವನನ್ನು ಪರಿಪೂರ್ಣತೆಯ ಕಡೆಗೆ ಒಯ್ಯುವ ಶಕ್ತಿಯನ್ನು ಅದು ಪಡೆದಿದೆ ಎಂಬುದರಲ್ಲಿ ಎರಡು ಮಾತಿಲ್ಲ.

ಇತ್ತೀಚೆಗೆ ಮರಾಠಿಯ ವಿದ್ರೋಹ ಸಾಹಿತ್ಯ ಸಮ್ಮೇಳನ ಚುರುಕುಗೊಂಡಿದೆ. ಕನ್ನಡದಲ್ಲಿ ಬಂಡಾಯ ತಣ್ಣಗಾಗುತ್ತಿರುವ ಸಂದರ್ಭ, ಮರಾಠಿಯ ವಿದ್ರೋಹಿ ಸಾಹಿತ್ಯ ಹೊಸ ದಿಗಂತವನ್ನು ಹುಡುಕುವ ಪ್ರಯತ್ನ ನಡೆಸುತ್ತಿದೆ. ಕನ್ನಡದ ದಲಿತ ಸಾಹಿತ್ಯ ಮರಾಠಿಯ ದಲಿತ ಸಾಹಿತ್ಯದ ಪ್ರೇರಣೆಯನ್ನು ಪಡೆದುಕೊಂಡಂತೆ ವಿದ್ರೋಹದ ಪ್ರೇರಣೆ ಪಡೆದರೆ, ಜಡಗೊಳ್ಳುತ್ತಿರುವ ಚಲನಶೀಲತೆ ಕಳೆಕೊಳ್ಳುತ್ತಿರುವ ಕನ್ನಡ ಕಾವ್ಯ ಪ್ರಪಂಚಕ್ಕೆ ಹೊಸದಿಕ್ಕು ಸಿಗುವ ಸಾಧ್ಯತೆಯಿದೆ. ಈ ದಿಸೆಯಲ್ಲಿ ಕನ್ನಡದ ಬಂಡಾಯ ಸಂಘಟನೆ ಮತ್ತೊಮ್ಮೆ ಯೋಚಿಸಲಿ.

**ಚಂದ್ರಕಾಂತ ಪೋಕಳೆ**
ಬಿ. ಎಸ್. ಪಿ. ಯು. ಕಾಲೇಜು, ಬೇಡಕಿಹಾಳ - ೫೯೧೨೧೪



ಸ್ವಾತಂತ್ರ್ಯಪೂರ್ವದಿಂದಲೂ ಗೇಣಿ ಪದ್ಧತಿ ಜಾರಿಯಲ್ಲಿತ್ತು. ಗೇಣಿ ಪದ್ಧತಿಯಿಂದ, ಭೂಹೀನ ರೈತರಿಗೆ ಆಗುತ್ತಿದ್ದ ಶೋಷಣೆ ಯಾವ ಪ್ರಮಾಣದ್ದು ಎಂಬುದರ ನಿಜ ಚಿತ್ರಣವನ್ನು 'ಕೊಳಗ' ಎಂಬ ಕಾದಂಬರಿಯ ಮೂಲಕ ಕರ್ನಾಟಕದ ಪರಿಚಿತ ಲೇಖಕರಾದ ಗೆಳೆಯ ನಾ. ಡಿಸೋಜ ಕಣ್ಣಿಗೆ ಕಟ್ಟುವಂತೆ ಓದುಗರ ಮುಂದೆ ಇಟ್ಟಿದ್ದಾರೆ. ಅವರು ಶೋಷಣೆಯ ಪರಮಾವಧಿ ಅನುಭವಿಸುತ್ತಿದ್ದ ಸಾಗರ ತಾಲೂಕಿನ ಕಾಗೋಡಿನ ಸುತ್ತನ ಹಳ್ಳಿಗಳ ದೀವರ ಸಮಾಜದ ನತದೃಷ್ಟರನ್ನು ಗಮನದಲ್ಲಿಟ್ಟುಕೊಂಡು ಈ ಕಾದಂಬರಿ ರಚಿಸಿದ್ದಾರೆ. ದೀವರದು ಹರಿಜನರಿಗಿಂತ ಹೆಚ್ಚಿನ ಶೋಷಿತ ಜೀವನ. ಉಪೇಕ್ಷೆಗೆ ಒಳಗಾದ ಜೀವನ. 'ಕೊಳಗ' ಕಾದಂಬರಿ ನನ್ನ ಮೆಚ್ಚಿನ ಪುಸ್ತಕ. ಸ್ವಾತಂತ್ರ್ಯಪೂರ್ವದ ಆ ನತದೃಷ್ಟ ಜನರ ಬವಣೆಯನ್ನು ಕುರಿತು ಅವರು ವಿವರವಾಗಿ, ವಿಸ್ತಾರವಾಗಿ, ಕಣ್ಣಿಗೆ ಕಟ್ಟುವಂತೆ ಬರೆದಿರುವ ಈ ನೈಜ ಚಿತ್ರಣ ಹೃದಯ ಕಲಕುತ್ತದೆ. ಬಹುಕಾಲದಿಂದ ತುಳಿತಕ್ಕೆ ಒಳಗಾಗಿ, ಭೂ ಒಡೆಯರ ದೌರ್ಜನ್ಯ, ಅಮಾನವೀಯತೆ, ತಾತ್ಸಾರಗಳಿಗೆ ಬಲಿಯಾದ ಆ ಜನರು ಪಟ್ಟ ಪಾಡನ್ನು ಡಿಸೋಜ ಅವರು ಸವಿಸ್ತಾರವಾಗಿ ಬಿಡಿಸಿ ಬಿಡಿಸಿ ಹೇಳಿದ್ದಾರೆ. ಅದು ಪ್ರಜ್ಞಾವಂತರನ್ನೂ, ಮಾನವೀಯತೆ ಉಳ್ಳವರನ್ನೂ, ಪಾಪಪ್ರಜ್ಞೆ ಇರುವವರನ್ನೂ ದುಗುಡಕ್ಕೆ ಈಡುಮಾಡುತ್ತದೆ. ಇಂತಹ ಕ್ರೂರಿ ಸಮಾಜದಲ್ಲಿ ನಾಯಿಹಂದಿಗಳಂತೆ ಬಾಳುವೆ ಮಾಡಿದ ಆ ನತದೃಷ್ಟರ ಕಷ್ಟಕೋಟಲೆಗಳನ್ನು ಓದಿ ಮಮ್ಮಲ ಮರುಗುವಂತೆ ಮಾಡುತ್ತದೆ. ನಮ್ಮ ಭೂಒಡೆಯರು ರಕ್ಕಸರಂತೆ ನಡೆದುಕೊಂಡರು ಎಂಬ ಐತಿಹಾಸಿಕ ಸತ್ಯವನ್ನು ಓದಿ, ಮನಸ್ಸು ಕೊತಕೊತನೆ ಕುದಿಯುತ್ತದೆ.

ಅಂದಿನ ವ್ಯವಸ್ಥೆ ಹಾಗಿತ್ತು. ಊರಿಗೊಬ್ಬ ಜಮೀನುದಾರ. ಅವನಿಗೆ ಆ ಊರಿಗೆ ಸೇರಿದ ೪೦೦-೫೦೦ ಎಕರೆ ಜಮೀನು. ಆ ಜಮೀನನ್ನು ಅವನು ತಲಾ ೫-೧೦ ಎಕರೆಯಂತೆ ಭೂಮಿ ಇಲ್ಲದ, ಬೇರೆ ಆಸರೆ ಇಲ್ಲದ ಜನಕ್ಕೆ ಗೇಣಿಗೆ ಕೊಡುತ್ತಿದ್ದ. ಅವರು ವ್ಯವಸಾಯ ಮಾಡಿ ಭೂಮಾಲೀಕನಿಗೆ ವರ್ಷಂಪ್ರತಿ ಎಕರೆಗೆ ೧೦ ಚೀಲ ೧೨ ಚೀಲ ಭತ್ತ ಕೊಡಬೇಕು. ಚೀಲ ಭತ್ತ ಎಂದರೆ ಸರ್ಕಾರಿ ಕೊಳಗದಲ್ಲಿ ಅಳೆದರೆ ೬೦ ಸೇರು. ಆದರೆ ಭೂಒಡೆಯ ಅಳೆಸಿಕೊಳ್ಳುವುದು ತನ್ನದೇ ಆದ ಮರದಿಂದ ಮಾಡಿದ ದೊಡ್ಡ ಕೊಳಗದಲ್ಲಿ. ಆ ಕೊಳಗದಲ್ಲಿ ಅಳತೆ ಮಾಡುವುದರಿಂದ ಒಡೆಯನಿಗೆ ಲಭ್ಯವಾಗುವುದು ಪ್ರತಿ ಚೀಲಕ್ಕೆ ೮೦ ಸೇರು. ಬೀಜಕ್ಕೆ ಕೊಟ್ಟ ಭತ್ತ, ಸಾಲವಾಗಿ ಪಡೆದ ಭತ್ತ ಇವುಗಳನ್ನು ಒಡೆಯರು ಸರ್ಕಾರಿ ಕೊಳಗದಲ್ಲಿ ಅಳೆದುಕೊಟ್ಟು, ವಾಪಸ್ಸು ಪಡೆಯುವಾಗ ಹುಲಿ ಭತ್ತ ಸಹಿತ (ಬಡ್ಡಿ) ತಮ್ಮ ಮರದ ಕೊಳಗದಲ್ಲಿ ಅಳೆಸಿಕೊಳ್ಳುತ್ತಿದ್ದರು. ಇದು ಯಾಕೆ ಹೀಗೆ? ಇದು ನ್ಯಾಯವೇ, ಧರ್ಮವೇ ಎಂದು ಕೇಳಲೂ ಗೇಣಿದಾರನಿಗೆ ಅಂಜಿಕೆ, ಹೀಗೆ ನಾವು ಕೇಳಿದರೆ ಜಮೀನು ಬಿಡಿಸಿದರೆ ಏನು ಗತಿ? ಮುಂದೆ ಜೀವನ ನಡೆಸುವುದು ಹೇಗೆ? ಈ ಅಳುಕು ಅವರಿಗೆ. ಇದನ್ನು ವಂಶಪಾರಂಪರ್ಯವಾಗಿ ೫೦-೧೦೦ ವರ್ಷಗಳಿಂದ ಅನುಭವಿಸುತ್ತಾ ಬಂದಿದ್ದರು. ಈ ಲೋಕ ವ್ಯವಹಾರ ತಿಳಿಯದ, ತಿಳಿದರೂ ಏನೂ ಮಾಡಲಾಗದ ಈ ಅಸಹಾಯಕ ಮುಗ್ಧ ಜನ.




ಪುಟ : ೨೩೮ ಬೆಲೆ : ರೂ. ೭೫

ಗೀತಾ ಬುಕ್ ಹೌಸ್, ಮೈಸೂರು

ಇದು ಒಂದು ವಿಧದ ಶೋಷಣೆಯಾದರೆ, ಎಲ್ಲ ಗೇಣಿ ಹಿಡಿದವರೂ, ಮನೆಮಂದಿ ಸಮೇತವಾಗಿ ಮಾಲಕರು ಹೇಳಿದ ಕೆಲಸ ಮಾಡಲು, ಅರ್ಥಾತ್ 'ಬಿಟ್ಟಿ ಕೆಲಸ' ಮಾಡಲು ದಿನಾ ಹಾಜರಾಗಬೇಕು. ಹುಡುಗರನ್ನು ಶಾಲೆಗೆ ಕಳಿಸಬೇಕು ಎಂದು ಗೇಣಿದಾರರು ಯಾರಾದರೂ ಆಶಿಸಿದರೆ, ಹಾಗೆ ಮಾಡಿದವರನ್ನು ಗುರುತಿಸಿ, ಅವರನ್ನು ದಂಡಿಸಿ, ಅಂತಹ ಹುಡುಗರನ್ನು ಶಾಲೆ ಬಿಡಿಸಿ, 'ಬಿಟ್ಟಿ' ಕೆಲಸಕ್ಕೆ ಬರಲು ತಾಕೀತ್ ಮಾಡುತ್ತಿದ್ದರು. ''ಓಹೋಹೋ, ನಿನ್ನ ಮಗ ವಕೀಲ ಆಗಬೇಕು ನೋಡು. ಅಲ್ಲೋ; ವಿದ್ಯೆ ನಿಮ್ಮ ತಲೆಗೆ ಹತ್ತುತ್ತೇನ್ರೋ ?'' ಹೀಗೆ ಛೇಡಿಸುತ್ತಿದ್ದರು.''ನಾಳೆಯಿಂದ ನಿನ್ನ ಮಗ 'ಬಿಟ್ಟಿ'ಗೆ ಬರಬೇಕು. ನಮ್ಮ ಮನೆಯಲ್ಲಿ ಚೂರುಪಾರು ಕೆಲಸ ಮಾಡಿಕೊಂಡು ಬಿದ್ದಿರಲಿ. ಅವನು ವಕೀಲನೋ, ಇಂಜಿನಿಯರೋ ಆಗಿ ಪ್ರಪಂಚಾನ ಉದ್ಧಾರ ಮಾಡೋದು ಬೇಡ. ನಾ ಹೇಳಿದ್ದು ಕೇಳಿಸ್ಕೊಂಡ್ಯಾ?'' ಎಂದು ಗುಟುರು ಹಾಕುವರು ಧಣಿಗಳು. ಧಣಿಗಳು ಇದ್ದದ್ದು ಅರಮನೆ. ಈ ಗೇಣಿದಾರ ನತದೃಷ್ಟರು ಇರುತ್ತಿದ್ದದ್ದು ಸೋನೆ ಮನೆ – ಅರ್ಥಾತ್ ಹಂದಿಗೂಡು. ಗೇಣಿದಾರರಿಗೆ ಗೇಣಿ ಅಳೆದ ಮೇಲೆ, ಹಿಂದಿನ ವರ್ಷದ ಸಾಲ ತೀರಿಸಿದ ಮೇಲೆ ಉಳಿಯುತ್ತಿದ್ದುದು ೨ – ೩ ತಿಂಗಳಿಗೆ ಆಗುವಷ್ಟು ಧಾನ್ಯ ಮಾತ್ರ. ಊಟಕ್ಕೇ ಇಷ್ಟು ಕಷ್ಟವಾದರೆ ಇನ್ನು ಇರುವ ಗೂಡನ್ನು ವಾಸಕ್ಕೆ ಯೋಗ್ಯವಾಗಿ ಮಾಡಿಕೊಳ್ಳಲು ಹಣವನ್ನೆಲ್ಲಿಂದ ತರುವುದು ? ಕಾಡಿನಿಂದ ಹಲಸಿನ ಹಣ್ಣು ಕಿತ್ತು ತಂದು, ತಿಂದು ಒಂದೆರಡು ತಿಂಗಳು ಕಾಲ ತಳ್ಳುವುದು ಅವರಿಗೆ ಅನಿವಾರ್ಯವಾಗಿತ್ತು.

ಇದಿಷ್ಟೇ ಅಲ್ಲ. ಒಡೆಯರ ಚೆಲ್ಲಾಟಕ್ಕೆ ಗೇಣಿದಾರರ ಮನೆಯಲ್ಲಿ ಸ್ವಲ್ಪ ಲಕ್ಷಣವಾದ, ಮೈಕಟ್ಟು ಇರುವ, ಕಣ್ಣು ಮೂಗು ನೇರವಾಗಿರುವ ಹೆಣ್ಣುಮಕ್ಕಳಿದ್ದರೆ ಅವರನ್ನು ಮಾಲೀಕರ ಬಲಿಪಶು ಮಾಡಲು ತಯಾರಿರಬೇಕು. ಅವರನ್ನು ಒಪ್ಪಿಸಲು ತಯಾರಿಲ್ಲವಾದರೆ ಗೇಣಿ ಜಮೀನನ್ನು ಮಾಲೀಕರಿಗೆ ಒಪ್ಪಿಸಿ, ಊರುಬಿಟ್ಟು ಹೋಗಬೇಕು. ಭೂಮಾಲೀಕರು, ಕೈಯಲ್ಲಿ ಚರ್ಮದ ಚಲಕ (ಚಬಕ) ಹಿಡಿದುಕೊಂಡೇ ಓಡಾಡುತ್ತಿದ್ದರು. ಬೆತ್ತದ ಧಣಿಗಳೆಂದೇ ಕೆಲವರು ಪ್ರಸಿದ್ಧರಾಗಿದ್ದರು. ಅಟ್ಟಿಸಿಕೊಂಡು ಹೋಗಿ, ಗೇಣಿದಾರರನ್ನು ಅವನ ಮನೆ ಮಂದಿಯನ್ನು ಬೆತ್ತ ಮುರಿಯುವವರೆಗೆ ಹೊಡೆದು ಅವರ ಮೈ ತುಂಬ ರಕ್ತ ಹೆಪ್ಪುಗಟ್ಟುವ ಹಾಗೆ ಮಾಡುತ್ತಿದ್ದರು.

ಈ ಗೇಣಿದಾರರಲ್ಲಿ ಕೆಲವರು ಶ್ಯಾನುಭೋಗರನ್ನು ಕಂಡು ಒಂದೆರಡು ಎಕರೆ ಸರ್ಕಾರಿ ಜಮೀನು ಪಡೆಯಲು ಪ್ರಯತ್ನ ಮಾಡಿದರೆ, ಈ ವಿಷಯ ತಿಳಿದ ಮಾಲೀಕರು 'ಏನ್ರೋ ಸೋತಂತ್ರ ಬೇಸಾಯ ಮಾಡಬೇಕೇನೋ ?' ಎಂದು ಕೆಕ್ಕರಿಸಿ ನೋಡಿ, ಬೆತ್ತಲೆ ಮಾಡಿ ನಿಲ್ಲಿಸಿ, ಚಾಟೀ ಏಟು ಕೊಡುತ್ತಿದ್ದರು.

ಮಾಲೀಕರು ಕಾಣಿಸಿಕೊಂಡಾಗ ಕಾಲ ಮೇಲೆ ಕಾಲು ಹಾಕಿಕೊಂಡು ಕೂಡುವುದು ಅಪರಾಧ. ಉದ್ದದ ಪಂಚೆ ಉಡುವುದು ಅಪರಾಧ. ಮೊಣಕಾಲ ಮೇಲೆ ಮಾತ್ರ ಪಂಚೆ ಉಡಬೇಕು. ಇಂತದೇನಾದರೂ ನೋಡಿದರೆ ಮುಗಿಯಿತು ಅವನ ಕತೆ. ಅವರು ಚಾಟಿ ಬೀಸಿದರೆ ಆ ಏಟಿಗೆ ಸಪೂರ ಕಾಲ ಮೀನುಖಂಡ ಹೊರಬರುತ್ತಿತ್ತು.

ಗೇಣಿಯವರ ಮಕ್ಕಳು ಜಾತ್ರೆ, ರಥೋತ್ಸವಗಳಿಗೆ ಹೋಗಿ ಹಾಯಾಗಿ ಹೊತ್ತು ಕಳೆದು, ಅದೇ ಗುಂಗಿನಲ್ಲಿ ಹರಟೆ ಹೊಡೆಯುತ್ತಾ ಊರಿಗೆ ಹಿಂತಿರುಗಿದಾಗ, ದಾರಿಯಲ್ಲಿ ಇದನ್ನು ಒಡೆಯರು ಕಂಡರೆ 'ಬೋಸುಡಿ ಮಕ್ಕಳಾ, ನಿಮಗೆ ಉದ್ದಾನೆ ಪಂಚೆ ಯಾರೋ ಕೊಟ್ಟದ್ದು ? ಹೀಗೆ ಉದ್ದಾನೆ ಪಂಚೆ ಉಡಾಕ್ಕೆ ನೀವೇನು ಗೌಡರ ಮಕ್ಕಳೆ? ನಿಮಗೆ ಇಷ್ಟು ಪೊಗರು ಬಂತೇನ್ರೋ ಲೌಡಿ ಮಕ್ಕಳ!'' ಎಂದು ಗದರಿಸಿ ಬೆತ್ತದಿಂದ ಬಿಗಿಯುತ್ತಿದ್ದರು.

ಭತ್ತದ ಕಾಳಿನಲ್ಲಿ ಹಾಲು ಕೂಡಿಕೊಂಡ ದಿನದಿಂದ ಪೈರು ಕಟಾವಾಗುವವರೆಗೂ ಗದ್ದೆ ಕಾಯಬೇಕು. ಇಲ್ಲವಾದರೆ ರಾತ್ರಿಯ ಹೊತ್ತು ಕಾಡುಹಂದಿ, ಮುಳ್ಳುಹಂದಿ ಬಂದು ಎಲ್ಲ ತಿಂದು ಹೋಗುತ್ತದೆ. ಹಾಗೆ ಕಾವಲು ಕಾಯುವಾಗ ಹಂದಿಯ ಕೋರೆ ಹಲ್ಲಿಗೆ ಸಿಕ್ಕಿ ಬೆನ್ನು ಎರಡು ಹೋಳಾಗುತ್ತಿತ್ತು. ಬೆರಳುದ್ದದ, ಗೇಣುದ್ದದ ಗಾಯ ಆಗುತ್ತಿದ್ದವು. ಹಂದಿಯ ಕೋರೆ ಹಲ್ಲು ಚೆನ್ನಾಗಿ ನಾಟಿರುತ್ತಿತ್ತು. ರಕ್ತ ಸುರಿದು ಹರಿದು ಅದು ಮಡುಗಟ್ಟುತ್ತಿತ್ತು. ಇದನ್ನು ವಾಸಿಮಾಡಿಕೊಳ್ಳಲು ಸಾಗರದ ಆಸ್ಪತ್ರೆಗೆ ಗಾಡಿ ಕಟ್ಟಿಕೊಂಡು ಹೋಗಬೇಕಾಗುತ್ತಿತ್ತು. ಔಷಧಿ, ಊಟ, ತಿಂಡಿ ಅಂತ ಸಾಲ ಮಾಡಬೇಕಾಗುತ್ತಿತ್ತು. ಆ ಸಾಲ ಕೊಡುವುದಕ್ಕೂ ಗೇಣಿದಾರರಲ್ಲಿ ಯಾರಿಗೂ ತಾಕತ್ತಿಲ್ಲ. ಅದಕ್ಕೂ ಒಡೆಯರ ಬಳಿಯೇ ಹೋಗಿ ಯಾಚಿಸಬೇಕು. ಒಂದೈವತ್ತು ರೂಪಾಯಿ ಅವರ ಕೈಲಿಟ್ಟು ''ಸುಗ್ಗಿಯಲ್ಲಿ ಈ ಸಾಲ ತೀರಿಸಲು ಮರೆಯಬೇಡ'' ಎಂಬ ಎಚ್ಚರಿಕೆಯ ಮಾತನ್ನಾಡಿಯೇ ಕಳಿಸುತ್ತಿದ್ದರು.



ಸ್ವಾತಂತ್ರ್ಯ ಬಂತು. ಭೂಸುಧಾರಣೆ ಮಾತು ಹೊರಟಿತು. ಜಮೀನ್ದಾರಿ ಪದ್ಧತಿಯನ್ನು ಭಾರತ ಸರ್ಕಾರ ರದ್ದು ಮಾಡಿತು. ಹತ್ತಾರು ಸಾವಿರ ಎಕರೆ ಜಮೀನುಳ್ಳವರು ತಮ್ಮ ಜಮೀನು ಕಳೆದುಕೊಂಡರು. ಅದರೊಂದಿಗೇ ಅವರು ಜನರ ಮೇಲೆ ನಡೆಸುತ್ತಿದ್ದ ಶೋಷಣೆಯ ಸರ್ವಾಧಿಕಾರ ಕಳೆದುಕೊಂಡರು. ಕರ್ನಾಟಕದಲ್ಲೂ ಭೂಸುಧಾರಣೆಯ ಮಾತು ಪ್ರಚಾರಕ್ಕೆ ಬಂತು. ಕಡಿದಾಳ್ ಮಂಜಪ್ಪ, ಬಸವಾನಿ ರಾಮಶರ್ಮ, ಗಣಪತಪ್ಪ ಕೂಡಿ ಕೊಂಡು ಇನಾಂ ರದ್ದಿಯಾತಿಯ ಮಾತನ್ನಾಡಲು ಆರಂಭ ಮಾಡಿದರು. ರೈತ ಸಂಘ ಕಟ್ಟಿ ಮೊದಲು ಮಲೆನಾಡು ಪ್ರದೇಶಗಳಾದ ಶಿವಮೊಗ್ಗ, ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಪ್ರಚಾರ ಕಾರ್ಯ ಕೈಗೊಂಡರು. ಆದರೆ ಕಡಿದಾಳರು ಸರ್ಕಾರ ಹಿಡಿದಿದ್ದ ಕಾಂಗ್ರೆಸ್‌ನವರೇ ಆಗಿದ್ದು, ರೈತರನ್ನು ಸರ್ಕಾರದ ವಿರುದ್ಧ ಸಂಘಟನೆ ಮಾಡುವುದು ತಾವು ನಂಬಿದ್ದ ಸಂಸ್ಥೆಯ ನಿಷ್ಠೆಗೆ ಧಕ್ಕೆ ಬರಬಹುದೆಂದು ತಿಳಿದು, ಚಳುವಳಿಯ ಮಾರ್ಗವನ್ನು ಮುಂದುವರಿಸಲಿಲ್ಲ. ಆದರೆ ಇವರು ಆರಂಭ ಮಾಡಿದ ರೈತ ಸಂಘದ ಕೆಲಸ ಕಾರ್ಯ ಗಳನ್ನು ಬಸವಾನಿ ರಾಮಶರ್ಮ ಮತ್ತು ಗಣಪತಿಯಪ್ಪ ಮುಂದುವರಿಸಿಕೊಂಡು ಹೋದರು. ಸಾಗರ ತಾಲೂಕಿನ ಗೇಣಿದಾರರು, ಭೂ ಒಡೆಯರ ಶೋಷಣೆಗೆ ತುತ್ತಾಗಿ ದ್ದಾರೆ. ಈ ಮಾಲಕರು ಕಾಲದಿಂದ ಗೇಣಿ ಭತ್ತವನ್ನು ಸರ್ಕಾರಿ ಕೊಳಗದಲ್ಲಿ ಅಳೆದು ತೆಗೆದುಕೊಳ್ಳದೆ, ತಮ್ಮದೇ ಆದ ಮರದ ಕೊಳಗದಲ್ಲಿ ಅಳೆಸಿಕೊಂಡು ಮೋಸ ಮಾಡುತ್ತಾ ಬಂದಿದ್ದಾರೆ. ಸಾಲದ ಭತ್ತ ಕೊಡುವಾಗ ಸರ್ಕಾರಿ ಕೊಳಗದಲ್ಲಿ ಅಳೆದು ಕೊಟ್ಟು, ಅದನ್ನು ವಸೂಲಿ ಮಾಡುವಾಗ ಮೋಸದ ಮರದ ಕೊಳಗದಲ್ಲಿ ಅಳೆಸಿ ಕೊಳ್ಳುತ್ತಾರೆ. ಬಟ್ಟ ಪದ್ಧತಿ, ಗೇಣಿ ಹುಲ್ಲು ವಸೂಲಿ, ಅಂಗಿ ಚಪ್ಪಲಿ ಹಾಕಿಕೊಂಡು ಕಾಲು ತುಂಬ ಪಂಚೆ ಉಟ್ಟು ಒಡೆಯರ ಮನೆಯ ಮುಂದೆ ಹೋಗಬಾರದೆಂಬ ನಿರ್ಬಂಧ ಇವೆಲ್ಲ ಪದ್ಧತಿಯನ್ನು ಒಪ್ಪಿಕೊಂಡು ನೀವು ರೈತರು, ಒಡೆಯರನ್ನು ಪಾಳೆಯಗಾರರನ್ನಾಗಿ ಬೆಳೆಸಿದ್ದೀರಿ. ಇದೆಲ್ಲ ತಪ್ಪು ಎಂದು ನಿಮಗ್ಯಾರಿಗೂ ಅನಿಸುವುದಿಲ್ಲವೇ ? ಎಂದೆಲ್ಲ ಕೇಳಿದಾಗ, ಅದು ಸತ್ಯ ಎಂದು ಗೇಣಿದಾರರಿಗೆ ಅನ್ನಿಸಿದರೂ 'ಇದನ್ನೆಲ್ಲ ಕೆದಕುತ್ತಾ ಹೋದರೆ ನಮಗೆ ಉಳಿಗಾಲವೇ ಇರುವುದಿಲ್ಲ. ಧಣಿಯರು ಜಮೀನು ಬಿಟ್ಟುಹೋಗು ಎಂದರೆ ಎಲ್ಲಿಗೆ ಹೋಗುವುದು ? ಮಕ್ಕಳು ಮರಿ ಪಾಡೇನು ? ರೈತ ಸಂಘದವರು ಆಗ ನಮ್ಮ ನೆರವಿಗೆ ಬಂದಾರೇ ? ಒಬ್ಬಿಬ್ಬರು 'ನಾವು ಈ ಹೋರಾಟ ಮಾಡಿ ಸಾಧಿಸುವುದಾದರೂ ಏನು ? ಹತ್ತಾರು ಗ್ರಾಮಗಳಲ್ಲಿ ಹರಡಿಕೊಂಡಿರುವ ಎಲ್ಲ ಗೇಣಿದಾರರೂ ಈ ಪದ್ಧತಿಗೆ ಹೊಂದಿಕೊಂಡಿರುವಾಗ, ನಾವು ಒಬ್ಬಿಬ್ಬರು ಯಾವುದೇ ಒಂದು ಗ್ರಾಮದಲ್ಲಿ ನ್ಯಾಯ ಕೇಳುವುದಕ್ಕೆ ಹೋದರೆ ಒಡೆಯರು ನಮ್ಮನ್ನು ಹೊಸಕಿಬಿಡುತ್ತಾರೆ' ಎಂದು ಮಾತನಾಡಿಕೊಂಡರು. ಆದ್ದರಿಂದ ರೈತರ ಸಂಘಟನೆ ಮಾಡಿದಲ್ಲದೆ ಈ ಸಮಸ್ಯೆ ಪರಿಹಾರವಾಗುವುದಿಲ್ಲವೆಂದು ರೈತಸಂಘದವರಿಗೆ ಅರಿವಾಯಿತು. ಒಡೆಯರಿಗೆ ಸರ್ಕಾರಿ ಕೊಳಗದಲ್ಲೇ ಗೇಣಿ ಭತ್ತ ಅಳೆಯುವುದಾಗಿ ಎಲ್ಲ ಊರಲ್ಲೂ ಗೇಣಿದಾರರು ತೀರ್ಮಾನ ಕೈಗೊಂಡರು. ಇದು ಭೂಮಾಲೀಕರಿಗೆ ಒಂದು ಪ್ರತಿಷ್ಠೆಯ ಪ್ರಶ್ನೆಯಾಯಿತು. ಅವರೆಲ್ಲ ಸಂಘಟನೆ ಮಾಡಿಕೊಂಡು




ಸರ್ಕಾರವನ್ನು ತಮ್ಮ ಕಡೆಗೆ ಒಲಿಸಿಕೊಳ್ಳುವ ಪ್ರಯತ್ನ ಮಾಡಿದರು. ಆದರೆ ಈ ವೇಳೆಗೆ ಶಾಸಕರಾಗಿದ್ದ ಕಡಿದಾಳ್ ಮಂಜಪ್ಪನವರು ಮಂತ್ರಿಗಳಾದರು. ಕಂದಾಯ ಇಲಾಖೆ ಯನ್ನೇ ವಹಿಸಿಕೊಂಡರು. ಮಂಜಪ್ಪನವರು ಕಡುಬಡತನ ದಲ್ಲಿ ಬೆಳೆದು ಮುಂದೆ ಬಂದವರು. ಅವರ ತಾತ, ಅಣ್ಣ, ತಂದೆ, ತಮ್ಮ ಎಲ್ಲ ಗೇಣಿ ಭೂಮಿ ಮಾಡುತ್ತಿದ್ದವರೇ. ಹೀಗಾಗಿ ಅವರಿಗೆ ಗೇಣಿ ಮಾಡುವ ರೈತರ ಕಷ್ಟಗಳು ಗೊತ್ತಿತ್ತು. ಇದನ್ನು ಕೊನೆಗಾಣಿಸುವ ಇಚ್ಛಾಶಕ್ತಿಯೂ ಅವರಲ್ಲಿತ್ತು. ಕಾಗೋಡಿನಲ್ಲಿ ಗೇಣಿ ರೈತರ ಚಳುವಳಿ ಆರಂಭವಾಯ್ತು. ಇದರ ನಾಯಕತ್ವವನ್ನ ಸೋಷಿಯಲಿಸ್ಟ್ ಪಕ್ಷ ವಹಿಸಿಕೊಂಡಿತು. ಗೋಪಾಲಗೌಡರು, ಸಿಜಿಕೆ ರೆಡ್ಡಿ, ಖಾದ್ರಿ ಶಾಮಣ್ಣ ಮುಂತಾದವರು ಈ ಚಳುವಳಿಯ ಮುಂಚೂಣಿಯಲ್ಲಿದ್ದರು. ಪಕ್ಷದ ನಾಯಕರಾದ ಗಂಡುಗಲಿ ರಾಮ ಮನೋಹರ ಲೋಹಿಯಾರವರಿಗೆ ಈ ಸತ್ಯಾಗ್ರಹದ ಸುದ್ದಿ ತಿಳಿದ ಮೇಲೆ ಅವರೂ ಇದರಲ್ಲಿ ಕೂಡಿಕೊಳ್ಳಲು ಬಂದರು. ಅವರ ಬಂಧನವೂ ಆಯಿತು. ಆದರೆ ಕಾಗೋಡು ಸತ್ಯಾಗ್ರಹ ಬಹು ದಿನ ನಡೆಯಲಿಲ್ಲ. ಅದು ಸಫಲತೆ ಪಡೆಯಲಿಲ್ಲ.

ಆದರೆ ನೆಲಕಚ್ಚಿದ್ದ ದೀವರು ಜನಾಂಗದವರಲ್ಲಿ ಈ ಹೋರಾಟದಿಂದ ಜಾಗೃತಿ ಉಂಟಾಯಿತು. ಭೂ ಮಾಲೀಕರ ಶೋಷಣೆಯಿಂದ ಮುಕ್ತರಾಗಬೇಕು ಎಂಬ ಅರಿವಾಯಿತು.

ಈ ವೇಳೆಗೆ ಕಡಿದಾಳರು ಗೇಣಿ ಪದ್ಧತಿ ರದ್ದು ಗೊಳಿಸುವ ಶಾಸನವನ್ನು ಜಾರಿಗೆ ತರಲು ಮುಂದಾದರು. ಶಾಸನಸಭೆಯಲ್ಲಿ ಪಟ್ಟಭದ್ರ ಭೂಮಾಲೀಕ ಶಾಸಕರೇ ಬಹಳ ಮಂದಿ ಇದ್ದರಾದರೂ, ಕಾಂಗ್ರೆಸ್ಸಿನ ಧೋರಣೆ ಈ ಶೋಷಣೆಯನ್ನು ತಡೆಗಟ್ಟುವುದೇ ಆಗಿದ್ದುದರಿಂದ, ಗೇಣಿಪದ್ಧತಿ ಕೊನೆಗಾಣಿಸುವ ಶಾಸನ ಕೊನೆಗೂ ಅಸ್ತಿತ್ವಕ್ಕೆ ಬಂತು.

ಸಾಗರ ತಾಲೂಕಿನ ಕಾಗೋಡು ತಡಗಡಲೆ, ಸಣ್ ಮನೆ, ಕಣಸೆ, ಮುಣಗದ್ದೆ, ಸೂರಗುಪ್ಪೆ ಹೀಗೆ ನೂರಾರು ಗ್ರಾಮಗಳಲ್ಲಿ ತಲೆತಲಾಂತರದಿಂದ ನೆಲೆಸಿದ್ದ ಮುಗ್ಧ ದೀವರು ಜನಾಂಗದವರು ಹಿಡಿದಿದ್ದ ಗೇಣಿ ಹೊಲ, ಗದ್ದೆ ತೋಟ ತಮ್ಮದೇ ಆಯಿತು. ಒಡೆಯರ ಎಲ್ಲ ಬಗೆಯ ಕಿರುಕುಳ, ದಬ್ಬಾಳಿಕೆಗಳಿಂದ ಜನ ಮುಕ್ತರಾದರು. ಮುಂದೆ ವಿದ್ಯೆಯ ಗಂಧವೇ ಇಲ್ಲದಿದ್ದ ದೀವರ ಹುಡುಗರು ವಿದ್ಯಾ ವಂತರಾದರು. ಸರ್ಕಾರಿ ನೌಕರಿಗೆ ಸೇರಿದರು. ಶಾಸಕರು, ಮಂತ್ರಿಗಳೂ ಆದರು. ಇಷ್ಟೆಲ್ಲ ಪ್ರಗತಿ ಆದರೂ ಈಗಿನ ತಲೆಮಾರಿಗೆ ಭೂಮಾಲೀಕರ ಬಂಧನದಿಂದ ಬಿಡುಗಡೆ ಯಾಗಲು ದೀವರು ಜನಾಂಗದವರು ಮಾಡಿದ ಹೋರಾಟದ ಕಲ್ಪನೆ ಇಲ್ಲ. ಅವರು ಅನುಭವಿಸಿದ ಅಪಮಾನ, ಕಡು ಬಡತನಗಳ ಅರಿವಿಲ್ಲ.

ಈ ಸನ್ನಿವೇಶದಲ್ಲಿ ಹಳ್ಳಿಗಳಲ್ಲಿ ಹಿಂದೆ ಬಳಸುತ್ತಿದ್ದು ಈಗ ಕೈಬಿಟ್ಟಿರುವ ಉಪಯುಕ್ತ ಸಲಕರಣೆಗಳನ್ನು ಕಲೆಹಾಕಿ ಅವನ್ನು ಒಂದು ಪ್ರದರ್ಶನಾಲಯದಲ್ಲಿ ಇಡುವ ವಿಚಾರ ಹಮ್ಮಿಕೊಂಡು ವಿಶ್ವವಿದ್ಯಾನಿಲಯದವರು ಈ ಹಳ್ಳಿಗಳಿಗೆ ಬರುತ್ತಾರೆ. ಕಾಗೋಡು ಸತ್ಯಾಗ್ರಹದಲ್ಲಿ ತರುಣನಾಗಿ ಕೂಡಿಕೊಂಡಿದ್ದ ಗೇಣಿದಾರ ಹುಚ್ಚಪ್ಪ ಈಗ ಜಮೀನಿನ ಒಡೆಯ. ಅವನ ಮೂವರು ಮಕ್ಕಳೂ ಓದಿ ಪದವೀಧರ ರಾಗಿದ್ದಾರೆ. ಅವನ ಮನೆಗೆ ಪ್ರಾಧ್ಯಾಪಕರು ಬರುವ ಸುದ್ದಿ ಕೇಳಿದ ಹುಚ್ಚಪ್ಪ, ಅಟ್ಟದಿಂದ ಮಗನ ಕೈಯಲ್ಲಿ ಒಂದು ಒಡೆದು ಹೋಳಾದ ನೇಗಿಲು, ಒಂದು ಮರದ ಕೊಳಗ, ಅಡಕಲು, ಉಕ್ಕೇದ ಹಗ್ಗ, ಕಂಬಳಿದಗಲೆ, ಗುಮಗೂಟ, ಜೊತ್ತಗ, ಬಾಯಡ್ಲ, ಬಿರಿ, ಹರಕೆ ಕುಂಟೆ, ಹಲಕು, ಇವನ್ನೆಲ್ಲ ಇಳಿಸುತ್ತಾನೆ. ಈ ಪೈಕಿ ತನ್ನ ಹೋರಾಟದ ಕುರು ಹಾಗಿ ಇಟ್ಟುಕೊಂಡಿದ್ದ ಮರದ ಕೊಳಗ, ಸೀಳಾದ ನೇಗಿಲು ಎರಡನ್ನು ನಾವೇ ಇಟ್ಟುಕೊಂಡು ಮಿಕ್ಕವನ್ನು ವಿಶ್ವ ವಿದ್ಯಾನಿಲಯಕ್ಕೆ ಕೊಡೋಣ ಎನ್ನುತ್ತಾನೆ ಹುಚ್ಚಯ್ಯ. ಹೋರಾಟದ ನೆನಪನ್ನು ಕೊಡುವ ಕೊಳಗ, ನೇಗಿಲು, ನಮ್ಮ ಮನೆಯಲ್ಲಿಟ್ಟುಕೊಂಡರೆ, ನಮಗೆ ಮಾತ್ರ ಅದು ಚಳುವಳಿಯ ನೆನಪು ಮಾಡಿಕೊಡುತ್ತದೆ. ಇವು ವಸ್ತು ಪ್ರದರ್ಶನದಲ್ಲಿದ್ದರೆ ಬಹಳ ಜನ ಅದನ್ನು ನೋಡುತ್ತಾರೆ. ಕುತೂಹಲದಿಂದ ಇವುಗಳ ಪೂರ್ವೇತಿಹಾಸವನ್ನು ಯಾರಾ ದರೂ ಕೇಳಬಹುದು. ಇಲ್ಲವೇ ಪ್ರದರ್ಶನಕ್ಕಿಟ್ಟವರು ಈ ಕೊಳಗ, ನೇಗಿಲು, ಕಾಗೋಡು ಸತ್ಯಾಗ್ರಹದ ನೆನಪನ್ನು ಕೊಡುವ, ಭೂಮಾಲೀಕರ ಅಮಾನುಷ ವರ್ತನೆಯನ್ನು ಸೂಚಿಸುವ ಸಂಕೇತವೆಂದು ಹೇಳಿ ಜನರಲ್ಲಿ ಇತಿಹಾಸ ಪ್ರಜ್ಞೆ ಬೆಳೆಸಲು ಸಹಾಯಕವಾಗಬಹುದು. ಈ ದೃಷ್ಟಿಯಿಂದ ಅವೆರಡೂ ನಮ್ಮ ಮನೆಯಲ್ಲಿರುವುದಕ್ಕಿಂತ ವಿಶ್ವವಿದ್ಯಾ ನಿಲಯದ ಪ್ರದರ್ಶನಾಲಯದಲ್ಲಿರುವುದು ಹೆಚ್ಚು ಸೂಕ್ತ ವೆಂದು ಹೇಳುತ್ತಾನೆ ಮಗ. ಹುಚ್ಚಪ್ಪನೂ ಇದು ಸರಿಯಾದ ಆಲೋಚನೆ ಎಂದು ತನ್ನ ಸಹಮತ ಸೂಚಿಸುತ್ತಾನೆ.

ಕಾಗೋಡಿನ ಸುತ್ತಿನಲ್ಲಿ ಇದ್ದ ಸಹಸ್ರಾರು ಗೇಣಿ ಮಕ್ಕಳು ಅನುಭವಿಸಿದ ಘನಘೋರ ಕಷ್ಟಗಳಲ್ಲಿ ಒಂದಿಷ್ಟು ನಾನು ಇಲ್ಲಿ ಹೇಳಿದ್ದೇನೆ. ಅದರ ವಿಶ್ವರೂಪದರ್ಶನ ನಿಮಗಾಗಬೇಕಾದರೆ, ನಾ. ಡಿಸೋಜಾ ಅವರ 'ಕೊಳಗ' ಕಾದಂಬರಿಯನ್ನೇ ನೀವು ಓದಬೇಕು.

ಎಚ್. ಎಸ್. ದೊರೆಸ್ವಾಮಿ
ನಂ. ೧೮/ಬಿ, ೭ನೇ ಅಡ್ಡರಸ್ತೆ, ಎನ್. ಆರ್. ಕಾಲೋನಿ
ಬೆಂಗಳೂರು-೫೬೦ ೦೧೯

# ಕರ್ನಾಟಕದ ಇತಿಹಾಸ ಮತ್ತು
# –ಸರ್ ವಾಲ್ಟರ್ ಎಲಿಯಟ್–

ಕರ್ನಾಟಕದ ಇತಿಹಾಸದ ಅಧ್ಯಯನಕ್ಕೆ ಪಾಶ್ಚಾತ್ಯ ವಿದ್ವಾಂಸರ ಕೊಡುಗೆಯನ್ನು ಮರೆಯುವಂತಿಲ್ಲ. 'ಅವರ ಅಧ್ಯಯನ ಕ್ರಮದಲ್ಲಿ ಲೋಪಗಳಿವೆ, ಅವರು ತಮಗೆ ಬೇಕಾದಂತೆ ಇತಿಹಾಸವನ್ನು ರಚಿಸಿದ್ದಾರೆ, ಅದರಲ್ಲಿ ಭಾರತೀಯ ಮನೋಧರ್ಮಕ್ಕಿಂತ, ತಮ್ಮ ಆಳ್ವಿಕೆ ಇರುವ ಪ್ರದೇಶದಲ್ಲಿ ತಮ್ಮ ಆಡಳಿತವನ್ನು ಹೇಗೆ ನಿರಾತಂಕವಾಗಿ ಮತ್ತು ನಿರಂತರವಾಗಿ ಉಳಿಸಿಕೊಳ್ಳಬೇಕು ಎಂಬ ನಿಲುವು ಪ್ರಧಾನವಾಗಿತ್ತು' ಎಂಬ ಅಭಿಪ್ರಾಯವಿದೆ. ಮ್ಯಾಕ್ಸ್ ಮುಲ್ಲರ್‌ನನ್ನು ಉದಹರಿಸಿ ಇಂತಹ ಅಭಿಪ್ರಾಯವನ್ನು ಸಮರ್ಥಿಸಲಾಗುತ್ತದೆ. ಈ ಅಭಿಪ್ರಾಯವನ್ನು ಸಾರಾಸಗಟಾಗಿ ಅಲ್ಲಗಳೆಯಲು ಸಾಧ್ಯವಿಲ್ಲ. ಆದರೆ ಎಲ್ಲ ಇತಿಹಾಸಕಾರರನ್ನೂ ಈ ಅಳತೆಗೋಲಿನಿಂದಲೇ ಅಳೆಯಲಾಗುವುದಿಲ್ಲ. ಆಡಳಿತಾತ್ಮಕವಾಗಿ ತಮ್ಮನ್ನು ತಾವು ಉಳಿಸಿಕೊಳ್ಳಲು ಅಥವಾ ಸಮರ್ಥಿಸಿಕೊಳ್ಳಲು ಯಾವುದೇ ವಿಷಯವನ್ನು ರಾಜಕೀಯ ಪಟುಗಳು ತಮ್ಮ ಅವಶ್ಯಕತೆಗೆ ತಕ್ಕಂತೆ ಅಥವಾ ತಮ್ಮ ಮನೋಧರ್ಮಕ್ಕೆ ತಕ್ಕಂತೆ ತಿರುಚುವುದು ಮತ್ತು ಬಳಸಿಕೊಳ್ಳುವುದು ಹೊಸ ವಿಷಯವೇನಲ್ಲ. ಇದು ಎಲ್ಲ ಕಾಲದಲ್ಲಿ ನಡೆದಿರುವ ಮತ್ತು ನಡೆಯುವ ಚಮತ್ಕಾರ. ಅವಶ್ಯಕತೆ ಮತ್ತು ಅವಕಾಶ ಇರುವ ಯಾರು ಬೇಕಾದರೂ ಇಂತಹ ಚಮತ್ಕಾರವನ್ನು ಮಾಡಬಹುದು. ಆದರೆ ಅಂತಹ ಚಮತ್ಕಾರ ಮಾಡುವವರು 'ತಾನು ಕಳ್ಳ ಪರರನ್ನು ನಂಬ' ಎಂಬ ಗಾದೆ ಮಾತಿಗೆ ತಕ್ಕಂತೆ ತಮ್ಮ ಹೊರತು ಉಳಿದವರೆಲ್ಲರ ಅಭಿಪ್ರಾಯಗಳನ್ನು ವಿರೋಧಿಸುತ್ತಾರೆ ಅಥವಾ ಅನುಮಾನಿಸುತ್ತಾರೆ.

**ಸರ್ ವಾಲ್ಟರ್ ಎಲಿಯಟ್‌ನನ್ನು ಕನ್ನಡಿಗರು ಮರೆಯುವಂತಿಲ್ಲ. ಅವನು ತೀರಾ ಪ್ರಸಿದ್ಧನೂ ಆಗಲಿಲ್ಲ. ಅವನ ವಿಚಾರಗಳನ್ನು ನಾವು ಈಗ ಪೂರ್ಣವಾಗಿ ಒಪ್ಪಲು ಆಗುವುದಿಲ್ಲವಾದರೂ ಆ ಕಾಲಕ್ಕೆ ಅವನು ವಹಿಸಿದ ಆಸಕ್ತಿ ಮತ್ತು ಶ್ರಮವನ್ನು ಮರೆಯುವಂತಿಲ್ಲ.**

**ಡಾ|| ಎಚ್. ಎಸ್. ಗೋಪಾಲರಾವ್**

ಉದ್ದೇಶ ಏನೇ ಇದ್ದರೂ, ಹೇಗೆ ಅರ್ಥೈಸಿದರೂ ಬ್ರಿಟಿಷ್ ಇತಿಹಾಸಕಾರರು ಮೂಲ ದಾಖಲೆಗಳ ಸಂಗ್ರಹಣೆಯಲ್ಲಿ ಅನನ್ಯವಾದ ಕೆಲಸ ಮಾಡಿದ್ದಾರೆ ಎಂಬುದನ್ನು ಅಲ್ಲಗಳೆಯಲು ಸಾಧ್ಯವಿಲ್ಲ. ಐತಿಹಾಸಿಕ ಪ್ರಜ್ಞೆ ನಮ್ಮ ಜನರಿಗೆ ಇರಲೇ ಇಲ್ಲ ಎಂಬ ಪಾಶ್ಚಾತ್ಯ ಅಥವಾ ಮತ್ತಾವುದೇ ವರ್ಗದ ವಿದ್ವಾಂಸರ ಹೇಳಿಕೆಯು ತೀರಾ ಬಾಲಿಶ ಎನಿಸಬಹುದು. ಹಾಗೇನಾದರೂ ನಮ್ಮ ಪ್ರಾಚೀನರಿಗೆ ಇತಿಹಾಸದ ಬಗ್ಗೆ ತಿಳುವಳಿಕೆ ಇಲ್ಲದಿದ್ದರೆ, ಶಾಸನಗಳ ಮೂಲಕ ಅನೇಕ ಮುಖ್ಯ ವಿಷಯಗಳು ದಾಖಲಾಗುತ್ತಿರಲಿಲ್ಲ. ಓಲೆಗರಿಗಳ ಮೇಲೆ ಸಮಕಾಲೀನ ಸಾಹಿತ್ಯ ಕೃತಿಗಳು ಉಳಿಯುತ್ತಿರಲಿಲ್ಲ. ಸ್ಮೃತಿಗಳ ಮೂಲಕವೇ ಅತ್ಯಂತ ಮುಖ್ಯವಾದ ಹಾಗೂ ಗಹನವಾದ ವಿಚಾರಗಳನ್ನು ಕಾಪಾಡಿಕೊಂಡು ಬಂದ ನಮ್ಮ ಪ್ರಾಚೀನರಿಗೆ ಯಾವುದು ಮುಖ್ಯವೋ ಅದನ್ನು ಮಾತ್ರ ಉಳಿಸಬೇಕು ಎಂಬ ಅಭಿಪ್ರಾಯವಿದ್ದರೆ, ನಾವು ಆ ಬಗ್ಗೆ ಗರ್ವ ಪಡಬೇಕು. ತೀರಾ ಸಾಮಾನ್ಯವಾದ ಮತ್ತು ಜನತೆಗೆ ಅತ್ಯವಶ್ಯಕವಲ್ಲದ ಹಾಗೂ ಗೌಪ್ಯವಾಗಿ ಇಡಲೇಬೇಕಾದ ವಿಚಾರಗಳನ್ನು ದಾಖಲಿಸುವ ಅಥವಾ ಬಹಿರಂಗಗೊಳಿಸುವ ವ್ಯರ್ಥ ಪ್ರಯತ್ನಕ್ಕೆ ನಮ್ಮ ಹಿರಿಯರು ಕೈ ಹಾಕಲಿಲ್ಲವೆಂದು ಭಾವಿಸಬಹುದು. ಇದೂ ಕೂಡಾ ಕೇವಲ ಒಂದು ಊಹೆ. ಎಲ್ಲಕ್ಕೂ ದಾಖಲೆಗಳನ್ನೇ ಹುಡುಕುತ್ತಾ ಕೂರುವುದು ತಾರ್ಕಿಕವಾಗಿ ಸರಿಯಲ್ಲವಾದರೂ, ದಾಖಲೆಗಳ ಗೈರುಹಾಜರಿಯಲ್ಲಿ ದೊರೆಯುವ ವಿಚಾರಗಳನ್ನು ತಾರ್ಕಿಕ ಪರಿಶೀಲನೆಗೆ ಗುರಿಪಡಿಸಿ, ಆ ಪರೀಕ್ಷೆಯಲ್ಲಿ ಗೆದ್ದ ವಿಚಾರಗಳನ್ನು ಒಪ್ಪಿಕೊಳ್ಳುವುದು ತಪ್ಪಾಗಲಾರದು.

ಬ್ರಿಟಿಷ್ ಅಥವಾ ಪಾಶ್ಚಾತ್ಯ ವಿದ್ವಾಂಸರು ಭಾರತೀಯ ಇತಿಹಾಸ ಮತ್ತು ತತ್ವಶಾಸ್ತ್ರಗಳ ಬಗ್ಗೆ ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಇಡಿಯಾಗಿ ಒಪ್ಪುವುದು ಕಷ್ಟವಾದರೂ ಅಥವಾ ಈಗ ಭಾರತೀಯ ಮನಸ್ಸುಗಳು ಅದೇ ಅಭಿಪ್ರಾಯಗಳನ್ನು ಪ್ರಶ್ನಿಸಿ, ಬೇರೆಯದೇ ಅಭಿಪ್ರಾಯವನ್ನು ನೀಡಬಹುದಾದರೂ, ಹಾಗೆ ಭಿನ್ನವಾದ ಅಭಿಪ್ರಾಯಗಳನ್ನು ಕೊಡಲು ಸಾಧ್ಯವಾದದ್ದು ಅಥವಾ ಪ್ರಶ್ನಿಸಲು ಹಾಗೂ ವಿರೋಧಿಸಲು ಸಾಧ್ಯವಾದದ್ದು, ಈಗಾಗಲೇ ಒಂದು ಅಭಿಪ್ರಾಯವಿದೆ ಎಂಬ ಕಾರಣದಿಂದ ಮಾತ್ರ. ಯಾವುದೇ ಒಂದು ಅಭಿಪ್ರಾಯವಿಲ್ಲದಿದ್ದಾಗ, ಅದಕ್ಕೆ ಭಿನ್ನವಾದ ಅಥವಾ ಸಮಾನವಾದ ಅಭಿಪ್ರಾಯಗಳನ್ನು ರೂಪಿಸುವುದು ಕಷ್ಟ. ಆದ್ದರಿಂದ ಚರ್ಚೆಗೆ ಮುನ್ನ ಒಂದು ಅಭಿಪ್ರಾಯ ಇರಲೇಬೇಕು. ಅಭಿಪ್ರಾಯವು ರೂಪುಗೊಳ್ಳಲು ಮೂಲ ದಾಖಲೆಗಳು ಅತ್ಯವಶ್ಯಕ. ಮೂಲ ದಾಖಲೆಗಳನ್ನು ಸಂಗ್ರಹಿಸಿ, ತಮಗೆ ಅವಶ್ಯಕ ಮಾದರಿಯಲ್ಲಿ ಸಂಗ್ರಹಿಸುವ ಕೆಲಸವನ್ನು ಪಾಶ್ಚಾತ್ಯ ವಿದ್ವಾಂಸರು ಮಾಡಿದರು. ಅವರ ವ್ಯಾಖ್ಯಾನಗಳನ್ನು ತಿದ್ದಲು ಅಥವಾ ಪರಿಷ್ಕರಿಸಲು ಯಾವಾಗಲೂ ಅವಕಾಶ ಇರುತ್ತದೆ. ಅವರ ಎಲ್ಲ ತೀರ್ಮಾನಗಳನ್ನು 'ಇದಮಿತ್ಥಂ' ಎಂದು ಒಪ್ಪಿಕೊಳ್ಳುವ ಪರಿಸ್ಥಿತಿ ಈಗಿಲ್ಲ. ಅವರ ಮರ್ಜಿಗೆ ತಕ್ಕಂತೆ ನಾವೀಗ ನಡೆಯಬೇಕಾಗಿಲ್ಲ. ಆ ಕಾಲಕ್ಕೆ ದೊರೆತ ಆಧಾರಗಳನ್ನು ಆಧರಿಸಿ ಮಾಡಿದ ತೀರ್ಮಾನಗಳೇ ಇಂದಿಗೂ ಪ್ರಸ್ತುತವಾಗಬೇಕು ಎಂದು ಭಾವಿಸಬೇಕಾಗಿಲ್ಲ. ಹೊಸ ಹೊಸ ದಾಖಲೆಗಳು ದೊರೆತಂತೆಲ್ಲಾ ಹಿಂದಿನ ಅಭಿಪ್ರಾಯಗಳನ್ನು ತಿದ್ದಲು, ಬದಲಾಯಿಸಲು ಮತ್ತು ಬಲಪಡಿಸಲು ಸಾಧ್ಯವಾಗುತ್ತದೆ. ಈ ಮಾತುಗಳನ್ನು ಕೆಲವು ಉದಾಹರಣೆಗಳ ಮೂಲಕ ಸ್ಪಷ್ಟಪಡಿಸುವುದು ಅವಶ್ಯಕ.

ಬಾದಾಮಿಯ ಬಂಡೆಗಲ್ಲು ಶಾಸನ ದೊರೆತ ಸಂದರ್ಭಕ್ಕೆ, ಭಾರತದಲ್ಲಿ ಶಕ ವರ್ಷದ ಉಲ್ಲೇಖವಿರುವ ಮೊದಲ ಶಾಸನ ಅದಾಗಿತ್ತು. ಆದರೆ ಈಗ ಅದು ಮೂರನೆಯ ಸ್ಥಾನಕ್ಕಿಳಿದಿದೆ. ಮುಂದೆ ಅದರ ಸ್ಥಾನ ಮತ್ತಷ್ಟು ಇಳಿಯಬಹುದು. ಅದಕ್ಕಾಗಿ ವ್ಯಥೆ ಪಡುವ ಅವಶ್ಯಕತೆ ಇಲ್ಲ. ತಲಕಾಡಿನಲ್ಲಿ ಉತ್ಖನನ ಆಗುವವರೆಗೆ ಗಂಗರ ಕಾಲದ ಯಾವ ಸುಳಿವೂ ಅಲ್ಲಿ ದೊರೆತಿರಲಿಲ್ಲ. ಈಗ ನಮಗೆ ಆಶ್ಚರ್ಯ ಹುಟ್ಟಿಸುವಂತಹ ಗಂಗರ ಕಾಲದ ತಡೆಗೋಡೆಗಳ ಅಸ್ತಿತ್ವವನ್ನೂ ಅಲ್ಲಿ ಕಾಣಬಹುದು. ಗಂಗರ ಕಾಲದ ಒಂದು ಬಸದಿಯ ಸುಳಿವು ಸಿಕ್ಕಿದೆ. ಬಹುತೇಕ ಅದೇ ಕಾಲಕ್ಕೆ ಸೇರುವ ಸುಂದರವಾದ ಒಂದು ಚಾಮುಂಡಿಯ ವಿಗ್ರಹ ದೊರೆತಿದೆ. ಗಂಗರ ಕಾಲದ ಮಾತ್ರವಲ್ಲದೆ ಅದಕ್ಕೂ ಮೊದಲಿನ ಕಾಲದ ಪ್ರಾಚ್ಯಾವಶೇಷಗಳೆಲ್ಲ ಅಲ್ಲಿ ದೊರೆತು ಈವರೆಗೆ ತಲಕಾಡಿನ ಬಗ್ಗೆ ಇದ್ದ ಅನುಮಾನಗಳನ್ನು ಬಗೆಹರಿಸಿದೆ; ಜೊತೆಗೆ ಇನ್ನೂ ಹೆಚ್ಚಿನ ವಿಚಾರಗಳು ಬಹಿರಂಗಗೊಳ್ಳಲು ಕಾರಣವಾಗಿದೆ. ಆದ್ದರಿಂದ ಇತಿಹಾಸದ ವಿಷಯದಲ್ಲಿ, ಈಗಾಗಲೇ ಹೇಳಿರುವಂತೆ 'ಇದಮಿತ್ಥಂ' ಎಂದು ಏನನ್ನೂ ತೀರ್ಮಾನಿಸಲು ಸಾಧ್ಯವಿಲ್ಲ. ಈವರೆಗೆ ದೊರೆತಿರುವ ಮತ್ತು ತಿಳಿದಿರುವ ವಿಷಯಗಳನ್ನು ಆಧರಿಸಿ ಸತ್ಯ ಎಂದು ನಂಬಿರುವ ವಿಚಾರಗಳು, ಮುಂದೆ ಹೊಸ ದಾಖಲೆಗಳು ಮತ್ತು ವಸ್ತು-ವಿಶೇಷಗಳು ದೊರೆತಾಗ ಮತ್ತಷ್ಟು ಪುಷ್ಟಿ ಪಡೆಯಬಹುದು ಅಥವಾ ತಿರುವು ಮುರುವಾಗಬಹುದು. ನಾವು ತಿಳಿದ ಅಥವಾ ನಂಬಿರುವ ವಿಚಾರಗಳು ಬದಲಾಗುತ್ತಿವೆ ಎಂಬ ಕಾರಣದಿಂದ ಸಂಶೋಧನೆಯಿಂದ ದೂರ ನಿಲ್ಲುವುದು ಸರಿಯಲ್ಲ. ಇದೇ ರೀತಿಯಲ್ಲಿ ನಮಗೆ ಬೇಕಾದಂತೆ ವಿಷಯಗಳು ನಿರೂಪಿತವಾಗಬೇಕು ಎಂಬ ಕಾರಣದಿಂದ ತಿಳಿದ ಸತ್ಯ ವಿಚಾರಗಳನ್ನು ತಿರುಚಿ ಹೇಳುವುದು ಅಥವಾ ನಮಗೆ ಬೇಕಾದಂತೆ ಬಳಸಿಕೊಳ್ಳುವುದು ಅಪಾಯಕಾರಿ ಮಾತ್ರವಲ್ಲ ಅಪರಾಧವೂ ಆಗುತ್ತದೆ. ನಮಗೆ ಇಷ್ಟವಾಗಲಿ, ಬಿಡಲಿ ತಿಳಿದ ಸತ್ಯವನ್ನು ಹಾಗೆಯೇ ಹೇಳಬೇಕಾದ್ದು ಇತಿಹಾಸಕಾರನ ಜವಾಬ್ದಾರಿ. ತನ್ನ ಅನುಕೂಲಕ್ಕೆ ತಕ್ಕಂತೆ ವಿಷಯಗಳನ್ನು ಬಳಸಿಕೊಂಡರೆ ಮತ್ತು ಉತ್ಪ್ರೇಕ್ಷೆ ಮಾಡಿದರೆ ಅದು ಜನರನ್ನು ದಾರಿ ತಪ್ಪಿಸುವ ತಂತ್ರವಾಗುತ್ತದೆ. ತೆಗಳಬೇಕೆಂದರೆ ಅಶೋಕನನ್ನೂ ತೆಗಳಬಹುದು; ಮಹಾತ್ಮಾ ಗಾಂಧಿಯನ್ನೂ ತೆಗಳಬಹುದು. ನಾವು ಅಥವಾ ನಮ್ಮ ಆಪ್ತೇಷ್ಟರನ್ನು ಬಿಟ್ಟು ಬೇರೆ ಯಾರನ್ನು ಬೇಕಾದರೂ ತೆಗಳಬಹುದು. ವೈರಿಗಳಾದವರನ್ನು ತೆಗಳಲಂತೂ ಯಾವುದೇ ಅಡ್ಡಿ-ಆತಂಕಗಳಿರುವುದಿಲ್ಲ.

ಕರ್ನಾಟಕದ ಇತಿಹಾಸವನ್ನು ವಿದ್ವಾಂಸರಿಗೆ ಮಾತ್ರವಲ್ಲದೆ ಎಲ್ಲ ಜನತೆಯ ಮುಂದೆ ತೆರೆದಿಟ್ಟ ಪಾಶ್ಚಾತ್ಯ ವಿದ್ವಾಂಸರಲ್ಲಿ ಸರ್ ವಾಲ್ಟರ್ ಎಲಿಯಟ್ ಕೂಡಾ ಮುಖ್ಯನಾಗಿದ್ದಾನೆ. ೧೮೨೧ ರಲ್ಲಿ (ಆಗ ಎಲಿಯಟ್‌ನ ವಯಸ್ಸು ೧೮ ವರ್ಷ) ಈಸ್ಟ್ ಇಂಡಿಯಾ ಕಂಪೆನಿಯ ಸೇವೆಗಾಗಿ ಭಾರತಕ್ಕೆ ಬಂದ ವಾಲ್ಟರ್ ಎಲಿಯಟ್ ಮದ್ರಾಸ್‌ನ ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನಲ್ಲಿ ಆಡಳಿತಾತ್ಮಕ ತರಬೇತಿ ಪಡೆದು, ಆಗ ಮದ್ರಾಸ್ ಪ್ರಾಂತಕ್ಕೆ

ಸೇರಿದ್ದ ಧಾರವಾಡದಲ್ಲಿ ನೇಮಕಗೊಂಡ. ಧಾರವಾಡವು ಮುಂಬಯಿ ಆಧಿಪತ್ಯಕ್ಕೆ ಸೇರಿದಾಗ ಎಲಿಯಟ್ ಕೂಡಾ ಅದೇ ಆಡಳಿತದಲ್ಲಿ ಉಳಿದ. ೧೮೩೩ರ ನವೆಂಬರ್‌ವರೆಗೆ ಧಾರವಾಡದಲ್ಲೇ ಸೇವೆ ಸಲ್ಲಿಸಿದ ಎಲಿಯಟ್ ಮೂರು ವರ್ಷಗಳ ರಜೆಯ ನಂತರ ೧೮೩೬ರಲ್ಲಿ ಮದ್ರಾಸ್‌ಗೆ ಹಿಂದಿರುಗಿದ. ಎಲಿಯಟ್ ಹಲವಾರು ಪ್ರಮುಖ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸಿದ. ಕೆಲವು ಕಾಲ ಸರ್ಕಾರಕ್ಕೆ ಕನ್ನಡ ಭಾಷಾಂತರಕಾರನಾಗಿಯೂ ಕೆಲಸ ಮಾಡಿದ ಎಲಿಯಟ್, ೧೮೬೦ರಲ್ಲಿ ವೃತ್ತಿಯಿಂದ ನಿವೃತ್ತನಾಗಿ, ೧೮೮೭ರ ಮಾರ್ಚ್ ೧ರಂದು ಮೃತನಾದ.

೧೮೨೨ರಿಂದ ೧೮೩೩ರವರೆಗೆ ಉತ್ತರ ಕರ್ನಾಟಕದಲ್ಲಿ ಕಾರ್ಯ ನಿರ್ವಹಿಸಿದ ಎಲಿಯಟ್ ಕಂದಾಯ ಮತ್ತು ಶಿಕ್ಷಣ ಇಲಾಖೆಗಳಲ್ಲಿ ಹೆಚ್ಚು ಸೇವೆ ಸಲ್ಲಿಸಿದ. ಜೊತೆಗೆ ಕೆಲವು ಇಂಗ್ಲಿಷ್ ಕೃತಿಗಳನ್ನು ಕನ್ನಡಕ್ಕೆ ಅನುವಾದ ಮಾಡಿದ ಎಲಿಯಟ್ ಶಾಸನ ಸಂಗ್ರಹಣೆಯ ಕೆಲಸದಲ್ಲೂ ತೊಡಗಿದ್ದ. ಇವೆಲ್ಲದರ ಜೊತೆಗೆ ಶಿಕ್ಷಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಲೇ, ಉತ್ತರ ಕರ್ನಾಟಕದಲ್ಲಿ ಆಗ ಪ್ರಬಲವಾಗಿದ್ದ ಮರಾಠಿ ಭಾಷೆಯಿಂದ ಕನ್ನಡ ಮಾತೃಭಾಷಿಕರನ್ನು ಪಾರು ಮಾಡುವ ಸಲುವಾಗಿ ಆತ ೧೮೩೦ರಲ್ಲಿ ಹುಬ್ಬಳ್ಳಿಯಲ್ಲಿ ಕನ್ನಡ ಶಾಲೆಯೊಂದನ್ನು ಪ್ರಾರಂಭಿಸಿದ ಕೀರ್ತಿಗೆ ಪಾತ್ರನಾಗಿದ್ದಾನೆ. ಮೂರು ವರ್ಷಗಳ ಕಾಲ ತನ್ನ ಸ್ವಂತ ಖರ್ಚಿನಿಂದ ಆ ಶಾಲೆಯನ್ನು ನಡೆಸಿದ ಎಲಿಯಟ್, ೧೮೩೩ರಲ್ಲಿ ಧಾರವಾಡವನ್ನು ಬಿಟ್ಟಾಗ ಶಾಲೆಯನ್ನು ಕಲೆಕ್ಟರನ ವಶಕ್ಕೆ ಒಪ್ಪಿಸಿ ಹೋದ.

## ಆರದಿರಲಿ ಕಿಚ್ಚು

ಸೂರ್ಯನೇ ತಿರುಗಿದರೂ ಇತ್ತ
ಕರಗುತ್ತಿಲ್ಲ ಹಗಲ ಕಮರಿಸುವ
ಕಾಳ ರಾತ್ರಿಯ ಕಾವಳ: ಆರದಿರಲಿ
ಎದೆಯಾಳದ ನಿನ್ನೊಡಲ ಕಿಚ್ಚು.

ಗಾಂಧಿ, ಬಸವ, ಬುದ್ಧರನೇಕರು
ಹೊತ್ತಿಸಿದ ಎಷ್ಟೊಂದು ಕುಲುಮೆಗಳು
ಕಾವು ಕಳಕೊಂಡಿಲ್ಲ: ಸುಡದಿರಲಿ
ನಿನ್ನೊಡಲು ಒಳಗಿನ ರೊಚ್ಚು ಬರಿದು.

ಪ್ರವಾಹ ಪರಿಧಿಯ ಬಂಡೆ
ಗಲ್ಲಗಳು ಮೃದುವಾಗಲಿಲ್ಲ
ಎಂದು ನದಿಗಳು ಮುನಿದು
ಹರಿಯುವುದು ನಿಲ್ಲಬಾರದು.

ಕಿಚ್ಚು ಅಸೂಯೆಯ ಕೆಚ್ಚಾಗಿ
ಗಂಟಲು ಸುಟ್ಟೀತು, ಒರಗೆ
ಯವರ ಎಲುಬು ಮುರಿದಾತು:
ಇರಬೇಕಾದಲ್ಲಿ ಇರಲಿ ಸಹನೆ.

ಏಸೊಂದು ತಾರೆಗಳು ನೆಲ
ಸೆಲದ ತುಂಬ; ಮುಗಿಲ
ಮುಡಿಯ ಬಸಿರು ಕನುಗ
ಬಾರದು, ತೂಕವಿರಲಿ ಹೆಜ್ಜೆಯಲಿ.

ಕಣ್ಣಿಗೆ ಬೆಳಕು ತೋರಿಸುವ
ಸೂರ್ಯ ಬಂದಾನೆ ಒಂದು ದಿನ:
ಮನಸ್ಸಿನ ಮೂಲೆಗಳಿಗೆ ಬೆಳಕು
ಹಾಯಿಸುವ ಸೂರ್ಯ ಇಂದಲ್ಲ ನಾಳೆ.



ಡಾ|| ಸುಚೇತನ ಸ್ವರೂಪ
೧೩.೩, ಕೆ.ಎಂ.ಸಿ. ಕ್ವಾರ್ಟರ್ಸ್, ಮಣಿಪಾಲ-೫೭೬ ೧೧೯

ಎಲಿಯಟ್ ಕನ್ನಡ ಶಾಲೆಯನ್ನು ಆರಂಭಿಸುವವರೆಗೆ ಆ ಭಾಗದಲ್ಲಿ ಒಂದೂ ಕನ್ನಡ ಶಾಲೆ ಇರಲಿಲ್ಲ ಎಂಬ ಸತ್ಯ ತಿಳಿದಾಗ ಮಾತ್ರ ಎಲಿಯಟ್‌ನ ಸಾಹಸ ಮತ್ತು ಸ್ಥಳೀಯ ಜನ ಮತ್ತು ಅವರ ಭಾಷೆಯ ಬಗ್ಗೆ ಅವನಿಗಿದ್ದ ಕಳಕಳಿ ಅರ್ಥವಾಗುತ್ತದೆ.

ಕಿತ್ತೂರು ಸಂಗ್ರಾಮದ ಸಂದರ್ಭದಲ್ಲಿ ಥ್ಯಾಕರೆಯ ಜೊತೆಗೇ ಇದ್ದ ಎಲಿಯಟ್ ಕೆಲವು ದಿನಗಳ ಕಾಲ ಕಿತ್ತೂರಿನಲ್ಲಿ ಬಂಧಿಯಾಗಿಯೂ ಇದ್ದ. ಅವನಿಗೆ ಆ ಸಂದರ್ಭದ ಅನೇಕ ವಿಷಯಗಳು ತಿಳಿದಿದ್ದವು. ಹಲವು ಸೂಕ್ಷ್ಮ ವಿಚಾರಗಳನ್ನು ತಿಳಿಸುವ ಎಲಿಯಟ್‌ನ ಬರಹಗಳು ಐತಿಹಾಸಿಕವಾಗಿ ಮುಖ್ಯವಾಗುತ್ತವೆ. ತಳ್ಳಿಕೋರರ ಬಗ್ಗೆ ಮತ್ತು ಆಗ ಧಾರವಾಡದಲ್ಲಿದ್ದ ವ್ಯಾಪಾರಿ ಸೇಟ್ ಚತುರ ದಾಸನ ಪ್ರಾಮಾಣಿಕತೆಗಳ ಬಗ್ಗೆ ಎಲಿಯಟ್‌ನ ಬರಹಗಳಿಂದ ತಿಳಿಯಬಹುದು.

ಸರ್ ವಾಲ್ಟರ್ ಎಲಿಯಟ್‌ನನ್ನು ಇತಿಹಾಸಕಾರರು, ಅದರಲ್ಲೂ ಶಾಸನಾಭ್ಯಾಸಿಗಳು ನೆನಪು ಮಾಡಿಕೊಳ್ಳುವುದು ಅವನೊಬ್ಬ ಶಾಸನ ಸಂಗ್ರಹಕಾರನೆಂಬ ಅಭಿಮಾನದಿಂದ. ಉತ್ತರ ಕರ್ನಾಟಕದಲ್ಲಿ ಶಾಸನಗಳ ಪಡಿಯಚ್ಚುಗಳ ಸಂಗ್ರಹಣ ಕಾರ್ಯವನ್ನು ಆರಂಭಿಸಿದ ಮೊದಲಿಗ ಸರ್ ವಾಲ್ಟರ್ ಎಲಿಯಟ್ ಎಂದೇ ತಿಳಿಯಲಾಗಿದೆ. ಎಲಿಯಟ್‌ಗೆ ಶಾಸನ ಸಂಗ್ರಹ ಮತ್ತು ಅವುಗಳ ಓದಿನಲ್ಲಿ ಸಹಾಯ ಮಾಡುತ್ತಿದ್ದವನು ಮುಂಡರಗಿ ರಂಗರಾವ್. ಈತನು ಮುಂಡರಗಿ ಭೀಮರಾಯನ ಮಗ. ಭೀಮರಾವ್‌ಗೆ ಕರ್ನಲ್ ವೆಲ್ಲೆಸ್ಲಿಯು ಶಿರಚ್ಛೇದನದ ಶಿಕ್ಷೆ ವಿಧಿಸಿದ್ದ. ಎಲಿಯಟ್ ತಾನು ಸಂಗ್ರಹಿಸಿದ ವಿಷಯಗಳನ್ನು ನಾಲ್ಕು ಸಂಪುಟಗಳಲ್ಲಿ ಅಣಿ ಮಾಡಿ, ಅವುಗಳ ತಲಾ ಮೂರು ಪ್ರತಿಗಳನ್ನು ಸಿದ್ಧಪಡಿಸಿ, ಕೆಲವು ಗ್ರಂಥಾಲಯಗಳಿಗೆ ಹಂಚಿದ. ಇವುಗಳಲ್ಲಿ ಕೆಲವು ಪ್ರತಿಗಳು ಇಂಡಿಯಾ ಆಫೀಸಿನ ಗ್ರಂಥಾಲಯ, ಬ್ರಿಟಿಷ್ ಲೈಬ್ರರಿಯಲ್ಲಿ ಲಭ್ಯವಿವೆ ಎಂದು ತಿಳಿದಿದೆ.

ಸರ್ ವಾಲ್ಟರ್ ಎಲಿಯಟ್‌ನ ಪ್ರಮುಖ ಕೃತಿ ಎಂದರೆ 'ಹಿಂದೂ ಶಾಸನಗಳು.' ಇದೊಂದು ಸಂಶೋಧನಾ ಲೇಖನ. ಇದಕ್ಕಾಗಿ ಅವನು ತಾನೇ ಸಂಗ್ರಹಿಸಿದ್ದ ೫೯೫ ಶಾಸನಗಳನ್ನು ಬಳಸಿಕೊಂಡಿದ್ದಾನೆ. ಆಗಿನ್ನೂ ಶಕ ವರ್ಷವನ್ನು ಕ್ರಿಸ್ತ ಶಕ ವರ್ಷಕ್ಕೆ ಪರಿವರ್ತಿಸುವ ಕೋಷ್ಟಕ ಸಿದ್ಧವಾಗಿರಲಿಲ್ಲವಾದ್ದರಿಂದ ಹಿಂದೂ ಪಂಚಾಂಗದ ಕಾಲಾನುಕ್ರಮದಲ್ಲೇ ಶಾಸನಗಳನ್ನು ಕ್ರಮವಾಗಿ ಜೋಡಿಸಿಕೊಂಡು, ಅವುಗಳಲ್ಲಿ ದೊರೆತ ರಾಜವಂಶಗಳ ಬಗ್ಗೆ ಅಧ್ಯಯನ ಮಾಡಿ, ರಾಜವಂಶಾವಳಿಗಳನ್ನು ಪತ್ತೆ ಮಾಡಿದ. ಅವನ ಅಂದಿನ ಅಧ್ಯಯನದ ಪ್ರಕಾರವೇ ಕಲ್ಯಾಣ ಚಾಲುಕ್ಯರ ರಾಜ್ಯವು ಉತ್ತರದ ಗೋದಾವರಿಯಿಂದ ದಕ್ಷಿಣದ ಕೆಳದಿಯವರೆಗೆ ವಿಸ್ತರಿಸಿತ್ತು. ಗೋವೆಯ ಕದಂಬರು, ಕಲಚುರಿಗಳು, ಶಿಲಾಹಾರರು ಮತ್ತು ಸೌಂದತ್ತಿಯ ರಟ್ಟರು, ಹೊಯ್ಸಳರು ಮತ್ತು ಸೇಣರ ಬಗೆಗೂ ಅಧ್ಯಯನ ಮಾಡಿದ ಎಲಿಯಟ್ ಬಸವೇಶ್ವರರು ಮತ್ತು ಬಿಜ್ಜಳನ ನಡುವಿನ ಘರ್ಷಣೆಯನ್ನೂ ಗುರುತಿಸಿದ್ದಾನೆ. ಇದಕ್ಕೆ ಆವರೆಗೆ ಲಭ್ಯವಿದ್ದ ಕನ್ನಡ, ತೆಲುಗು ಮತ್ತು ಸಂಸ್ಕೃತ ಕಾವ್ಯಗಳ ನೆರವನ್ನೂ ಪಡೆದಿದ್ದೇನೆ ಎಂದು ಹೇಳಿಕೊಂಡಿದ್ದಾನೆ. ಆ ಕಾಲಕ್ಕೆ ತನಗೆ ಲಭ್ಯವಿದ್ದ ಆಕರಗಳ ನೆರವಿನಿಂದ ತನ್ನ ತಿಳುವಳಿಕೆಯ ಮಿತಿಯಲ್ಲಿ ವಿಷಯಗಳನ್ನು ಪ್ರಸ್ತಾಪಿಸಿರುವ ಎಲಿಯಟ್‌ನ ಪ್ರಾಮಾಣಿಕತೆಯನ್ನು ಪ್ರಶ್ನಿಸುವ ಅವಶ್ಯಕತೆಯಿಲ್ಲವಾದರೂ ಅವನ ಎಲ್ಲಾ ತೀರ್ಮಾನಗಳನ್ನೂ ಒಪ್ಪಿಕೊಳ್ಳಬೇಕಾಗಿಲ್ಲ.

ಹಾನಗಲ್‌ನ ಪ್ರಾಚೀನತೆಯನ್ನು ಕುರಿತಂತೆ ಮತ್ತು ನೌಬತ್ ಮತ್ತು ಪಂಚಮಹಾ ಶಬ್ದಗಳ ನಡುವಿನ ಸಾಮ್ಯತೆಯನ್ನು ಕುರಿತು ಬರೆದಿರುವ ಆತನ ಲೇಖನಗಳೂ ಸಹ ಗಮನ ಸೆಳೆಯುತ್ತವೆ.

ಕರ್ನಾಟಕದ ಉತ್ತರ ಭಾಗದಲ್ಲಿ ಅಧಿಕಾರಿಯಾಗಿದ್ದುಕೊಂಡೇ, ಅಲ್ಲಿನ ಸ್ಥಳೀಯ ಭಾಷೆಯಾದ ಕನ್ನಡಕ್ಕೆ ಮಾನ್ಯತೆ ತಂದುಕೊಟ್ಟು, ಆ ಭಾಗದಲ್ಲಿ ಮೊದಲ ಕನ್ನಡ ಶಾಲೆಯನ್ನು ಆರಂಭಿಸಿ, ಶಾಸನಗಳ ಸಂಗ್ರಹಣೆ ಮಾಡಿ, ಅವುಗಳನ್ನು ವಿಶ್ಲೇಷಿಸಿ ಲೇಖನಗಳ ಮೂಲಕ ದಾಖಲಿಸಿ, ತನ್ನ ಶಾಸನ ಸಂಗ್ರಹವನ್ನು ಕೆಲವು ಬಹು ಮುಖ್ಯ ಗ್ರಂಥಾಲಯಗಳಲ್ಲಿ ರಕ್ಷಿಸಿದ ಜಾಣತನ ಮತ್ತು ತನ್ನ ಆಳ್ವಿಕೆಯ ದೇಶ ಮತ್ತು ಭಾಷೆಯ ಬಗ್ಗೆ ಪ್ರೀತಿ ಮತ್ತು ಗೌರವಗಳನ್ನು ಇರಿಸಿಕೊಂಡಿದ್ದ ಸರ್ ವಾಲ್ಟರ್ ಎಲಿಯಟ್‌ನನ್ನು ಕನ್ನಡಿಗರು ಮರೆಯುವಂತಿಲ್ಲ. ಅವನು ತೀರಾ ಪ್ರಸಿದ್ಧನೂ ಆಗಲಿಲ್ಲ. ಅವನ ವಿಚಾರಗಳನ್ನು ನಾವು ಈಗ ಪೂರ್ಣವಾಗಿ ಒಪ್ಪಲು ಆಗುವುದಿಲ್ಲವಾದರೂ ಆ ಕಾಲಕ್ಕೆ ಅವನು ವಹಿಸಿದ ಆಸಕ್ತಿ ಮತ್ತು ಶ್ರಮವನ್ನು ಮರೆಯುವಂತಿಲ್ಲ.

ಡಾ|| ಎಚ್. ಎಸ್. ಗೋಪಾಲರಾವ್
'ಸ್ವಸ್ತಿಶ್ರೀ ಸ್ಕಂದ' ಅರಿಶಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ - ೫೬೨ ೧೨೩

# ಇಂದಿನ ಚಲನಚಿತ್ರ ಮಾಧ್ಯಮ ಮತ್ತು ನಾವು

ಚಲನಚಿತ್ರ ಮಾಧ್ಯಮವೆಂಬ ಬೃಹತ್ ವ್ಯವಸ್ಥೆಯ ಕುರಿತು ಮಾತನಾಡುವಾಗ ಅನೇಕ ಪ್ರಶ್ನೆಗಳು ನಮಗೆ ಎದುರಾಗುತ್ತವೆ. ಇಂದಿಗೂ ಕೂಡ ಚಲನಚಿತ್ರವನ್ನು ಒಂದು ಅಗ್ಗದ ಮನೋರಂಜನೆಯಾಗಿ ನಾವು ಸ್ವೀಕರಿಸಿದ್ದೇವೆ. ಈ ಹಿನ್ನೆಲೆಯಲ್ಲಿ ಗಂಭೀರ ಅಥವಾ ಕಲಾತ್ಮಕ ಚಿತ್ರ ಮಾಧ್ಯಮವಂತೂ ತನ್ನ ಅಸ್ತಿತ್ವದ ಉಳಿವಿಗಾಗಿಯೇ ಹೋರಾಡುತ್ತಿದೆ. ಸದಭಿರುಚಿಗೆ ಸುವರ್ಣ ಮಾಧ್ಯಮವಾದದ್ದು ಚಲನಚಿತ್ರ. ಸಾಮಾನ್ಯ ಪ್ರೇಕ್ಷಕನನ್ನೆ ದೃಷ್ಟಿಯಲ್ಲಿಟ್ಟುಕೊಂಡು ತೆಗೆದ ಮನರಂಜನೆಯ ಚಿತ್ರ ಅದ್ಭುತ ಯಶ ಪಡೆದದ್ದು ನಮ್ಮಲ್ಲಿನ ಅಭಿರುಚಿಗೆ ಸವಾಲಾದ ಪ್ರಶ್ನೆಯಾಗಿದೆ. ಇಂದಿಗೂ ಕೂಡ ಕಲಾತ್ಮಕ ಚಿತ್ರಗಳು ಜನರ ಆಲೋಚನಾ ಕ್ರಮದೊಳಗೆ ಚಿಂತನೆಯ ಮಾಧ್ಯಮವಾಗಲೇ ಇಲ್ಲ. ನಗು, ಕಟಕಿ, ಹಾಸ್ಯ ಲೇಪಿತ ನಟನೆ, ಗಂಭೀರತೆಯ ನಡುವೆಯೂ ಮನಸ್ಸಿಗೆ ಮುದ ನೀಡುವ ಕಥಾಹಂದರದ ಚಿತ್ರ ಸಾಮಾನ್ಯರ ನಡುವೆ ಹೊಗಳಿಕೆಗೆ ಪಾತ್ರವಾದರೆ, ಬೌದ್ಧಿಕ ಪ್ರಪಂಚದಲ್ಲಿ ಕೀಳು ಅಭಿರುಚಿಯ ಚಿತ್ರವಾಗಿ ಮೂಲೆಗುಂಪಾಯಿತು. ಈ ಹಿನ್ನೆಲೆಯಲ್ಲಿ ಚಲನಚಿತ್ರಗಳು ಸಾರ್ವಜನಿಕ ಜೀವನದಲ್ಲಿ ಯಾವ ರೀತಿಯ ಪ್ರಭಾವ ಬೀರಿವೆ ಎಂಬುದನ್ನು ನೋಡುವುದು ಮುಖ್ಯವಾಗಿದೆ.

'ನೈತಿಕತೆ'ಯೇ ಈ ಮಾಧ್ಯಮದೊಳಗೆ ಒಂದು ಪ್ರಶ್ನೆ! ಆದರೂ ಅದು ಗಂಭೀರತೆಯನ್ನು ಮೀರಿದ್ದಲ್ಲ. ಬದಲಾವಣೆಯನ್ನು ಬಯಸುವಂಥದ್ದು. ತಂದೆ, ತಾಯಿ, ಅತ್ತೆ, ಸೊಸೆ ಈ ಪಾತ್ರಗಳು ಕಿರಿಯರ ಮನಸ್ಸಿನ ಮೇಲೆ ಸಾಂದರ್ಭಿಕ ಪರಿಣಾಮವನ್ನು ಬೀರುತ್ತಲೇ ನಮ್ಮ ನಡುವಿನ ಕೊಳಕುತನವನ್ನು ಬಯಲಿಗೆಳೆಯುತ್ತವೆ. ಭಯಮಿಶ್ರಿತ ನೈತಿಕ ಪ್ರಜ್ಞೆ ಕೂಡ ಪ್ರೇಕ್ಷಕನಿಗೆ ಚಿಂತನೆಯ ವಸ್ತುವಾಗುತ್ತದೆ. ಹಾಗೆಯೇ ಇಲ್ಲಿ ಗಮನಿಸಬೇಕಾದ ಇನ್ನೊಂದು ಅಂಶ – ನೈತಿಕತೆಯ ಸೋಗಿನಲ್ಲಿಯೇ ಮನಸ್ಸು ಪ್ರಯೋಗಶೀಲತೆಗೆ ಇಳಿದರೆ ಪುನಃ ಜನರ ಕೀಳು ಅಭಿರುಚಿಗೆ ಕನ್ನಡಿಯಾಗುವ ಸಾಧ್ಯತೆಗಳಿವೆ. ಹಾಗಾಗಬಾರದು, ನಮ್ಮಲ್ಲಿ ಅದು ಗಂಭೀರ ಹಾಸ್ಯದೊಂದಿಗೆ ನೈತಿಕತೆಯ ಸುವರ್ಣ ಹಾದಿಯ ಭಾಷ್ಯಕಾರ ಚಿತ್ರ ಮಾಧ್ಯಮವಾಗಬೇಕು. ಅದೂ ಅಲ್ಲದೆ ನಮ್ಮ ಅಭಿರುಚಿಯನ್ನು ನೈತಿಕ ಹಿನ್ನೆಲೆಯಲ್ಲಿ ಪ್ರಶ್ನಿಸುವಂತಿರಬೇಕು. ಆತ್ಮ ವಿಮರ್ಶೆಯ ವಾಹಕವಾಗಬೇಕು. ಆಗ ಮಾತ್ರ ಚಿತ್ರಗಳು ಸಾಮಾನ್ಯರ ಕಂಕುಳಿಂದ ತಲೆಯ ಮಟ್ಟಕ್ಕೇರುವ ಹಾಗೂ ನೈತಿಕತೆ ಕೀಳು ಹವ್ಯಾಸದ ಮಾತಾಗದೆ ಚಿಂತನೆಯ ಕಾರ್ಯಗಳಿಗೆ ಪ್ರೇರಕವಾಗುತ್ತದೆ.

ಈಗಿನ ಚಲನಚಿತ್ರಗಳ ಗುರಿಯೇ ಇತಿಮಿತಿಯುಳ್ಳದ್ದು, ಪಲಾಯನವಾದಕ್ಕೆ ಇಂಬು ಕೊಡುವಂತಹದು. ಜನಸಾಮಾನ್ಯರು ತಮಗೆ ಇಂತಹದು ಬೇಕು ಎಂದು ಬಯಸದೆ ಆರಾಮದ ದಿನದಲ್ಲಿ ಮನರಂಜನೆಗಾಗಿ ಮಾತ್ರ ಚಲನಚಿತ್ರಗಳಿಗೆ ಮೊರೆಹೋಗುವುದು ಸರ್ವೇಸಾಮಾನ್ಯ. ತಾನೊಬ್ಬ ವಿಮರ್ಶಕನಾಗಿ ಚಿತ್ರವನ್ನು ನಿರೀಕ್ಷಿಸುವ ಗುಂಗು ಜನಸಾಮಾನ್ಯನಿಗಿರುವುದಿಲ್ಲ, ಅದು ಅವನ ಕೆಲಸವೂ ಅಲ್ಲ. ಆತನ ತಿಳುವಳಿಕೆ ಜನರ ನಡುವೆ ಚಿತ್ರಗಳಿರಬೇಕು

> *ಚಲನಚಿತ್ರಗಳು ನಮ್ಮ ನಡುವಿನ ಮನೋರಂಜನೆಯ ಸಾಧನವಾದಂತೆ ಅದೊಂದು ಚಿಂತನೆಗೆ ಹಚ್ಚುವ ಮಾಧ್ಯಮವಾಗಬೇಕಾಗಿದೆ. ಸಧ್ಯದ ಎಲ್ಲಾ ಚಿತ್ರಗಳನ್ನು ಸಾರಾಸಗಟಾಗಿ ತಿರಸ್ಕರಿಸುವಷ್ಟು ಮಾಧ್ಯಮ ಹದಗೆಟ್ಟಿದೆ. ಅದೇ ಪ್ರೀತಿ-ಪ್ರೇಮ-ಕಾಮಕ್ಕೆ ವಿವಿಧ ರೂಪಗಳನ್ನು ಕೊಟ್ಟು ಪ್ರೇಕ್ಷಕನ ಸಹನೆಯನ್ನೇ ಪ್ರಶ್ನಿಸುವಂತಾಗಿದೆ. ಈ ಹಿನ್ನೆಲೆಯಲ್ಲಿ ಕೂಡ ದುಡಿವ ಸಾಮಾನ್ಯ ಜನರಿಗೆ ಚಲನ ಚಿತ್ರಗಳು ರಂಜನೆಗಾಗಿಯೇ ಅಲ್ಲದೆ ವಾಸ್ತವತೆಯಿಂದ ಕ್ಷಣಮಾತ್ರ ದೂರ ಸರಿಯುವುದಕ್ಕೂ, ಪಲಾಯನವಾದಕ್ಕೆ ಮಾರುಹೋಗುವುದಕ್ಕೂ ಪೂರಕವಾಗಿಬಿಟ್ಟಿರುವುದು ಶೋಚನೀಯ ಅಂಶ. ಒಟ್ಟಾರೆಯಾಗಿ ಚಿತ್ರಮಾಧ್ಯಮದಂತಹ ಬೃಹತ್ ವ್ಯವಸ್ಥೆಯಲ್ಲಿ-ಸಮಾಜದ ಓರೆಕೋರೆಗಳನ್ನು ತಿದ್ದುವ ಕಾರ್ಯ ಕಿಂಚಿತ್ತಾದರೂ ಆಗಬೇಕಾಗಿದೆ. ಜನಸಾಮಾನ್ಯರನ್ನು ಬದುಕಿನ ಗಂಭೀರ ಚಿಂತನೆಗಳಿಗೆ ಪ್ರೇರೇಪಿಸುವಂತಹ ಚಿತ್ರಗಳ ಅಗತ್ಯವಿದೆ.*

ಎಂಬುದಷ್ಟೆ. ಚಿಂತನಶೀಲತೆಯುಳ್ಳ ಅಥವಾ ಬುದ್ಧಿವಲಯಕ್ಕೆ ಸೀಮಿತವಾದ ಎಷ್ಟೋ ಚಿತ್ರಗಳು ಡಬ್ಬಿಯಲ್ಲೆ ಕೊಳೆಯುವಂತಾಗಿದೆ. ಏಕೆ? ಇತ್ತೀಚಿಗೆ ಬರುವ ಬಹುತೇಕ ಚಿತ್ರಗಳು ಗಂಭೀರವಲ್ಲದ ಕಥಾಹಂದರ ಹಾಗೂ ಅದ್ದೂರಿತನದ ಮೂಲಕ ಜನಪ್ರಿಯವಾಗಿವೆ. ಅಶ್ಲೀಲ ಚಿತ್ರಗಳು ಯಶ ಪಡೆಯುವುದು ಅಪರೂಪವೇನಲ್ಲ. ಇಷ್ಟಾದರೂ ಚಿಂತನೆಗೆ ಹಚ್ಚುವ 'ತಾಯಿ ಸಾಹೇಬ', 'ನಾಗ ಮಂಡಲ', 'ಹಗಲುವೇಷ', 'ಕಾನೂರು ಹೆಗ್ಗಡಿತಿ' ಎಷ್ಟು ಪ್ರೇಕ್ಷಕರನ್ನು ಪಡೆದಿವೆ, ಅವು ಚಿತ್ರವಾಗಿ ಉಳಿದಿರುವುದು ಯಾರಲ್ಲಿ ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ.

ಸುತ್ತಲೂ ಕಣ್ಣಾಡಿಸಿದರೆ ಅಶ್ಲೀಲವಾದ ಲೆಕ್ಕವಿಲ್ಲದಷ್ಟು ಭಿತ್ತಿಚಿತ್ರಗಳು ನಮ್ಮನ್ನು ಚಿತ್ರಮಂದಿರದತ್ತ ಆಕರ್ಷಿಸುವ ಸಾಧನಗಳಾಗಿವೆ. ಏಕೆ ಹೀಗೆ? ನಮ್ಮ ಮನಃಸ್ಥಿತಿಯೇ ಅದಕ್ಕೆ ಪೂರಕವಾಗಿ ಬೆಳೆದಿದೆಯೋ ಅಥವಾ ನಿರ್ದೇಶಕರ ತಂತ್ರವೋ ಎಂಬುದು ಚರ್ಚೆಗೆ ಗ್ರಾಸವಾಗಿರುವ ವಿಚಾರ. ಹಾಲಿವುಡ್, ಬಾಲಿವುಡ್ ಚಿತ್ರಗಳು ಒಟ್ಟಾರೆ ನಮ್ಮ ಮನಸ್ಸಿನ ಮೇಲೆ ಪರಿಣಾಮ ಬೀರಬಹುದಾದರೂ ಆ ಮೂಲಕ ಚಿತ್ರಗಳಿಂದ ನಾವು ಕಲಿತದ್ದೇನು? ಯುವಕರ ಮನಃಸ್ಥಿತಿಯ ಮೇಲೆ ದುಷ್ಪರಿಣಾಮ ಬೀರುವ ಅಶ್ಲೀಲತೆಗೆ ಪೂರಕವಾಗಿ ಬಾಟ್ಲಿ, ಹೆಣ್ಣು, ಹೊನ್ನು ಇವುಗಳ ಕುರಿತು ಅಭೀಪ್ಸೆ ಹೆಚ್ಚಿಸಿ ಸಮಾಜದಲ್ಲಿ ಅನಿಷ್ಟ ಪ್ರವೃತ್ತಿಗಳನ್ನು ಹುಟ್ಟುಹಾಕುವ ಮೂಲಗಳಾಗಿವೆ. ಒಟ್ಟಾರೆ ಅಶ್ಲೀಲತೆಯು ನಮ್ಮ ಇಂದಿನ ಚಿತ್ರಗಳಲ್ಲಿ ಅಗ್ಗದ ಹಣ ಗಳಿಕೆಯ ದೃಷ್ಟಿಯಿಂದ ಉದ್ಭವಿಸುವ ಒತ್ತಾಯದ ತುರುಕುವಿಕೆ ಎಂಬುದು ಸ್ಪಷ್ಟ.

**ಶಿವರಾಮ ಕಾರಗಡಿ**

ಇಷ್ಟಾದರೂ ವಾಸ್ತವದ ದಾಖಲೆಗಾಗಿ ಅಲ್ಲಲ್ಲಿ ಕೆಲವು ಚಿತ್ರಗಳು ನಮ್ಮ ನಡುವೆ ತಮ್ಮ ವಿಶಿಷ್ಟತೆಯನ್ನು ಉಳಿಸಿಕೊಂಡಿವೆ. ಸಾಮಾನ್ಯ ಮತ್ತು ಉತ್ತಮ ಎಂಬ ವರ್ಗೀಕರಣ ನಮ್ಮಗಳ ಬೌದ್ಧಿಕ ಗೊಂದಲದಿಂದ ಪ್ರಾರಂಭವಾದದ್ದು. ಕಮರ್ಷಿಯಲ್ ಚಿತ್ರಗಳು ಪ್ರೇಕ್ಷಕನ ಬದುಕಿನಲ್ಲಿ ಹಾಸುಹೊಕ್ಕಾಗಿವೆ. ಕಲಾ ಚಿತ್ರಗಳಲ್ಲಿ ಆ ಗುಣವಿಲ್ಲ. ಅಂದಿನ ದಿನಗಳ 'ನಾಗರಹಾವು' ಇತ್ತೀಚಿನ 'ಹೂವು-ಹಣ್ಣು' ನಮ್ಮ ನಡುವಿನ ಅನಿಷ್ಟಗಳಿಗೆ ಸ್ಪಂದಿಸಿದ ರೀತಿ ವಿಶಿಷ್ಟವಾದದ್ದು. ಇವುಗಳನ್ನು ನಾವು ಯಾವ ವಿಭಾಗಕ್ಕೆ ಸೇರಿಸಬೇಕು? ಅಂದರೆ ಸಾರ್ವಜನಿಕರಿಗೆ ತೀರಾ ಹತ್ತಿರದ ಚಿತ್ರಗಳಾಗಿ ಆ ಚಿತ್ರಗಳು ಅಚ್ಚೊತ್ತಿವೆ. ನಾವು ಬಯಸುವ ಚಿತ್ರಗಳು ನಮ್ಮ ನಡುವೆ ಹುಟ್ಟಲು ಕಾಲದ ತಡೆಯಂಟೇನು? ಹೀಗೆ ಯೋಚಿಸಿದ ಮನಸ್ಸು 'ತಾಯಿ ಸಾಹೇಬ', 'ಸಂತ ಶರೀಫ', 'ನಾಗಮಂಡಲ', 'ಹಗಲು ವೇಷ', 'ಕಾನೂರು ಹೆಗ್ಗಡಿತಿ', 'ದೇವೀರಿ'ಯಂತಹ ಚಿತ್ರಗಳು ಸಾಮಾನ್ಯ ಪ್ರೇಕ್ಷಕನಿಂದ ಏಕೆ ದೂರವಾಗಿವೆ? ಇವುಗಳೂ ಕೂಡ ನಮ್ಮ ಸಮಸ್ಯೆಯನ್ನು ಬಿಂಬಿಸಿದರೂ ಕೂಡ ಎಲ್ಲ ಸೋತಿವೆ? ಇಷ್ಟೆಲ್ಲಾ ಹೇಳಿದ ಮೇಲೂ ಕಮರ್ಷಿಯಲ್ ಮಾದರಿಯ ಚಿತ್ರಗಳೇ ನಮ್ಮ ಎಲ್ಲಾ ವರ್ಗದ ಪ್ರೇಕ್ಷಕರಲ್ಲಿ ಚರ್ಚೆಯ ವಸ್ತುವಾಗುವುದು ಗಮನಾರ್ಹ.

ಒಂದು ಮನಸ್ಸಿನ ಚಿಂತನೆ ಕೂಡ ಸಾರ್ವಜನಿಕವಾಗಿ ಅಪಹಾಸ್ಯಕ್ಕೆ ಒಳಗಾಗಬಹುದು. ಆದರೂ ಮನಃಸ್ಥಿತಿಯ ಬಗ್ಗೆ ಮಾತನಾಡುವಾಗೆಲ್ಲಾ ನಮ್ಮ ನಡುವಿನ ಬದಲಾವಣೆಗಳೆಷ್ಟು, ಮನಸ್ಸಿನ ಮಾಯಾವಿ ಕಣ್ಣುಗಳೆಷ್ಟು ಎಂದು ಯೋಚಿಸುವಂತಾಗಿದೆ. ಈಗೀಗ ಭಾರತದಲ್ಲಿ ಚಲನ ಚಿತ್ರಗಳು ಕೋಮುವಾದಿಗಳ, ಮತಾಂಧರ ಕೈಗೆ ಸಿಕ್ಕಿ ನಲುಗುತ್ತಿವೆ. ಈ ಮೂಲಕ ಅಭಿವ್ಯಕ್ತಿ ಸ್ವಾತಂತ್ರ್ಯದ ಪ್ರಶ್ನೆಯಂತೂ ರಾಷ್ಟ್ರವ್ಯಾಪಿ ಚರ್ಚೆಯಾಗಿದೆ. ಈ ಹಿನ್ನೆಲೆಯಲ್ಲೂ ನಾವು ಆಸ್ವಾದಕ್ಕಾಗಿ, ಮನಸಂತೋಷಕ್ಕಾಗಿ ಉತ್ತಮ ಚಿತ್ರಗಳನ್ನು ಸದಾ ಬಯಸುತ್ತೇವೆ. ಚಿತ್ರಗಳು ನಮ್ಮ ನಡುವಿನ ಪಾತ್ರಗಳಿಗೆ ಕನ್ನಡಿಯಾದಾಗ ಅದು ಸಮಾಜ ವಿರೋಧಿ, ಅದು ಅಭಿವ್ಯಕ್ತಿಯ ದುರುಪಯೋಗ ಎಂಬಂತಹ ಕಟು ವಿರೋಧವೇ ಹೆಚ್ಚಾದ ಈ ಕಾಲದಲ್ಲಿ ನಾವು ಬಯಸುವುದಾದರೂ ಏನು? ಹೆಣ್ಣಿನ ಅಂಗಾಂಗಗಳೇ ಇಂದಿನ ಚಿತ್ರಗಳ ಜೀವಾಳವಾಗಿರುವಾಗ, 'ಗೌರಮ್ಮ'ನ ಪಾತ್ರಗಳಿಗೆ ಬೆಲೆಯೆಂತು? ದುರಂತವೆಂದರೆ ಸಾಮಾನ್ಯ ಪ್ರೇಕ್ಷಕನ ಬಯಕೆ ಕೂಡ ಅದೇ ಆಗಿದೆ. ಅವನಿಗೆ ಚಿಂತನೆ ಬೇಡ, ರಂಜನೆ ಬೇಕು – ಅದರಲ್ಲಿ ಸಂಘರ್ಷವಿರಲಿ, ಹೆಣ್ಣು-ಗಂಡಿನ ಚಕ್ಕಂದವಿರಲಿ – ಅದೆಲ್ಲಾ ಅವನ ವೀಕ್ಷಣೆಗೆ ಮಾತ್ರ. ನಾವು ಬೆಳಸಿದ ಪ್ರೇಕ್ಷಕರು ಎಷ್ಟು ಹಾಳಾಗಿದ್ದಾರೆ, ಹಾಳು ಮಾಡುವ ಕ್ರಮವೆಂತು ಅನ್ನುವುದು ನಮ್ಮ ಚಿತ್ರೋದ್ಯಮಿಗಳಿಗೆ ಚೆನ್ನಾಗಿ ಮನದಟ್ಟಾಗಿದೆ. ಅವರ ಕೊಳಕು ಮನಸ್ಸಿನ ಸರಕನ್ನೆಲ್ಲ ಪ್ರೇಕ್ಷಕನ ಕರ್ಣ ಪಟಲದ ಅಲ್ಲೋಲ-ಕಲ್ಲೋಲಕ್ಕೆ ತಂದು ಹುಚ್ಚೆಬ್ಬಿಸುತ್ತಾರೆ. ಚಲನಚಿತ್ರಗಳು

೬೦ನೇ ಪುಟಕ್ಕೆ

# ಅರುಣ್ ಶೌರಿಯ ವರ್ಷಿಪಿಂಗ್ ಫಾಲ್ಸ್ ಗಾಡ್ಸ್

ಅರುಣ್ ಶೌರಿ ತಮ್ಮ ''ವರ್ಷಿಪಿಂಗ್ ಫಾಲ್ಸ್ ಗಾಡ್ಸ್''ನಲ್ಲಿ ಅಂಬೇಡ್ಕರರ ಸ್ವಾತಂತ್ರ್ಯ ಹೋರಾಟದ ಇತಿಹಾಸವನ್ನು ತಿರುಚಿ ವಿಕಾರಗೊಳಿಸಲು ಅನುಸರಿಸಿರುವ ತುಂಬಾ ಸುಲಭದ ಒಂದೇ ಒಂದು ವಿಧಾನ ಇಲ್ಲಿ ಗಮನಾರ್ಹ. ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದ ಕುರಿತಂತೆ ಅನೇಕ ದೃಷ್ಟಿಕೋನಗಳಿವೆ. ಆ ಆವೃತ್ತಿಗಳಲ್ಲಿ ಅರುಣ್ ಶೌರಿ ಅನುಸರಿಸಿರುವುದು ಕೇವಲ ಆರೆಸ್ಸೆಸ್ ಆವೃತ್ತಿ ಮಾತ್ರ. ಭಾರತ ಸ್ವಾತಂತ್ರ್ಯ ಸಂಗ್ರಾಮವನ್ನು ಕುರಿತ ಈ ಆವೃತ್ತಿಯು, ಆರೆಸ್ಸೆಸ್‌ನ ಪೂರ್ಣ ವೇಳೆಯ ಕೆಲವು ಆರೆಸ್ಸೆಸ್ ಲೇಖಕರಿಂದಲೇ ಬರೆಯಲ್ಪಟ್ಟಿದೆ. ಅಂಥ ಲೇಖಕರ ಒಂದು ತಂಡವೇ ಆರೆಸ್ಸೆಸ್ ಲಾಂಛನದಡಿ ನಡೆದು ಬಂದಿದೆ. ಈ ಆವೃತ್ತಿ ಎಷ್ಟೊಂದು ಭಯಾನಕವಾಗಿದೆ ಎಂದರೆ, ಕೆಲವು ಮಡಿವಂತ ಮುಖಂಡರಾದ ಬಿ. ಜಿ. ತಿಲಕ್ ಮತ್ತು ವಿ. ಡಿ. ಸಾವರ್ಕರರಂಥವರು ಮಾತ್ರ ಭಾರತದ ಸ್ವಾತಂತ್ರ್ಯ ಸಂಗ್ರಾಮ ಪುರುಷರು ಎಂದು ಬಿಂಬಿಸಲಾಗಿದೆ. ಹಾಗಾಗಿ, ಆರೆಸ್ಸೆಸ್‌ನ ಈ ಆವೃತ್ತಿಯಲ್ಲಿ ಗಾಂಧಿ ಅಥವಾ ನೆಹರು ಮುಖ್ಯರಾಗುವುದೇ ಇಲ್ಲ. ೧೮೫೭ರ ಯೋಧನಾದ ಮಂಗಲ ಪಾಂಡೆಯನ್ನು ಪ್ರಪ್ರಥಮ ಸ್ವಾತಂತ್ರ್ಯಯೋಧ ಎಂಬುದಾಗಿ ಆರೆಸ್ಸೆಸ್‌ನ ಈ ಆವೃತ್ತಿಯಲ್ಲಿ ಎಷ್ಟೊಂದು ವೈಭವದಿಂದ ಬಣ್ಣಿಸಲಾಗಿದೆ ಎಂದರೆ, ಲಂಡನ್‌ನ ಬ್ರಿಟಿಷ್ ಮ್ಯೂಸಿಯಂನಲ್ಲಿ ಇಡಲಾಗಿರುವ, ಆ ಕಾಲದ ಬ್ರಿಟಿಷ್ ಸೇನಾಧಿಕಾರಿಗಳು ನ್ಯಾಯಾಲಯಕ್ಕೆ ಸಲ್ಲಿಸಿದ್ದ ಆರೋಪ ಪಟ್ಟಿಯ ಪ್ರಕಾರ, ಬ್ರಿಟಿಷ್ ಸೇನಾಧಿಕಾರಿಗಳ ಎದೆಗೆ ಗುಂಡು ಹಾರಿಸಿದ ಪ್ರಪ್ರಥಮ ಸ್ವಾತಂತ್ರ್ಯ ಯೋಧ ಮಥಾದಿನ್ ಬಾಗುಲ್ ಎಂಬೊಬ್ಬ ಅಸ್ಪೃಶ್ಯ ಸೈನಿಕನೆಂಬ ವಾಸ್ತವಿಕ ಸತ್ಯಸಂಗತಿಯನ್ನು, ಈ ಆರೆಸ್ಸೆಸ್ ಆವೃತ್ತಿಯಲ್ಲಿ ಒಂದು ರೀತಿಯಲ್ಲಿ ಮರೆಮಾಚಿದರೆ, ಮೇಯಿನ್‌ಸ್ಟ್ರೀಮ್ ಇತಿಹಾಸಕಾರರು ಇನ್ನೊಂದು ರೀತಿಯಲ್ಲಿ ಉಪೇಕ್ಷಿಸಿದ್ದಾರೆ. ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದ ರಚನೆ ಬಹುತೇಕ ನಡೆದು ಬಂದದ್ದೇ ಹೀಗೆ.

'ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಂಬೇಡ್ಕರ' ಪಾತ್ರವನ್ನು ಕುರಿತ ಸಂಶೋಧನಾ ಸಂಪುಟವೊಂದನ್ನು ಪ್ರಕಟಿಸಿದ ನಂತರ ಈ ವಿಷಯವನ್ನು ಕುರಿತಂತೆ ಬೇರೆ ಬೇರೆ ವಿಶ್ವವಿದ್ಯಾನಿಲಯಗಳಲ್ಲಿ ನಡೆದ ಸಮ್ಮೇಳನ ಮತ್ತು ವಿಚಾರ ಸಂಕಿರಣಗಳಲ್ಲಿ ಉದ್ಭವಿಸಿದ ಪ್ರಶ್ನೋತ್ತರಗಳು ನನ್ನ ಶೈಕ್ಷಣಿಕ ವೃತ್ತಿ ಜೀವನದಲ್ಲಿ ಮರೆಯಲಸಾಧ್ಯವೆನಿಸುವ ಮನನೀಯ ಘಟನೆಗಳು ಮತ್ತು ಚಿಂತನೀಯ ವಿಷಯಗಳು. ಆ ಸಂದರ್ಭಗಳಲ್ಲಿ ಎತ್ತಲಾಗಿದ್ದ ಪ್ರಶ್ನೆಗಳಿಗೆಲ್ಲ ಉತ್ತರ ನೀಡಿದ್ದೇನೆ ಎನ್ನುವುದಕ್ಕಿಂತ, ಉತ್ತರಗಳನ್ನು ಅವರಿಂದ ಪಡೆದಿದ್ದೇನೆ ಎನ್ನುವುದೇ ಸರಿಯಾದ ಮತ್ತು ಅರ್ಥಪೂರ್ಣವಾದ ಅಭಿವ್ಯಕ್ತಿ. ಅಂತಹ ಸಂದರ್ಭಗಳ ಪೈಕಿ ಜವಾಹರಲಾಲ ನೆಹರು ವಿಶ್ವವಿದ್ಯಾನಿಲಯದ ಕಾನೂನು ಪಂಡಿತರಾದ ಪ್ರೊ. ಸುರೇಂದ್ರನಾಥ ಭಕ್ಷಿ ಮತ್ತು ಇತಿಹಾಸ ವಿದ್ವಾಂಸರಾದ ಪ್ರೊ. ಬಿ. ಎಲ್. ನಂದೂರಾಮ್‌ರವರಂಥ ವಿದ್ವಾಂಸರೊಡನೆ ಉಂಟಾದ ಚರ್ಚೆಯಿಂದ ನನ್ನ ಎಷ್ಟೋ ಗ್ರಹಿಕೆಗಳು ಒಂದು ಸ್ಪಷ್ಟ ರೂಪವನ್ನೇ ಪಡೆದವು.

ಈವರೆಗೆ ಅಂಬೇಡ್ಕರರ ಬಗೆಗೆ ಹಲವಾರು ಸಂಶೋಧನ ಸಂಪುಟಗಳು ಲೋಕದ ಹಲವಾರು ವಿಶ್ವವಿದ್ಯಾನಿಲಯಗಳಿಂದ ಪ್ರಕಟವಾಗಿವೆ. ಅಂಬೇಡ್ಕರರ ಚಿಂತನೆಯ ಹಲವಾರು ಕ್ಷೇತ್ರಗಳಲ್ಲಿನ ವಿಷಯ ವೈವಿಧ್ಯತೆಯನ್ನು ಸಹ ಅವು ಚರ್ಚಿಸುತ್ತವೆ. ಆದರೆ ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಅಂಬೇಡ್ಕರರ ಕೊಡುಗೆ ಏನೆಂಬ ವಿಷಯದ ಕುರಿತಂತೆ ಬಹಳ ಮಂದಿ ವಿದ್ವಾಂಸರು ಸೂಕ್ತ ಸಂಶೋಧನೆಗಳನ್ನು ಕೈಗೊಂಡಂತಿಲ್ಲ; ಆ ಕ್ಷೇತ್ರ ತುಂಬಾ




ಕಠಿಣವಾದುದೆಂಬುದು ಅದಕ್ಕೆ ಕಾರಣವೋ, ಅಥವಾ ಮೇಯಿನ್‌ಸ್ಟ್ರೀಮ್ ಇತಿಹಾಸಕಾರರು ಮೆಚ್ಚಲಾಗದ, ಅಥವಾ ಆ ವಿಷಯದಲ್ಲಿ ಕೆಲವು ಕಟುವಾದ ತೀರ್ಮಾನಗಳಿಗೆ ಬರಬೇಕಾದುದು ಅನಿವಾರ್ಯ ಎಂಬುದು ಆ ಸ್ಥಿತಿಗೆ ಕಾರಣವೋ ತಿಳಿಯುವಂತಿಲ್ಲ. ಈ ರೀತಿಯ ಕಾರಣಗಳು ಏನೇ ಇದ್ದರೂ ಮತ್ತು ಎಷ್ಟೇ ಇದ್ದರೂ ಭಾರತ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸದಲ್ಲಿ ಅಂಬೇಡ್ಕರರ ಪಾತ್ರವೇನು ಎಂಬುದನ್ನು ಇನ್ನು ಬಹಳ ಕಾಲ ಬಚ್ಚಿಡುವಂತಿಲ್ಲ. ಅದಕ್ಕೆ ಒಂದೇ ಒಂದು ಕಾರಣವನ್ನು ಗ್ರಹಿಸುವುದಾದರೂ, ದೇಶದ ಸ್ವಾತಂತ್ರ್ಯ ಸಂಗ್ರಾಮದ ೧೯೩೦ರಿಂದ ೪೭ರ ವರೆಗಿನ ಕಾಲಘಟ್ಟದಲ್ಲಿ ಗಾಂಧೀಜಿಯವರ ಸೈದ್ಧಾಂತಿಕ ನೆಲೆಗಳ ವಾಸ್ತವಿಕತೆ ಎಂತೋ, ಅಂತೆಯೇ, ಮಹಾಮದಾಲಿ ಜಿನ್ನಾರ ಸೈದ್ಧಾಂತಿಕ ನೆಲೆಗಳು ಕೂಡ. ಅಂತೆಯೇ ಅಂಬೇಡ್ಕರರು ಕಂಡುಕೊಂಡಂಥ ಸೈದ್ಧಾಂತಿಕ ನೆಲೆಗಳು ನಿರ್ದಿಷ್ಟವಾಗಿಯೂ ಮತ್ತು ನಿರ್ದುಷ್ಟವಾಗಿಯೂ ಇವೆ. ಅಲ್ಲದೆ ಆ ಕಾಲಘಟ್ಟದಲ್ಲಿ ಒಂದು ವಿಶಾಲ ಜನವರ್ಗದ ಮುಖಂಡರಾಗಿ ಬದುಕಿದ್ದವರು ಅಂಬೇಡ್ಕರರು ಎಂಬುದನ್ನಂತೂ ಯಾರೂ ಮರೆಯುವಂತಿಲ್ಲ.

೧೯೯೭ರಲ್ಲಿ ಅರುಣ್ ಶೌರಿಯ ವಿವಾದಿತ ಗ್ರಂಥ ''ವರ್ಷಿಪಿಂಗ್ ಫಾಲ್ಸ್ ಗಾಡ್ಸ್'' ಪ್ರಕಟವಾಯಿತು. ಆ ಗ್ರಂಥದ ಬಗೆಗೆ ದೇಶಾದ್ಯಂತ ಚರ್ಚೆ ನಡೆಯಿತು. ಪಾರ್ಲಿಮೆಂಟಿನಲ್ಲಿ ಪಕ್ಷಾತೀತವಾದ ಮತ್ತು ಆಕ್ರೋಶ ಭರಿತ ಪ್ರತಿಕ್ರಿಯೆಯೇ ವ್ಯಕ್ತವಾಯಿತು. ಜಯಂತಿ ನಟರಾಜನ್‌ರಂಥ ಸಂಸತ್ ಸದಸ್ಯರು, ಅಂಬೇಡ್ಕರರ ಇತಿಹಾಸವನ್ನು ತಿರುಚಿ ವಿಕಾರಗೊಳಿಸಿರುವ ಅರುಣ್ ಶೌರಿಯನ್ನು ಜೈಲಿಗೆ ಹಾಕಬೇಕೆಂದು ಸಂಸತ್‌ನಲ್ಲಿ ವಾದಿಸಿದುದಾಗಿಯೂ ವರದಿಯಾಯಿತು. ದೇಶಾದ್ಯಂತ ನೂರಾರು ದಲಿತ ಸಂಘಟನೆಗಳು ಶೌರಿಯ ವಿರುದ್ಧ ಪ್ರತಿಭಟನೆಯನ್ನೂ ವ್ಯಕ್ತಪಡಿಸಿದವು. ಅವರ ಪುಸ್ತಕ ಮತ್ತು ಪ್ರತಿಕೃತಿ ಎರಡನ್ನೂ ದಹಿಸಲಾಯಿತು. ಮುಂಬೈನಲ್ಲಂತೂ ಶೌರಿಯ ಮೇಲೆ ದಲಿತ ಯುವಕನೊಬ್ಬನಿಂದ ಹಲ್ಲೆ ಯತ್ನವೂ ನಡೆಯಿತು. ಆದರೆ ಈ ಯಾವುವೂ ಅರುಣ್ ಶೌರಿಗೆ ಉತ್ತರವೆನಿಸಲು ಸಾಧ್ಯವಿಲ್ಲ. ಪ್ರತಿಯಾಗಿ, ಅರುಣ್ ಶೌರಿ ಇತಿಹಾಸವನ್ನು ಎಲ್ಲಿ ಮತ್ತು ಹೇಗೆ ತಿರುಚಿ ವಿಕಾರಗೊಳಿಸಿದ್ದಾರೆ ಎಂಬುದನ್ನು ಸಾಕ್ಷ್ಯ ಮತ್ತು ಪುರಾವೆಗಳ ಸಹಿತ ರುಜುವಾತುಪಡಿಸುವುದು ಮಾತ್ರ ಅವರಿಗೆ ಸರಿಯಾದ ಮತ್ತು ಏಕಮಾತ್ರ ಉತ್ತರದ ವಿಧಾನ. ಹಾಗೆ ನೋಡಿದರೆ, ದೇಶದ ಮತ್ತು ದೇಶವಾಸಿಗಳ ಸ್ವಾತಂತ್ರ್ಯ ಸಂಘರ್ಷದ ಚರಿತ್ರೆಯ ಒಂದು ಅವಿಭಾಜ್ಯ ಅಂಗವೇ ಆಗಿರುವ ಅಂಬೇಡ್ಕರರನ್ನು ಯಾರೂ ರಕ್ಷಿಸುವ ಅಗತ್ಯವಿಲ್ಲ; ಅಂಬೇಡ್ಕರರ ಬಗೆಗೆ ಅರುಣ್ ಶೌರಿಯ ಅಭಿಪ್ರಾಯವೇ ಅಂತಿಮವಾದುದೇನಲ್ಲ. ಅವರದ್ದು ಕೇವಲ ಒಂದು ಅಭಿಪ್ರಾಯವೇ ಹೊರತು ಅಂಬೇಡ್ಕರರನ್ನು ಕುರಿತಂತೆ ಮತ್ತಾವ ಅಭಿಪ್ರಾಯಗಳೂ ಇಲ್ಲವೆಂತಲೂ ಭಾವಿಸಬೇಕಾದ್ದಿಲ್ಲ. ಸ್ವಾತಂತ್ರ್ಯಪೂರ್ವದಲ್ಲಿ ಕೋಮು ಪ್ರಾತಿನಿಧ್ಯವನ್ನೂ, ಭಾರತ ಸ್ವಾತಂತ್ರ್ಯದಂಥ ವಿಷಯವನ್ನೂ ಕುರಿತು ಬ್ರಿಟಿಷ್ ಮಹಿಳೆ ಕೆಥರಿನ್ ಮೇಯೋ ಬರೆದ ''ಮದರ್ ಇಂಡಿಯಾ'' ಎಂಬ ಗ್ರಂಥವೇ ಅಂತಿಮ ಸತ್ಯ ಎಂದೇನೂ ಆಗಲಿಲ್ಲವಲ್ಲ ಹಾಗೆ. ಅದೊಂದು ಸೃಷ್ಟಿ ಮತ್ತು ಧೋರಣೆ ಮಾತ್ರವಾಯಿತು. ಅದೊಂದು ಮೂಲಭೂತ ವಿಷಯವನ್ನು ಪ್ರತಿಪಾದಿಸಿತು ಎಂಬುದು ಸತ್ಯವೇ ಆದರೂ, ಆ ವಿಷಯವನ್ನು ಕುರಿತಂತೆ ಅನಂತರ ಕೆಥರಿನ್ ಮೇಯೋ

ಪ್ರೊ॥ ಮ. ನ. ಜವರಯ್ಯ

ವಿರುದ್ಧದ ಹಲವಾರು ಸಂಪುಟಗಳೂ ಅವುಗಳ ದೃಷ್ಟಿ ಮತ್ತು ಧೋರಣೆಗಳೂ ವ್ಯಕ್ತವಾದುವೆಂಬುದನ್ನು ಮರೆಯುವಂತಿಲ್ಲ. ಆದ್ದರಿಂದ, ಅಂಬೇಡ್ಕರ್ ಇತಿಹಾಸದ ಕುರಿತ ಅರುಣ್ ಶೌರಿಯ ಬರವಣಿಗೆಯ ಚಾರಿತ್ರಿಕ ಯಥಾರ್ಥತೆಯನ್ನು ಪ್ರಶ್ನಿಸಿ ಪ್ರತಿಪಾದಿಸಬೇಕೇ ವಿನಾ ಅವರ ವಿರುದ್ಧದ ಪ್ರತಿಭಟನೆಯೂ ಸರಿಯಲ್ಲ, ಅವರ ಮೇಲಿನ ಹಲ್ಲೆ ಯತ್ನವಂತೂ ಯಾರೂ ಮೆಚ್ಚತಕ್ಕದ್ದೂ ಅಲ್ಲ.

ಇತಿಹಾಸ ತನ್ನ ಚಲನೆಯನ್ನು ತಾನೇ ಕಂಡುಕೊಂಡಿರುತ್ತದೆ; ಅದರ ವ್ಯಕ್ತಿತ್ವ ತನ್ನ ತಾನೇ ರೂಪಿತವಾಗಿರುತ್ತದೆ; ನಂತರದ ತಲೆಮಾರುಗಳಿಗೆ ಅದು ಸ್ವೀಕೃತವೂ ಆಗಿರುತ್ತದೆ. ಆದರೆ, ಅದರ ಚಲನೆಯ ಸ್ವಾಭಾವಿಕತೆಯನ್ನು ವಿಕಾರ ಗೊಳಿಸುವ ಮತ್ತು ಅದರ ಸಹಜ ಚಲನೆಯನ್ನು ಹಿಮ್ಮೆಟ್ಟಿ ಸುವ ಇತಿಹಾಸ ವಿರೋಧಿ ಅಪಸ್ವರಗಳು ಉಂಟಾದಾಗ ಜನಜೀವನ ಭಾವನಾತ್ಮಕವಾಗಿ ತಲ್ಲಣಗೊಳ್ಳುವುದು ಒಂದು ಸಾಮಾನ್ಯ ಸಂಗತಿ; ಬೌದ್ಧಿಕ ವಲಯದಲ್ಲಿ ಉಂಟಾಗುವ ಆ ರೀತಿಯ ತಳಮಳವಂತೂ ಮಾನವನ ಬೌದ್ಧಿಕ ಜೀವಂತಿಕೆಯ ಲಕ್ಷಣವೇ ಸರಿ. ಹಾಗಾಗಿ, ಈ ದೃಷ್ಟಿಯಲ್ಲಿ ಅಂಬೇಡ್ಕರರ ಇತಿಹಾಸದ ಬಗೆಗೆ ಅರುಣ್ ಶೌರಿ ಎತ್ತಿದ ಅಪಸ್ವರಗಳನ್ನೂ, ಅವುಗಳ ವಿಪರೀತಗಳನ್ನೂ ಪರಿಶೀಲಿಸಿ, ಆ ರೀತಿಯ ಅಪಸ್ವರಗಳನ್ನು ಸಾಧಾರವಾಗಿಯೂ ಸಮರ್ಥವಾಗಿಯೂ ವಿಫಲಗೊಳಿಸುವುದು ಮಾತ್ರ ಚಲನಶೀಲ ಇತಿಹಾಸಕ್ಕೆ ಕೊಡುಗೆಯಾಗಬಹುದು; ಪ್ರಾಯಶಃ ಈ ದೃಷ್ಟಿಯಲ್ಲೆ ಅರುಣ್ ಶೌರಿ ಪುಸ್ತಕವನ್ನು ಓದಬೇಕಾಗಿರುವುದು. ಮನುಸ್ಮೃತಿ ಬರೆದ ಕಾಲಕ್ಕೆ ಮಾನವನ ಆದಿ ಅಂತ್ಯವೆಲ್ಲ ಅದೇ ಎಂದು ಪರಿಪರಿಯಾಗಿ ಪ್ರಚಾರಿಸಲಾಗಿತ್ತು. ಅಲ್ಲದೆ, ಅದನ್ನು ಬರೆದವರೂ ಓದುವವರೂ ಒಂದೇ ವರ್ಗದ ಜನರಾಗಿದ್ದರು. ಅಲ್ಲಿ ಏನಿದೆ ಎಂಬುದನ್ನು ತಿಳಿಯುವುದು ಅನ್ಯರಿಗೆ ಅಸಾಧ್ಯವಾಗಿತ್ತು. ಆದರೆ ಇದು ಆ ಕಾಲವೂ ಅಲ್ಲ, ಅದನ್ನು ಯಾರೂ ಒಪ್ಪುವುದೂ ಇಲ್ಲ. ಆದ್ದರಿಂದಲೇ ಅಂಬೇಡ್ಕರರನ್ನು ಕುರಿತ ಅರುಣ್ ಶೌರಿಯ ಪುಸ್ತಕ ಆದಿಯೂ ಅಲ್ಲ ಅಂತ್ಯವೂ ಅಲ್ಲ; ಕೇವಲ ಅದೊಂದು ಪುಸ್ತಕ ಮಾತ್ರ; ಬಹಳವೆಂದರೆ ಕೇವಲ ಒಂದು ಚರ್ಚಾಸ್ಪದವಾದ ಪುಸ್ತಕವಷ್ಟೆ.

ಪ್ರಸ್ತುತ ''ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಂಬೇಡ್ಕರ್'' ಎಂಬ ಸಂಪುಟದಲ್ಲಿ ಎತ್ತಲಾದ ಕೆಲವು ಮಹತ್ವದ ಪ್ರಶ್ನೆಗಳಿಗೆ, ಅರುಣ್ ಶೌರಿಯ ''ವರ್ಷಿಪಿಂಗ್ ಫಾಲ್ಸ್ ಗಾಡ್ಸ್''ನಲ್ಲಿ ಯಾವ ಉತ್ತರವೂ ಇರುವುದಿಲ್ಲ. ೧೯೩೦ರಲ್ಲಿ ಲಂಡನ್‌ನಲ್ಲಿ ನಡೆದ ಚಕ್ರಾಧಿವೇಶನದ ಸಂದರ್ಭದಲ್ಲಿ ವಿವಿಧ ಧರ್ಮಗಳ ಮತ್ತು ಜನವರ್ಗಗಳ ಸಂವಿಧಾನಾತ್ಮಕ ಹಕ್ಕುಗಳ ವಿಷಯಗಳು ಇತ್ಯರ್ಥವಾಗುವವರೆಗೆ, ರಾಜಕೀಯ ಅಧಿಕಾರ ಬ್ರಿಟಿಷರಿಂದ ಭಾರತೀಯರಿಗೆ ಹಸ್ತಾಂತರವಾಗುವುದನ್ನು ವಿರೋಧಿಸಿದ ಅಂಬೇಡ್ಕರರ ನಿಲುವನ್ನು ಪ್ರಶ್ನಿಸಿದ ಅರುಣ್ ಶೌರಿ, ಅದೇ ರೀತಿಯ ನಿಲುವನ್ನು ತಳೆದ ಮುಸ್ಲಿಂ ಮುಖಂಡರು, ಹಿಂದುಳಿದ ವರ್ಗಗಳ ಮುಖಂಡರು, ಸಿಖ್ಖರು, ಕ್ರಿಶ್ಚಿಯನ್ನರು ಮತ್ತು ಆದಿವಾಸಿಗಳ ಪರವಾಗಿಯೂ ಅದೇ ಅಧಿವೇಶನದಲ್ಲಿ ವ್ಯಕ್ತವಾದ ಅದೇ ರೀತಿಯ ನಿಲುವನ್ನು ಯಾಕೆ ಪ್ರಶ್ನಿಸಲಿಲ್ಲವೆಂಬ ಪ್ರಶ್ನೆಗೆ, ಅರುಣ್ ಶೌರಿಯ ೬೬೩ ಪುಟದ ಪುಸ್ತಕದ ಯಾವ ಪುಟದಲ್ಲೂ ಉತ್ತರ ಇರುವುದಿಲ್ಲ. ಆ ವಿಷಯದಲ್ಲಿ ಅರುಣ್ ಶೌರಿ ಕೇವಲ ಅಂಬೇಡ್ಕರರನ್ನು ಮಾತ್ರ ಪ್ರಶ್ನಿಸಿರುವುದರ ಅರ್ಥವೇನು?



ನೀನು ಬಂಗಲೆಯ ಕನಸು ಇನ್ನು ಕಾಣಬಹುದು... ಇಷ್ಟರಲ್ಲೇ ಕಾಮಗಾರಿ ಶುರುವಾಗುತ್ತೆ!

ಅಂಬೇಡ್ಕರರು ಭಾರತ ಸ್ವಾತಂತ್ರ್ಯ ವಿರೋಧಿಯಾಗಿದ್ದರು ಎಂಬ ಆಧಾರರಹಿತ ಮತ್ತು ಅಪಕ್ವವಾಗಿ ಬರೆಯುವ ಶೌರಿಯ ಪುಸ್ತಕದ ಹಿನ್ನೆಲೆಯಲ್ಲಿರುವ ಅಂಬೇಡ್ಕರರ ಏಕಮಾತ್ರ ಸಂಪುಟವೆಂದರೆ, ಭಾರತ ವಿಭಜನೆಯನ್ನು ಕುರಿತ ''ಪಾರ್ಟಿಷನ್ ಆಫ್ ಇಂಡಿಯಾ'' ಎಂಬುದು. ಈ ಸತ್ಯ ಅಂಬೇಡ್ಕರರನ್ನು ಕುರಿತ ಸಮಗ್ರ ಅಧ್ಯಯನವನ್ನು ಕೈಗೊಂಡವರಿಗೆ ಮಾತ್ರ ಅರ್ಥವಾಗುತ್ತದೆ. ಕ್ರಿ. ಶ. ಸುಮಾರು ೭೧೭ರಿಂದ ಹದಿನೆಂಟನೆಯ ಶತಮಾನದ ಆರಂಭದವರೆಗೂ ಭರತ ಖಂಡದ ಹಲವಾರು ಭಾಗಗಳನ್ನು ಗೆದ್ದು ಆಳಿದ ಹಲವಾರು ಮುಸ್ಲಿಂ ಸಾಮ್ರಾಜ್ಯಗಳಲ್ಲಿ ಮಡಿವಂತ ಹಿಂದೂಗಳು ಮೂರನೆಯ ದರ್ಜೆ ಗುಲಾಮರಾಗಿದ್ದರು ಎಂಬುದಕ್ಕೆ ಅಂಬೇಡ್ಕರರು ನೀಡುವ ಸಾಕ್ಷ್ಯಗಳನ್ನೂ, ಪುರಾವೆಗಳನ್ನೂ ವಿಫಲಗೊಳಿಸುವುದು ಶೌರಿಗೆ ಸಾಧ್ಯವಾಗಿಲ್ಲ. ಅಂಬೇಡ್ಕರರ ಆ ಸಂಪುಟವನ್ನು ನಿರರ್ಥಕಗೊಳಿಸುವುದು ಅಸಾಧ್ಯವೆಂಬುದನ್ನು ಮನಗಂಡ ಅರುಣ್ ಶೌರಿ, ಅಂಬೇಡ್ಕರರ ಇತಿಹಾಸವನ್ನು ತಿರುಚಿ ವಿಕಾರಗೊಳಿಸಲು ಅನುಸರಿಸಿದ ವ್ಯಭಿಚಾರಿ ವಿಧಾನವೆಂದರೆ, ಅಂಬೇಡ್ಕರರನ್ನು ಕುರಿತಂತೆ ಕೇವಲ ಕೆಲವು ಆಯ್ದ ಗ್ರಂಥಭಾಗಗಳ ಅಧ್ಯಯನ ವಿಧಾನ; ಅಂದರೆ, ಇದು ಅಂಬೇಡ್ಕರರನ್ನು ಕುರಿತ ಸಮಸ್ತ ಅಧ್ಯಯನಕ್ಕೆ ವಿರುದ್ಧವಾದುದು. ಆ ಕಾರಣದಿಂದಲೇ ಅಂಬೇಡ್ಕರರ ಬಗೆಗೆ ಅರುಣ್ ಶೌರಿ ತಮ್ಮ ಪುಸ್ತಕದಲ್ಲಿ ಬರೆದುಕೊಂಡಿರುವ ಯಾವ ಅಭಿಪ್ರಾಯವೂ ಸಮಗ್ರ ಅಧ್ಯಯನ ಬಲದಿಂದ ಬಂದುದಾಗಿಲ್ಲ. ಚರಿತ್ರೆಯನ್ನು ವಿಕಾರಗೊಳಿಸಲು ಈ ವಿಧಾನ ಶೌರಿಗೆ ತುಂಬಾ ಸುಲಭವಾದುದು. ಆದರೂ, ಇದು ಆರೆಸ್ಸೆಸ್ ವಿಧಾನ ಎಂಬುದನ್ನಾಗಲಿ, ಆರೆಸ್ಸೆಸ್ ಇತಿಹಾಸವೂ ಅದರ ಮುಖಂಡರೂ ನಡೆದು ಬಂದ ದಾರಿ ಇದೇ ಆಗಿದೆ ಎಂಬುದನ್ನಾಗಲಿ ಸುಲಭವಾಗಿ ಮರೆಮಾಚಲಾಗದು.

ಅಂಬೇಡ್ಕರರನ್ನು ಕುರಿತು ಬರೆದ ಹೆಚ್ಚಿನ ಸಂಖ್ಯೆಯ ವಿದ್ವಾಂಸರು, ಅವರೊಬ್ಬ ಶೋಷಿತ ವರ್ಗಗಳ ಮುಖಂಡರು ಎಂಬ ಒಂದೇ ಒಂದು ಅಂಶವನ್ನು ಬಣ್ಣಿಸಲು ತಮ್ಮ ಬರವಣಿಗೆಗಳಲ್ಲಿ ಎಷ್ಟೊಂದು ಉತ್ಸಾಹ ತೋರಿರುವರೆಂದರೆ, ರಾಷ್ಟ್ರದ ಸಮುದಾಯ ಬದುಕಿಗೂ, ಬೌದ್ಧಿಕ ಬೆಳವಣಿಗೆಯ ಎತ್ತರ ಮತ್ತು ವಿಸ್ತರಣೆಗೂ, ಸಾಂಸ್ಕೃತಿಕ ಮೌಲ್ಯ ಪರಿವರ್ತನೆಯ ಜಿಜ್ಞಾಸೆಗೂ, ಅದೇ ಅಂಬೇಡ್ಕರರು ಮಾಡಿದ ಕೊಡುಗೆಯನ್ನು ಗ್ರಹಿಸುವ ಮತ್ತು ವಿಶ್ಲೇಷಿಸುವ ಯತ್ನಗಳು ಬಹಳ ನಡೆದಂತೆ ತೋರುವುದೇ ಇಲ್ಲ. ಪ್ರಸ್ತುತ ಅರುಣ್ ಶೌರಿಯ ಪುಸ್ತಕದಲ್ಲಂತೂ ಅದರ ಗಂಧಗಾಳಿಯೂ ಸುಳಿದಿಲ್ಲ.

''ಭಾರತ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅಂಬೇಡ್ಕರ್'' ಎಂಬ ಸಂಪುಟದಲ್ಲಿ ಆರೆಸ್ಸೆಸ್‌ನ ಮುಖಂಡರಾಗಿದ್ದ ದಿವಂಗತ ಎಂ. ಎಸ್. ಗೋಲ್ವಾಲ್ಕರ್‌ರವರ ಬಗೆಗೆ ವಿಶ್ಲೇಷಣಾತ್ಮಕ ಚಿಂತನೆಯಲ್ಲಿ ತೊಡಗಲು ಮತ್ತು ಬರೆಯಲು ನನಗೆ ಮೂಲಪ್ರೇರಣೆ ದೊರೆತದ್ದು ೧೯೭೦ರಲ್ಲಿ ಪ್ರಕಟವಾದ ಪ್ರೊ. ಜಿ. ರಾಮಕೃಷ್ಣ (ಆರ್ಯಮನ್) ಅವರ ''ಗೋಲ್ವಾಲ್ಕರ ಸಂಸ್ಕೃತಿಯ ವೈಚಿತ್ರ್ಯ'' ಎಂಬ ವಿಚಾರ ಪ್ರಚೋದಕ ಪುಸ್ತಕದಿಂದ. ಪ್ರಾಯಶಃ ಈ ಪುಸ್ತಕ ಗೋಲ್ವಾಲ್ಕರ್‌ರವರು ಬದುಕಿದ್ದ ಕಾಲದಲ್ಲೇ ಪ್ರಕಟವಾಗಿರಬೇಕೆಂದು ತೋರುತ್ತದೆ.


**ಪ್ರೊ. ಮ. ನ. ಜವರಯ್ಯ (ಮನಜ)**
ಇ-೪೭, ೧ನೇ ಹಂತ, ಜೆ. ಟಿ. ಬಡಾವಣೆ
ಕುವೆಂಪುನಗರ, ಮೈಸೂರು-೫೭೦ ೦೨೩


*೫೮ನೇ ಪುಟದಿಂದ*

ನಮ್ಮ ನಡುವಿನ ಮನೋರಂಜನೆಯ ಸಾಧನವಾದಂತೆ ಅದೊಂದು ಚಿಂತನೆಗೆ ಹಚ್ಚುವ ಮಾಧ್ಯಮವಾಗಬೇಕಾಗಿದೆ. ಸದ್ಯದ ಎಲ್ಲಾ ಚಿತ್ರಗಳನ್ನು ಸಾರಸಗಟಾಗಿ ತಿರಸ್ಕರಿಸುವಷ್ಟು ಮಾಧ್ಯಮ ಹದಗೆಟ್ಟಿದೆ. ಅದೇ ಪ್ರೀತಿ-ಪ್ರೇಮ-ಕಾಮಕ್ಕೆ ವಿವಿಧ ರೂಪಗಳನ್ನು ಕೊಟ್ಟು ಪ್ರೇಕ್ಷಕನ ಸಹನೆಯನ್ನೇ ಪ್ರಶ್ನಿಸುವಂತಾಗಿದೆ. ಈ ಹಿನ್ನೆಲೆಯಲ್ಲಿ ಕೂಡ ದುಡಿವ ಸಾಮಾನ್ಯ ಜನರಿಗೆ ಚಲನಚಿತ್ರಗಳು ರಂಜನೆಗಾಗಿಯೇ ಅಲ್ಲದೆ ವಾಸ್ತವತೆಯಿಂದ ಕ್ಷಣಮಾತ್ರ ದೂರ ಸರಿಯುವುದಕ್ಕೂ, ಪಲಾಯನವಾದಕ್ಕೆ ಮಾರು ಹೋಗುವುದಕ್ಕೂ ಪೂರಕವಾಗಿರುವುದು ಗಮನಿಸಬೇಕಾದ ಅಂಶ. ಒಟ್ಟಾರೆಯಾಗಿ ಚಿತ್ರಮಾಧ್ಯಮದಂತಹ ಬೃಹತ್ ವ್ಯವಸ್ಥೆಯಲ್ಲಿ ಸಮಾಜದ ಓರೆ ಕೋರೆಗಳನ್ನು ತಿದ್ದುವ ಕಾರ್ಯ ಕಿಂಚಿತ್ತಾದರೂ ಆಗಬೇಕಾಗಿದೆ. ಜನಸಾಮಾನ್ಯರನ್ನು ಬದುಕಿನ ಗಂಭೀರ ಚಿಂತನೆಗಳಿಗೆ ಪ್ರೇರೇಪಿಸುವಂತಹ ಚಿತ್ರಗಳ ಅಗತ್ಯವಿದೆ.


ಶಿವರಾಮ ಕಾರಗಡಿ
ಹನಿಯ (ಅಂಚೆ), ಹೊಸನಗರ (ತಾ), ಶಿವಮೊಗ್ಗ ಜಿಲ್ಲೆ

# ಎರಡನೇ ಪ್ರಕಾರದ ಮಧುಮೇಹ

**"ಎರಡನೇ ಪ್ರಕಾರದ ಮಧುಮೇಹ ಒಂದು ರೋಗವೇ ?"** ಈ ತಲೆಬರಹ ತಲೆಕೆಡಿಸಿಲ್ಲವಾದರೂ ತಲೆ ಬರಹವನ್ನು ಸಮರ್ಥಿಸಲು ಬರೆದ ವಿಷಯಗಳು ಸಾಮಾನ್ಯರಿಗೆ ಗೋಜಲು ಉಂಟುಮಾಡಬಹುದಾಗಿದೆ. ಆದ್ದರಿಂದ ಈ ಲೇಖನವನ್ನು ವಿಶ್ಲೇಷಿಸಲು ಇಲ್ಲಿ ಪ್ರಯತ್ನಿಸಿದ್ದೇನೆ.

ಎರಡನೇ ಪ್ರಕಾರದ ಮಧುಮೇಹ ರೋಗ ಇಂದಿನ ದಿನಗಳಲ್ಲಿ ಹೆಚ್ಚುತ್ತಿರುವ ಪ್ರಮುಖ ರೋಗ. ಈ ರೋಗ ಆಧುನಿಕ ಜೀವನಶೈಲಿಯಿಂದುಂಟಾದ ರೋಗವೆಂದು ಪರಿಗಣಿಸಲಾಗುತ್ತಿದೆ. ಮಧುಮೇಹ ರೋಗಿಗಳಲ್ಲಿ ಇನ್ಸುಲಿನ್ ಕೊರತೆ ಇರುತ್ತದೆ. ಕೆಲವು ಬಾರಿ ದೇಹದಲ್ಲಿ ಇನ್ಸುಲಿನ್ ಇದ್ದರೂ, ಆ ಇನ್ಸುಲಿನ್‌ಗೆ ಪ್ರತಿರೋಧವಿರುವುದರಿಂದ ಸಕ್ಕರೆ ಕಾಯಿಲೆ ಉಂಟಾಗಿರುತ್ತದೆ. ಎರಡನೇ ಪ್ರಕಾರದ ಮಧುಮೇಹದಲ್ಲಿ ಇಂತಹ ಸನ್ನಿವೇಶ ಸಹಜ. ಆದ್ದರಿಂದ ಎರಡನೇ ಪ್ರಕಾರದ ಮಧುಮೇಹ ರೋಗಿಗಳಿಗೆ ಇನ್ಸುಲಿನ್ ಕೊಡುವ ಅಗತ್ಯತೆ ಇರುವುದಿಲ್ಲ. ಈ ರೋಗದ ಚಿಕಿತ್ಸೆಯಲ್ಲಿ ಆಹಾರ ಪಥ್ಯ ಹಾಗೂ ವ್ಯಾಯಾಮ ಪ್ರಮುಖ ಪಾತ್ರ ವಹಿಸುತ್ತವೆ. ಈ ಎರಡು ವಿಧಾನದಿಂದಲೂ ರಕ್ತದಲ್ಲಿ ಸಕ್ಕರೆ ಪ್ರಮಾಣ ಕಡಿಮೆಯಾಗದಿದ್ದಲ್ಲಿ ಮಾತ್ರ ರೂಪದ ಔಷಧಿಗಳನ್ನು ಉಪಯೋಗಿಸಬೇಕಾಗುತ್ತದೆ. ಕೆಲವು ಬಾರಿ ಮಾತ್ರೆಗಳೂ ಪರಿಣಾಮಕಾರಿಯಾಗದಿದ್ದಲ್ಲಿ ಇನ್ಸುಲಿನ್‌ನ ಅಗತ್ಯತೆ ಇರುತ್ತದೆ. ರಕ್ತದಲ್ಲಿನ ಸಕ್ಕರೆ ಪ್ರಮಾಣವನ್ನು ಕಡಿಮೆ ಮಾಡುವುದು ಎಲ್ಲಾ ಚಿಕಿತ್ಸೆಗಳ ಉದ್ದೇಶ. ರಕ್ತದಲ್ಲಿ ಸಕ್ಕರೆಯ ಪ್ರಮಾಣ ಹೆಚ್ಚಾದಾಗ, ದೇಹದ ಅನೇಕ ಅಂಗಾಂಗಗಳು (ಕಣ್ಣು, ಮೂತ್ರಪಿಂಡ, ನರಗಳು) ಘಾಸಿಗೊಳ್ಳುತ್ತವೆ ಹಾಗೂ ಅನೇಕ ತೊಂದರೆಗಳನ್ನು ಉಂಟುಮಾಡುತ್ತವೆ. ರಕ್ತದಲ್ಲಿ ಸಕ್ಕರೆ ಪ್ರಮಾಣವನ್ನು ಹತೋಟಿಯಲ್ಲಿಟ್ಟರೂ, ಈ ಅಂಗಾಂಗಗಳು ಕಾಲಕ್ರಮೇಣ ಘಾಸಿಗೊಳ್ಳುವ ಸಾಧ್ಯತೆ ಇದೆ. ಅಂದಮೇಲೆ, ಸಕ್ಕರೆಯ ಅಂಶವನ್ನು ಹತೋಟಿಯಲ್ಲಿ ಇಡದಿದ್ದರೆ ಈ ತೊಂದರೆಗಳು ಖಂಡಿತ ಉಂಟಾಗುತ್ತವೆ ! ಕೆಲವರಿಗೆ ಈ ಅಂಗಾಂಗಗಳು ಕೂಡಲೇ ಘಾಸಿಗೊಂಡರೆ, ಇನ್ನು ಕೆಲವರಿಗೆ ಬಹಳ ವರ್ಷಗಳ ನಂತರ ಘಾಸಿಗೊಳ್ಳುತ್ತವೆ. ಈ ಅಂಗಾಂಗಗಳು ಘಾಸಿಗೊಳ್ಳದಿದ್ದಾಗ ಸಕ್ಕರೆ ಕಾಯಿಲೆಯ ರೋಗಿ ಸಾಮಾನ್ಯರಂತೆ ಜೀವನ ನಡೆಸಬಹುದಾಗಿದೆ.

**"ಒಂದು ರೋಗವೇ ಅಲ್ಲ" ಎನ್ನುವ ಮಾತನ್ನು ನಂಬುವುದಾದರೂ ಹೇಗೆ ?** ರಕ್ತದಲ್ಲಿ ಸಕ್ಕರೆ ಪ್ರಮಾಣ ಹೆಚ್ಚಿದ್ದರೂ ಯಾವ ರೋಗದ ಚಿಹ್ನೆಯೂ ಇರದೆ ಆರೋಗ್ಯವಂತನಾಗಿರಲು ಸಾಧ್ಯ. ಆ ವ್ಯಕ್ತಿಗೆ ರೋಗವೇ ಇಲ್ಲ ಎಂದು ಹೇಳಲಾಗದು. ಕಾಲಕ್ರಮೇಣ ರೋಗ ತೀವ್ರವಾಗಿ ಅನೇಕ ತೊಂದರೆಗಳನ್ನು ಅನುಭವಿಸಬಹುದಾಗಿದೆ. ಆದ್ದರಿಂದ ರೋಗದ ನಿರ್ಧಾರ ರೋಗ ಚಿಹ್ನೆಯಲ್ಲ. ಅನೇಕ ಬಾರಿಯ ಮೂತ್ರ ಪರೀಕ್ಷೆಯೂ ರೋಗವನ್ನು ಖಚಿತಪಡಿಸಲಾರದು. ರೋಗಿಯ ರಕ್ತದಲ್ಲಿ ಸಕ್ಕರೆ ಪ್ರಮಾಣ ಹೆಚ್ಚಿದ್ದು ಸಕ್ಕರೆ ಕಾಯಿಲೆ ಇದೆಯೆಂದು ನಿರ್ಧಾರವಾದಾಗ ರೋಗದ ಬಗ್ಗೆ ಸರಿಯಾದ ತಿಳಿವಳಿಕೆ ಕೊಡುವುದರ ಬದಲು ರೋಗವಿಲ್ಲವೆಂದು ನಂಬಿಸುವುದು ಅಪಾಯಕರ.

**ಎರಡನೇ ಪ್ರಕಾರದ ಮಧುಮೇಹದಿಂದ ಬಳಲುತ್ತಿದ್ದು ಸಕ್ಕರೆ, ಬೆಲ್ಲ, ಸಿಹಿಪದಾರ್ಥ ಸೇವನೆ, ಎಲ್ಲ ಪ್ರಕಾರದ ಹಣ್ಣುಗಳನ್ನು ಹೆಚ್ಚಾಗಿ ತಿನ್ನುವುದು ಆಗಾಗ್ಗೆ ರಕ್ತವನ್ನಾಗಲೀ, ಮೂತ್ರವನ್ನಾಗಲೀ ಪರೀಕ್ಷಿಸದಿರುವುದು ಯಾವುದೇ ತರಹದ ತೊಡಕುಗಳಿಗೆ ಗುರಿಯಾಗದೇ ಇರುವುದಾಗಿ ಲೇಖಕರು ಬರೆದಿದ್ದಾರೆ.**

Every rule has an exception ಎಂದು ಲೇಖಕರ ಪರಿಸ್ಥಿತಿಯನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ರಕ್ತದಲ್ಲಿ ಸಕ್ಕರೆ ಪ್ರಮಾಣ ಹೆಚ್ಚಿದ್ದಲ್ಲಿ (೧೫೦ ಮಿ.ಗ್ರಾಂ.) ಕ್ರಮೇಣ ಅಂಗಾಂಗಗಳು ಘಾಸಿಗೊಳ್ಳುತ್ತವೆ. ಜೊತೆಗೆ ಅನೇಕ ತೊಂದರೆಗಳು ಕಾಲಕ್ರಮೇಣ ಉಂಟಾಗಲು ಸಾಧ್ಯ. ಇದನ್ನು ನಿರಾಕರಿಸುವುದು ಸಾಧ್ಯವಿಲ್ಲ. ಒಂದು ನಿರ್ದಿಷ್ಟ ಘಟ್ಟದಲ್ಲಿ ತೊಂದರೆಗಳು ಇಲ್ಲದೆ ಇರಬಹುದು. ಆದರೆ ಅನಂತರ ಉಂಟಾಗುವುದಿಲ್ಲವೆಂದು ಹೇಳಲಾಗದು. ಸಕ್ಕರೆ ಕಾಯಿಲೆ ಒಂದು ಹೆಚ್ಚುತ್ತಲೇ ಹೋಗುವ ಕಾಯಿಲೆ ಎಂದು ಹೇಳಬಹುದು. ಆದರೆ ಅದನ್ನು ನಿಯಂತ್ರಣದಲ್ಲಿ ಇಡಲು ಸಾಧ್ಯ.

ನನಗೆ ವಿಚಿತ್ರವೆನಿಸುವ ಸಂಗತಿ, ಲೇಖಕನಿಗೆ ರೋಗ ಚಿಹ್ನೆಗಳಿಲ್ಲವೆಂಬುದಲ್ಲ ಆದರೆ ಒಬ್ಬ ವ್ಯಕ್ತಿಯ ಅನುಭವದಿಂದ ವೈಜ್ಞಾನಿಕ ಸಿದ್ಧಾಂತವನ್ನು ಹೇಗೆ ರೂಪಿಸಲು ಸಾಧ್ಯ ಎಂಬುದು. ಇಂದು ವೈದ್ಯಕೀಯ ವಿಜ್ಞಾನದಲ್ಲಿ ರುಜುವಾತಾ ಗಿರುವ ಸತ್ಯಗಳು ಲಕ್ಷಾಂತರ ರೋಗಿಗಳ ರೋಗ ವಿಶ್ಲೇಷಣೆಯನ್ನು ಆಧರಿಸಿದವು.

**ಭಾರತೀಯರಿಗೆ ಪಾಶ್ಚಾತ್ಯರಿಗಿಂತ ನೂರಾರು ವರ್ಷಗಳ ಮೊದಲಲ್ಲೇ ಈ ತೊಂದರೆ ಸಕ್ಕರೆಗೆ ಸಂಬಂಧಿಸಿದೆ ಎಂಬುದು ತಿಳಿದಿತ್ತು.**

ಇಂದು ಸಕ್ಕರೆ ಕಾಯಿಲೆಯ ಬಗ್ಗೆ ಇರುವ ಮಾಹಿತಿ ಜಗತ್ತಿನಾದ್ಯಂತ ನಡೆದ ಸಂಶೋಧನೆಗಳ ಫಲ ಎಂದು ಹೇಳಬಹುದಾಗಿದೆ. ಅದರಲ್ಲೂ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲೇ ಈ ಸಂಶೋಧನೆಗಳು ಹೆಚ್ಚಿನ ಪ್ರಮಾಣದಲ್ಲಿ ನಡೆದಿವೆ ಎಂಬುದನ್ನು ಅಲ್ಲಗಳೆಯುವಂತಿಲ್ಲ.

**"ಆದರೆ ಅದು ಇಂದು ನನಗೆ ರೋಗವೆಂದು ಕಾಣುತ್ತಿಲ್ಲ. ಅದೊಂದು ರೋಗದ ಹೊಂದಾಣಿಕೆ ಎನಿಸುತ್ತದೆ."**

ಇಂದು ವೈಜ್ಞಾನಿಕ ಸತ್ಯಗಳನ್ನು ಪ್ರಶ್ನಿಸಬಹುದಾಗಿದೆ. ಆದರೆ ಅದನ್ನು ಕೇವಲ ನನ್ನ ಅನಿಸಿಕೆ, ನನ್ನ ಮತ ಎಂದು ಹೇಳಿದರೆ ಸಿದ್ಧವಾಗುವುದಿಲ್ಲ. ಜನಪ್ರಿಯ ಪತ್ರಿಕೆಗಳಲ್ಲಿ ಅದರಲ್ಲೂ ಒಬ್ಬ ಜನಪ್ರಿಯ ವೈದ್ಯ ತನ್ನ ಅನಿಸಿಕೆಗಳನ್ನು (ರುಜುವಾಗದ) ಬರೆದರೆ ಅದರ ತಪ್ಪು ಉಪಯೋಗವಾಗುವ ಸಾಧ್ಯತೆ ಇದೆ. ಉದಾ: ಎರಡನೇ ಪ್ರಕಾರದ ಮಧುಮೇಹದ ರೋಗಿಗಳು ಆಹಾರ ಪಥ್ಯವನ್ನು ಹಠಾತ್ತನೆ ನಿಲ್ಲಿಸಬಹುದಾಗಿದೆ.

**ಎರಡನೇ ಪ್ರಕಾರದ ಡಯಾಬಿಟಿಸ್ ಒಂದು ರೋಗವೆಂದು ಹೇಳಲು ಕೆಲವು ತೊಡಕುಗಳನ್ನು ವೈಭವೀಕರಿಸುತ್ತಾರೆ.**

ಎರಡನೇ ಪ್ರಕಾರದ ಡಯಾಬಿಟಿಸ್ ರೋಗಿಗಳು ಅನುಭವಿಸಿದ ಅನೇಕ ಅಡ್ಡ ಪರಿಣಾಮಗಳನ್ನು ವೈಭವೀಕರಣ ಎಂದು ಸುಲಭವಾಗಿ ಹೇಳಲಾಗದು. ವೈಜ್ಞಾನಿಕ ಯುಗದಲ್ಲಿ ರೋಗವನ್ನು ವೈಭವೀಕರಿಸುವ ಅಗತ್ಯತೆ ವಿಜ್ಞಾನಿಗಳಿಗಂತೂ ಇಲ್ಲವೆಂದು ಹೇಳಬಹುದಾಗಿದೆ. ವ್ಯಾಪಾರೀಕರಣದ ಇಂದಿನ ದಿನಗಳಲ್ಲಿ ಕೆಲವು ರೋಗಗಳು ವೈದ್ಯರಿಂದ ವೈಭವೀಕರಿಸಲ್ಪಡುತ್ತವೆ. ಉದಾ: ಕಡಿಮೆ ರಕ್ತದೊತ್ತಡ. ಆದರೆ ಇದು ಡಯಾಬಿಟಿಸ್‌ನ ಅಡ್ಡಪರಿಣಾಮಗಳಿಗೆ ಅನ್ವಯಿಸುವುದಿಲ್ಲ.

ಕೆಲವು ಬಾರಿ ಔಷಧಿ ಕಂಪನಿಗಳು ತಮ್ಮ ಔಷಧಿಗಳನ್ನು ಮಾರಲು ಈ ತಂತ್ರವನ್ನು ಹೂಡಬಹುದಾಗಿದೆ. ಉದಾ: Liver cure, ವೈದ್ಯರೂ ಇವನ್ನು ಬಳಸಿ ಲಿವರ್ ಕ್ಯೂರ್ ಹಾಗೂ ಕಾಯಿಲೆಗಳನ್ನು ವೈಭವೀಕರಿಸುತ್ತಾರೆ. ಆದರೆ ಈ ವಿಷಯಗಳು ಗಂಭೀರ ವೈಜ್ಞಾನಿಕ ಚರ್ಚೆಗೆ ಬರುವುದಿಲ್ಲ.

**ಡಯಾಬಿಟಿಸ್ ತೊಂದರೆಯಲ್ಲಿ ರಕ್ತದ ಗ್ಲೂಕೋಸ್ ಯಾಕೆ ಹೆಚ್ಚುತ್ತದೆ ?**

ಲೇಖನದಲ್ಲಿ ರಕ್ತದಲ್ಲಿನ ಗ್ಲೂಕೋಸ್ ಬಗ್ಗೆ ಗೊಂದಲಮಯ ವಿವರಣೆಗಳನ್ನು ಕೊಡಲಾಗಿದೆ. ಉದಾ: ೧. ಸಿಹಿ ಪದಾರ್ಥಗಳನ್ನು ತಿಂದರೆ ಡಯಾಬಿಟಿಸ್ ಹೆಚ್ಚುತ್ತದೆ ಎಂಬ ಸಂಗತಿ ಹುರುಳಿಲ್ಲದ್ದು. ೨. ಮಾನಸಿಕ ಒತ್ತಡದಿಂದ ಉಂಟಾಗುವ ಪರಿಣಾಮವೆಂದರೆ ಹೆಚ್ಚಿನ ಗ್ಲೂಕೋಸ್‌ನ ಅವಶ್ಯಕತೆ. ೩. ಮೆದುಳು ತನ್ನದೇ ಆದ ವಿಧಾನದಿಂದ ರಕ್ತದ ಗ್ಲೂಕೋಸ್ ಪ್ರಮಾಣವನ್ನು ಹೆಚ್ಚಿಸುತ್ತದೆ. ತನಗೆ ಬೇಕಾದ ಪ್ರಮಾಣದಷ್ಟು ಹೆಚ್ಚಿಸುತ್ತದೆ.

ಮಾನಸಿಕ ಒತ್ತಡದಿಂದ ಸ್ವಲ್ಪಮಟ್ಟಿಗೆ ರಕ್ತದಲ್ಲಿ ಸಕ್ಕರೆ ಪ್ರಮಾಣ ಹೆಚ್ಚಬಹುದು. ಆದರೆ ರಕ್ತದಲ್ಲಿ ಸಕ್ಕರೆ ಪ್ರಮಾಣ ಹೆಚ್ಚಿದ ಎಲ್ಲ ವ್ಯಕ್ತಿಗಳಿಗೆ ಧ್ಯಾನಯೋಗದಿಂದ ಸಕ್ಕರೆ ಪ್ರಮಾಣ ಕಡಿಮೆ ಆಗುತ್ತದೆಂದು ಹೇಳಲಾಗದು. ಹೆಚ್ಚಿನ ರಕ್ತದ ಸಕ್ಕರೆ ಪ್ರಮಾಣಕ್ಕೆ ಕಾರಣ ಕಂಡುಹಿಡಿದು ಚಿಕಿತ್ಸೆ ಮಾಡಬೇಕಾಗುತ್ತದೆ.

ಮಾನಸಿಕ ಒತ್ತಡ ಕಡಿಮೆ ಮಾಡಲು ಧ್ಯಾನ, ಯೋಗ, ಪ್ರಯೋಜನವಾಗಬಹುದು.

**ಡಯಾಬಿಟಿಸ್ ತೊಂದರೆಯುಳ್ಳವರು ಅಕ್ಕಿಯನ್ನು ಧಾರಾಳವಾಗಿ ಸೇವಿಸಬಹುದು**

ಸಕ್ಕರೆ ಕಾಯಿಲೆಯಲ್ಲಿ ಅಕ್ಕಿ ಉಪಯೋಗ ನಿಷಿದ್ಧವಲ್ಲ. ಆದರೆ ಧಾರಾಳವಾಗಿ ಉಪಯೋಗಿಸುವಂತಿಲ್ಲ. ಸಕ್ಕರೆ, ಬೆಲ್ಲ, ಜೇನುತುಪ್ಪ, ಫಲಾಹಾರ ನಿಷಿದ್ಧ.

**ಅದೊಂದು ದೇಹಕ್ಕೆ ಅವಶ್ಯವಿದ್ದ ದೇಹ ಕ್ರಿಯಾ ಶಾಸ್ತ್ರದ ಬದಲಾವಣೆ ಎನಿಸುತ್ತದೆ.**

ವಿಜ್ಞಾನದಲ್ಲಿ ನನಗೆ ಎನಿಸುತ್ತದೆ ಎಂಬ ವಾದ ಅರ್ಥಹೀನವಾದುದು. ಎಲ್ಲವನ್ನೂ ಸಿದ್ಧಪಡಿಸಬೇಕಾಗುತ್ತದೆ.

**ಡಾ|| ಪ್ರಕಾಶ್ ಸಿ. ರಾವ್**
ಕ್ಲಿನಿಕ್ 'ಅಪರ್ಣ', ಮೊದಲನೇ ಮುಖ್ಯರಸ್ತೆ, ನಾಲ್ಕನೇ ಅಡ್ಡರಸ್ತೆ
ಯಶವಂತಪುರ, ಬೆಂಗಳೂರು




ಇದೇನು ಕೇಡಿನ ಸಮಾಚಾರ ಎಂದು ಬೇಸರ ಪಡಬೇಡಿ. ಒಳಿತು ಕೆಡುಕುಗಳು ಒಂದರೊಡನೊಂದು ತಳಕು ಹಾಕಿಕೊಂಡಿರುವುದು ನಿಮಗೆ ತಿಳಿಯದುದೇನಲ್ಲ. ಒಳಿತನ್ನು ನಾವು ಪಡೆಯಬೇಕಾದರೆ ಕೆಡಕನ್ನು ದೂರವಿಡ ಬೇಕಾಗುತ್ತದೆ. ಆದ್ದರಿಂದ ಕೇಡಿನ ರೂಪ ಲಕ್ಷಣಗಳ ಅರಿವು ನಮಗಿರ ಬೇಕಾಗುತ್ತದೆ. ಒಳಿತನ್ನು ಪಡೆಯುವ ಮೊದಲ ಹಂತ ಕೇಡು ಎಂದರೇನು, ಅದನ್ನು ಪರಿಹರಿಸುವ ವಿಧಾನವಾವುದು ಎಂಬಿತ್ಯಾದಿಗಳ ತಿಳಿವಳಿಕೆಯಾಗಿದೆ.

ಅತಿಯಾಸೆ ಗತಿಗೇಡು ಎಂಬ ನಾಣ್ಣುಡಿಯನ್ನು ನಾವು ಚಿಕ್ಕವರಿರುವಾಗಲೇ ಕೇಳಿದ್ದೇವೆ. ಆಸೆ ಹಂಬಲಗಳು ಎಲ್ಲರಿಗೂ ಸಾಮಾನ್ಯವಾಗಿರತಕ್ಕವು. ಆದರೆ ಅವುಗಳಿಗೆ ಇತಿಮಿತಿಗಳಿರಬೇಕು. ಯಾರು ಏನನ್ನು ಬಯಸಬೇಕು, ಆ ಬಯಕೆಗೆ ತಕ್ಕ ಅರ್ಹತೆ ತಮಗಿದೆಯೇ ಎಂದು ತಮ್ಮೊಳಗೇ ಪ್ರಶ್ನಿಸಿಕೊಳ್ಳಬೇಕು. ಇಲ್ಲವಾದರೆ ದುರಾಸೆ ದುಃಖಕ್ಕೆ ಮೂಲವಾಗಬಹುದು. ಭಗವಾನ್ ಬುದ್ಧ ಎರಡೂವರೆ ಸಾವಿರ ವರ್ಷಗಳ ಹಿಂದೆಯೇ 'ಆಸೆಯೇ ದುಃಖದ ಮೂಲ' ಎಂದು ಸಾರಲಿಲ್ಲವೇ ? ರಾಜಕುಮಾರನಾಗಿ ಜನಿಸಿದ ಅವನಿಗೆ ಸುಖ ಭೋಗಗಳು ಹುಟ್ಟಿನಿಂದಲೇ ಬಂದಿದ್ದುವು. ಆದರೆ ಅವನು ಅವನ್ನು ತ್ಯಜಿಸಿ ಕಟ್ಟುನಿಟ್ಟಾದ ವೈರಾಗ್ಯ ಜೀವನವನ್ನು ನಡೆಸಿದ. ಉಪವಾಸ ವನವಾಸಗಳಿಂದ ಅವನ ದೇಹ ಕೃಶವಾಗಿ ಎಲುಬಿನ ಹಂದರವಾಯಿತು. ಅನಂತರ ಜ್ಞಾನೋದಯದ ಬೆಳಕನ್ನು ಕಂಡ ಅವನು ತ್ಯಾಗ ಮತ್ತು ಭೋಗಗಳ ಅತಿರೇಕಗಳನ್ನು ನಿರಾಕರಿಸಿ ಒಂದು ಮಧ್ಯಮ ಮಾರ್ಗವನ್ನು ಕಂಡುಕೊಂಡ. ಅದನ್ನೇ ಆಧುನಿಕರು ಸುವರ್ಣ ಮಾಧ್ಯಮ ಎಂದು ಕರೆಯುತ್ತಾರೆ.




ಕೇಡು ಮಾನವನನ್ನು ತನ್ನ ಬಲೆಯಲ್ಲಿ ಬೀಳಿಸಲು ಸದಾ ಹೊಂಚುಹಾಕುತ್ತಿರುತ್ತದೆ. ಸರ್ವಜ್ಞ ಕವಿ ಹೇಳುವಂತೆ 'ಕೇಡೊಂದು ಬರುವಾಗ ಕೂಡುವುದು ದುರ್ಬುದ್ಧಿ'. ಸದಾ ಸನ್ಮಾರ್ಗದಲ್ಲಿ ನಡೆಯುತ್ತಿದ್ದ ಧರ್ಮರಾಯನಿಗೆ ಜೂಜಾಟವಾಡಲು ಮನಸ್ಸಾದರೂ ಹೇಗೆ ಬಂತು ? ಆತಿಥೇಯರು ಜೂಜಾಡಲು ಕರೆದಾಗ ಒಲ್ಲೆನ್ನುವುದು ಶಿಷ್ಟಾಚಾರವಲ್ಲ ಎಂಬುದನ್ನು ಒಪ್ಪಿಕೊಳ್ಳೋಣ. ಆದರೆ ಆ ಜೂಜಿನಲ್ಲಿ ಏನನ್ನು ಪಣವಾಗಿ ಒಡ್ಡಬೇಕು ಏನನ್ನು ಒಡ್ಡಬಾರದು ಎಂಬ ಪರಿಜ್ಞಾನವನ್ನಾದರೂ ಉಳಿಸಿಕೊಳ್ಳಬೇಕಾಗಿತ್ತು ಅವನು. ತನಗಷ್ಟೇ ಅಲ್ಲ, ತನ್ನ ನಾಲ್ವರು ತಮ್ಮಂದಿರಿಗೆ ಮಡದಿಯಾದ ದ್ರೌಪದಿಯನ್ನು ಜೂಜಾಟದಲ್ಲಿ ಪಣವಾಗಿ ಬಳಸುವುದೇ ? ಅದೂ ತನ್ನನ್ನು ಮತ್ತು ತನ್ನ ಸೋದರರನ್ನು ಜೂಜಿನಲ್ಲಿ ಸೋತು ತಾನೇ ಗೆದ್ದವನ ಗುಲಾಮನಾಗಿರುವಾಗ ಹೆಂಡತಿಯನ್ನು ಪಣವಾಗಿ ಒಡ್ಡುವ ಅಧಿಕಾರ ತನಗಿಲ್ಲವೆಂಬ ವಿವೇಕವಾದರೂ ಅವನಿಗಿರಬೇಡವೇ ? ಅವಿವೇಕದ ಸರಮಾಲೆಯೇ ಅವನನ್ನು ಕೇಡಿನತ್ತ ಕರೆದೊಯ್ಯುತ್ತದೆ.

ಶ್ರೀರಾಮನು ತನ್ನ ತಂದೆಯ ಮಾತನ್ನು ಶಿರಸಾವಹಿಸಿ ಕಾಡಿಗೆ ನಡೆದ. ಅವನ ಮಡದಿ ಸೀತೆ ರಾಮನನ್ನು ಹಿಂಬಾಲಿಸಿದಳು. ಅಂತಃಪುರದ ಭೋಗ ಭಾಗ್ಯಗಳಿಗಿಂತ ವನವಾಸದಲ್ಲಿದ್ದರೂ ಪತಿಯೊಡನಿರುವುದು ಮಿಗಿಲೆಂದು ಅವಳೂ ಬಗೆದಳು. ಅಂತಹ ಸಂಯಮಶೀಲಳಾದ ಸೀತೆಗೆ ಬಣ್ಣದ ಜಿಂಕೆಯ ಮೋಹವೇಕೆ ತಲೆದೋರಿತೋ ತಿಳಿಯಲಾಗದು. ಅದನ್ನು ಪಡೆಯಲೇಬೇಕೆಂದು ಹಂಬಲಿಸಿದಳು. ರಾಮನಿಗೆ ಮೊರೆ ಇಟ್ಟಳು. ಅದರ ಪರಿಣಾಮ ಏನಾಯಿತೆಂದು ನಿಮಗೆ ಗೊತ್ತು. ರಾಮನು ಆ ಬಂಗಾರದ ಜಿಂಕೆಯ ಬೆನ್ನುಹತ್ತಿ ಸೀತೆಯಿಂದ ದೂರ ಸಾಗಿದ. ಕೊನೆಗೆ ತಾಳ್ಮೆ ಕಳೆದುಕೊಂಡ ಅವನು ಜಿಂಕೆಗೆ ಬಾಣ ಪ್ರಯೋಗ ಮಾಡಿದಾಗ ಜಿಂಕೆಯ ವೇಷದಲ್ಲಿದ್ದ ಮಾರೀಚನೆಂಬ ರಾಕ್ಷಸ ಸತ್ತುಬಿದ್ದ. ಆದರೆ ಅವನು ಸಾಯುವ ಮುನ್ನ 'ಓ ಸೀತಾ, ಓ ಲಕ್ಷ್ಮಣಾ' ಎಂದು ಆರ್ತನಾಗಿ ಕೂಗಿಕೊಂಡ. ಅದರ ಪರಿಣಾಮವಾಗಿ ಗಾಬರಿಗೊಂಡ ಸೀತೆ ರಾಮನ ರಕ್ಷಣೆಗೆಂದು ಲಕ್ಷ್ಮಣನನ್ನು ಬಲವಂತವಾಗಿ ಅಟ್ಟಿದಳು. ಸಮಯ ಕಾಯುತ್ತಿದ್ದ ರಾವಣ ಸಂನ್ಯಾಸಿ ಸೀತೆಯನ್ನು ಕದ್ದೊಯ್ದು ಸೆರೆಯಲ್ಲಿಟ್ಟ. ಸಂಯಮಶೀಲಳಾದ ಸೀತೆಗೆ ಆ ಮಾಯಾ ಮೃಗದ ಮೇಲೆ ಹಂಬಲವೇಕಾಗಬೇಕು ? ಕೇಡುಗಾಲಕ್ಕೆ ಎಂತೆಂತಹ ಬಯಕೆಗಳು ತಲೆಯಲ್ಲಿ ತೂರುತ್ತವೆ ಎಂದು ಕಂಡವರಾರು ?

ನಾವು ಮಾತನಾಡುವಾಗ ಒಳ್ಳೆಯದು, ಕೆಟ್ಟದ್ದು ಎಂಬ ಪದಗಳನ್ನು ಧಾರಾಳವಾಗಿ ಬಳಸುತ್ತೇವೆ. ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು ಹಾಗೂ ಅದು ಏಕೆ ಒಳ್ಳೆಯದು ಏಕೆ ಕೆಟ್ಟದ್ದು ಎಂದು ತಿಳಿದುಕೊಳ್ಳುವ ಅಗತ್ಯವಿದೆ. ಮಾನವನ ನಡತೆ ಸರಿಯಾದುದು ಎಂದು ಅಂಗೀಕೃತವಾಗಬೇಕಾದರೆ ಅದು ಸಮಾಜದ ಒಂದು ಸ್ವೀಕೃತ ನೈತಿಕ ಮಾನದಂಡಕ್ಕೆ ಅನುಗುಣವಾಗಬೇಕಾಗುತ್ತದೆ. ಅದು ತನಗೆ ಮತ್ತು ಇತರರಿಗೆ ಸತ್ಪರಿಣಾಮವನ್ನು ಬೀರುವಂತಿರಬೇಕಾಗುತ್ತದೆ.

ಕೆಟ್ಟ ಅಭ್ಯಾಸಗಳು ವ್ಯಕ್ತಿಗೆ ಗೊತ್ತಿಲ್ಲದೆ ಅವನಲ್ಲಿ ರೂಢಿಯಾಗಿಬಿಡುತ್ತವೆ. ಆಮೇಲೆ ಅವುಗಳನ್ನು ನಿಯಂತ್ರಿಸುವುದು ಅವನಿಗೇ ಕಷ್ಟವಾಗಬಹುದು. ಉದಾಹರಣೆಗೆ ವೈದ್ಯರು ನೋವು ನಿವಾರಣೆಗೆಂದು ನೀಡುವ ಔಷಧಿಯನ್ನು ಸೇವಿಸುವ ವ್ಯಕ್ತಿಯು ಅದನ್ನು ರೂಢಿ ಮಾಡಿಕೊಂಡ ನಂತರ ಅದರ ಅಗತ್ಯವಿಲ್ಲದಾಗಲೂ ಅದನ್ನು ಸೇವಿಸುವ ಅಭ್ಯಾಸವನ್ನು ಮುಂದುವರಿಸಿಕೊಂಡು ಹೋಗುವುದುಂಟು. ಅದು ಅವನ ಮೇಲೆ ಅಂತಹ ಹಿಡಿತವನ್ನು ಸಾಧಿಸಿರುತ್ತದೆ. ಮಾನವನು ಮಾದಕ ವಸ್ತುಗಳ ಚಟಗಳಿಗೆ ಬಲಿಯಾಗುವುದು ಹೀಗೆ.

ಬಹು ಪ್ರಾಚೀನ ಕಾಲದಿಂದ ಮಾನವ ಸಮಾಜ ತನ್ನ ಉಳಿವು ಮತ್ತು ಬೆಳವಣಿಗೆಗಳಿಗಾಗಿ ಕೆಲವು ಸದಾಚಾರಗಳನ್ನು, ನೀತಿ ನಿಯಮಗಳನ್ನು ಪೋಷಿಸಿಕೊಂಡು ಬಂದಿದೆ. ಅದಕ್ಕೆ ವಿರುದ್ಧವಾಗಿ ನಡೆದುಕೊಳ್ಳುವುದು ಕೇಡಿಗೆ ಕಾರಣವಾಗುತ್ತದೆ ಎಂದು ಋಷಿಮುನಿಗಳು ಹೇಳುತ್ತಾ ಬಂದಿದ್ದಾರೆ. ಸತ್ಯ, ಶುದ್ಧತೆ, ಸಂಯಮ, ಇಂದ್ರಿಯ ನಿಗ್ರಹ, ಅಪರಿಗ್ರಹ, ವಿವೇಕ, ಅಹಿಂಸೆ, ಕ್ಷಮೆ, ತನ್ನಂತೆ ಪರರನ್ನು ಬಗೆವುದು ಇತ್ಯಾದಿಗಳನ್ನು ಸದ್ಗುಣಗಳೆಂದು ಪರಿಗಣಿಸಲಾಗಿದೆ. ಅದಕ್ಕೆ ವಿರುದ್ಧವಾಗಿ ಸುಳ್ಳು ಹೇಳುವುದು, ಕಳ್ಳತನ, ಕೊಲೆ, ಹಿಂಸೆ, ಅತ್ಯಾಚಾರ, ಜೂಜು, ಕುಡಿತ ಮುಂತಾದ ವರ್ತನೆಗಳು ಕೇಡಿಗೆ ಕಾರಣಗಳು ಎಂದು ತಿಳಿಯಲಾಗಿದೆ.

ಹನ್ನೆರಡನೆಯ ಶತಮಾನದ ಬಸವಣ್ಣ ಸದಾಚಾರದ ಸಪ್ತಸೂತ್ರಗಳನ್ನು ''ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯ ಪಡಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ, ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗ ಶುದ್ಧಿ'' ಎಂದು ಪಟ್ಟಿ ಮಾಡಿ ಹೇಳಿದ್ದಾನೆ.

ಕೇಡಿನ ಮೂಲ ಅನೇಕ ವೇಳೆ ನಮ್ಮ ಆಚರಣೆಗಳನ್ನೇ ಅವಲಂಬಿಸಿದೆ. ನಾವು ಎಷ್ಟೆಲ್ಲಾ ಎಚ್ಚರದಿಂದಿದ್ದರೂ ಒಮ್ಮೊಮ್ಮೆ ಕಷ್ಟಕಾರ್ಪಣ್ಯಗಳು ನಮ್ಮನ್ನು ಕಾಡಿಸುತ್ತವೆ. ''ಬಾಳ್ಕೆಯಲಿ ನೂರಾರು ತೊಡಕು ತಿಣುಕುಗಳುಂಟು. ಕೇಳ್ಕೆ ಮಾಳ್ಕೆಗಳಿಗವು ಜಗ್ಗವೊಂದಿನಿಸುಂ, ಗೋಳ್ಕರೆದರೇನು ಫಲ, ಗುದ್ದಾಡಲೇನು ಫಲ, ಪಲ್ಕಿರಿದು ತಾಳಿಕೊಳ್ಳೊ-ಮಂಕುತಿಮ್ಮ'' ಎಂದು ಡಿ.ವಿ.ಜಿ.ಯವರ ಮಾತಿನಂತೆ ಸಹಿಸಿಕೊಳ್ಳಬೇಕಾಗುತ್ತದೆ. ಕೇಡಿನ ಬಗ್ಗೆ ಭೀತರಾಗದೆ ಸಹನೆಯಿಂದ ಅದನ್ನು ನಾವು ಎದುರಿಸಲು ಸಿದ್ಧರಾಗೋಣ.

ಬಿ. ವಿ. ವೀರಭದ್ರಪ್ಪ
ಬಿ. ೧೮, ವಿದ್ಯಾನಗರ, ದಾವಣಗೆರೆ-೫೭೭ ೦೦೫

ಅದ್ಭುತಗಳಿರುವುದು ಸೃಷ್ಟಿಯಲ್ಲಿ; ಆದರೆ, ದೇವರ ಅಸ್ತಿತ್ವವನ್ನು ಸಾಬೀತುಗೊಳಿಸಲು ಅಲ್ಲ. - *ಬೇಕನ್*

ಸುಗುಣಿಯನ್ನು ಕಂಡಾಗ ಅವನನ್ನು ಅನುಕರಿಸಲು ಯತ್ನಿಸು; ದುರ್ಗುಣಿಯನ್ನು ಕಂಡಾಗ ಅವನಲ್ಲಿರುವ ದುರ್ಗುಣಗಳಲ್ಲಿ ಯಾವುದು ನಿನ್ನಲ್ಲಿರಬಹುದು ಎಂಬುದನ್ನು ಪರೀಕ್ಷಿಸಿ ನೋಡು. -*ಕನ್‌ಫ್ಯೂಷಿಯಸ್*

ಭೂತಕಾಲದ ನೆನಪು ಮನುಷ್ಯನನ್ನು ಬುದ್ಧಿವಂತನನ್ನಾಗಿಸದು. ಆದರೆ ಭವಿಷತ್ಕಾಲದ ಬಗೆಗಿನ ಚಿಂತೆ ಅವನನ್ನು ಬುದ್ಧಿವಂತನನ್ನಾಗಿಸಬಲ್ಲುದು. -*ಜಾರ್ಜ್ ಬರ್ನಾಡ್ ಷಾ*

HOSATHU Kannada Monthly
RNI Regn. No. KARKAN/1999/614 REGD. CPMG / KA / BGE – 7 / 2002 Licenced to post without prepayment. Licence No. WPP-14



Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore-560 058 and Published by him for Navakarnataka Publications (P) Ltd., Embassy Centre, Crescent Road, P. B. 5159, ...